# ರುಕ್ಮಿಣಿ

ಅ. ನ. ಕೃಷ್ಣರಾಯ

ವಾಹಿನಿ ಪ್ರಕಾಶನ
ಜಯಚಾಮರಾಜ ರಸ್ತೆ, ಬೆಂಗಳೂರು-೨

# ಮುನ್ನುಡಿ

ಗೃಹಲಕ್ಷ್ಮಿ"ಯಲ್ಲಿ ಆರಂಭವಾಗಿ, ಒಂದು ಘಟ್ಟ ಮುಟ್ಟಿದ
...ಣಿ "ಯಲ್ಲಿ ಮುಕ್ತಾಯಗೊಂಡಿದೆ.

...ವನದಲ್ಲಿ ತಳೆದ ಉದಾತ್ತ ಧ್ಯೇಯಧೋರಣೆ
...ಂಬರಿಯಲ್ಲಿ ವಿಸ್ತರಿಸಿದ್ದೇನೆ. ಹಲವಾರು ವಿಪತ್ತು
...ಗಳು ಬಂದಾಗಲೂ ಅವಳು ಧೃತಿಗೆಡದೆ ತನ್ನ ಜೀವನ
... ಸಾಧಿಸಿದ ಬಗೆ ಅದ್ಭುತರಮ್ಯವಾಗಿದೆ. ವ್ಯಕ್ತಿ ತನ್ನ
...ದ ಗುರಿಯನ್ನು ಖಚಿತಪಡಿಸಿಕೊಳ್ಳಬೇಕು; ಆ ಗುರಿಯನ್ನು
...ರ್ವಕವಾಗಿ ಶ್ರಮಿಸಬೇಕು.

...ನು ನಿರ್ದೇಶಿಸಿಕೊಂಡಿದ್ದ ಗುರಿ ಮುಟ್ಟುತ್ತಾನೆಯೇ?
ಅವನು ಗುರಿ ಮುಟ್ಟುವುದು, ಬಿಡುವುದು ಗೌಣವಿಷಯ.
...ನ ಸಾಧನೆಯಲ್ಲಿ ಕಂಡುಬರುವ ಶ್ರದ್ಧೆ, ನಿಷ್ಠೆ, ತ್ಯಾಗ,
...ಯಮಾದಿ ಗುಣಗಳು ನಮಗೆ ಅತಿಮುಖ್ಯವಾದವು.

ಲೋಕವನ್ನು ತನ್ನ 'ಮೂಗಿನ ನೇರ'ಕ್ಕೆ ಮಾರ್ಪಡಿಸು
...ನೆಂಬ ವೃತ್ತಿ ಭಯಾನಕವಾದುದು. ವಿಶ್ವದ ಎಲ್ಲ ಸರ್ವಾಧಿಕಾರಿ
...ಗೂ ಈ ಪ್ರಸ್ಥಾನವೇ ಮಾತೃಸ್ಥಾನ. ವಿಶ್ವಸಮಸ್ಯೆಗಳನ್ನು ಭಾರತ
...ತ್ನ ಪ್ರತಿಭೆಗನುಗುಣವಾಗಿ ಬಿಡಿಸಲೆತ್ನಿಸಿದೆ. ಅನಂತಮುಖ
...ಗಿರುವ ಜೀವನವನ್ನು ಕಟ್ಟುವ ಸೂತ್ರ ಯಾವದು? ವಿಭಿನ್ನತೆಯ
...ಂದೆ ಸೂಕ್ಷ್ಮವಾಗಿ ಹರಿದಾಡುತ್ತಿರುವ ಏಕಸೂತ್ರ ಯಾವದು?
...ಂಬುದನ್ನು ಉಪನಿಷತಾಲದಿಂದ ಭಾರತ ಅರಸುತ್ತ ಬಂದಿದೆ.
...ಾರತದ ಈ ಸಮಕ್ - ದರ್ಶನದಲ್ಲಿ ಭಾರತದ ಕಲ್ಯಾಣ ಹಾಗೂ
...ಶ್ವದ ಕಲ್ಯಾಣ ಅಡಕವಾಗಿದೆಯೆಂದು ಈ ಲೇಖಕ ದೃಢವಾಗಿ

ನಂಬಿದ್ದಾನೆ. ಅವನ ನಂಬಿಕೆಯ ಸಾಕ್ಷಿಯಾಗಿ ಅವತರಿಸಿದ್ದಾಳೆ.

ರುಕ್ಮಿಣಿಯ ಜೀವನ ಒಂದು ದೃಷ್ಟಿಯಲ್ಲಿ [illegible]ದರ್ಶ ಒಂದು ದೃಷ್ಟಿಯಲ್ಲಿ ಸರ್ವಸಾಮಾನ್ಯ ಜೀವನ. [illegible]ದಶ ವೆಂದೊಡನೆಯೇ ಅದು ನಿತ್ಯ[illegible] ಪಾರಿಜಾತ ಎಂಬ ಕಲ್ಪನೆ ಬಂದು [illegible] ನೀರಸೋಪಚಾರ ಭಾವನೆ ಬೆಳೆಯುತ್ತದೆ. 'ರಾ[illegible] ಅವತಾರಿಗಳು. ಅವರ ಹಾಗೆ ನಾವಿರಲು [illegible] ಭಾವನೆಯೇ ನಮ್ಮ ವಿಚಾರದ ಅಪಗತಿಯ ಮೂ[illegible] ಅವತಾರಿಗಳಿಗೆ ಯಾವ ರೀತಿಯಲ್ಲಿಯೂ ಕಡಿಮೆಯಿಲ್ಲ[illegible] ಆದರ್ಶಜೀವನವನ್ನು ನಿತ್ಯಜೀವನದಲ್ಲಿ [illegible] ವೆಂಬುದನ್ನು ಸಿದ್ಧಮಾಡಿಕೊಟ್ಟಿದ್ದಾಳೆ. 'ನೋ[illegible] ಅರಿಯುವ ಹೃದಯ'ವಿದ್ದವರು ಕಣ್ತೆರೆದು, ಮನದೆರೆದು [illegible] ತಮ್ಮ ಮನೆಯಲ್ಲಿ ಒಬ್ಬ ರುಕ್ಮಿಣಿಯನ್ನು ಕಾಣಬಹುದು. ಮನೆಯ ಬೆಳಗೆ, ಏಳಿಗೆಗೆ, ಉದ್ಧಾರಕ್ಕೆ ಒಬ್ಬ ರುಕ್ಮಿಣಿಯ[illegible] ಜೀವನ ಕಾರಣವಾಗಿರುತ್ತದೆಂಬುದು ನಾನು ಅನುಭವ[illegible] ಮನಗಂಡಿರುವ ಸತ್ಯ. ಇಂದೂ – ನಾಳೆಯೂ ರುಕ್ಮಿಣಿಯ ಪರ[illegible] ಬೆಳೆಯುತ್ತ ಹೋಗಬೇಕು. ಮನೆ ಮಹಾಮನೆಯಾಗಬೇ[illegible] ಮನಸ್ಸು ಸಾಗರದಷ್ಟು ವಿಸ್ತಾರವಾಗಬೇಕು ಎನ್ನುವ ಆಕಾಂಕ್ಷೆ ನನ್ನ ಕ್ರತುಶಕ್ತಿ.

ರುಕ್ಮಿಣಿಯ ವಿಚಾರಮೂಸೆಯಲ್ಲಿ ನಮ್ಮ ಹಲವು ಸಮಸ್ಯೆ ಮೂಡಿರುವುದನ್ನು ಓದುಗರು ಗುರುತಿಸಬಹುದು. ಸಮಸ್ಯೆ ಸಮಸ್ಯೆಗಳಾಗಿಯೇ ಉಳಿದಿಲ್ಲ – ಅವುಗಳ ಪರಿಹಾರವೂ ಅಂತ ವಾಗಿದೆ. ಎಲ್ಲ ಸಮಸ್ಯೆಗಳನ್ನೂ ಬಿಡಿಸುವ ತೇಜಸ್ಸು ರುಕ್ಮಿಣಿಗೆ

ಬಂದಿತು? ಪ್ರಖರ ಪಾಂಡಿತ್ಯವೇ ಜೀವನದಾದ್ಯಂತವೆಂದು ನಂಬಿರುವವರಿಗೆ ರುಕ್ಮಿಣಿಯ ಸಂಪ್ರದಾಯಶರಣ ನುಡಿಗಳು ತೀರ ಸಾಮಾನ್ಯವಾಗಿ ಕಂಡುಬರಬಹುದು. ಈ ರಹಸ್ಯ ಭೇದಿಸಲಿಚ್ಛಿಸುವವರು ರುಕ್ಮಿಣಿಯಂತೆಯೇ 'ನಿರಕ್ಷರಕುಕ್ಷಿ'ಗಳಾದ ಭಗವಾನ್ ಶ್ರೀರಾಮಕೃಷ್ಣರ – ಭಗವತಿ ಶ್ರೀ ಶಾರದಾಮಣಿ ದೇವಿಯವರ ದಿವ್ಯಜೀವನವನ್ನು ಆಳವಾಗಿ ಅಭ್ಯಾಸ ಮಾಡಬೇಕು. ಉಪನಿಷತ್ತಿನ ಋಷಿ ಈ ಸತ್ಯವನ್ನು ...ರು ವರ್ಷಗಳ ಹಿಂದೆಯೇ ಸಾರಿದ್ದಾನೆ

" ನಾಯಮಾತ್ಮ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ ||
ಯಮೇ ವೈಷ ವೃಣುತೇ ತೇನ
ಲಭ್ಯಸ್ತಸ್ಯೈಷ ಆತ್ಮ ವಿವೃಣತೇ ತನೂಂ ಸ್ವಾಮ್ || "

...ಟ: ಆತ್ಮನನ್ನರಿತವನು ಸತ್ಯವನ್ನರಿಯುತ್ತಾನೆ. ಆತ್ಮವನ್ನರಿಯು... ಅವನು ಆತ್ಮನೇ ಆಗಿರಬೇಕು. ಪ್ರವಚನದಿಂದ, ಶ್ರವಣದಿಂದ ...ಮೇಧಾಶಕ್ತಿಯಿಂದ ಆತ್ಮನ ಅರಿವು ಲಭಿಸುವುದಿಲ್ಲ. ಇದೇ ರುಕ್ಮಿಣಿಯ ಜೀವನದ ಪರಮ ರಹಸ್ಯ.

ಕನ್ನಡ ನಾಡವರ ಉದಾತ್ತ ಸಂಸ್ಕೃತಿಗೆ '**ಗೃಹಲಕ್ಷ್ಮಿ**'ಗೆ ಅವರಿತ್ತ ಸ್ವಾಗತವೇ ಸಾಕ್ಷ್ಯವಾಗಿದೆ. ರುಕ್ಮಿಣಿಯ ತಪೋಜೀವನ ಪ್ರತಿ ಮನೆಯನ್ನೂ ಬೆಳಗಿದೆ. ಆಬಾಲವೃದ್ಧರ ಹೃದಯ ಸಿಂಹಾಸನದಲ್ಲಿ ಈ ತಾಯಿ ಪ್ರತಿಷ್ಠಿಸಿದ್ದಾಳೆ.

ರುಕ್ಮಿಣಿ ಬಾಳನ್ನು ಯಾವ ದಾರ್ಢ್ಯದಿಂದ, ನಿರ್ವಿಕಾರ ಬುದ್ಧಿಯಿಂದ ಎದುರಿಸಿದಳು, ಅದೇ ರೀತಿ ಸಾವನ್ನೆದುರಿಸಿದುದನ್ನು '**ರುಕ್ಮಿಣಿ**' ಕಾದಂಬರಿಯಲ್ಲಿ ಚಿತ್ರಿಸಿದ್ದೇನೆ. '**ಗೃಹಲಕ್ಷ್ಮಿ**' ಸರ್ವರಿಗೂ ಪ್ರಿಯವಾದಂತೆ '**ರುಕ್ಮಿಣಿ**'ಯೂ ಆದರಣೀಯವಾಗುವುದೆಂದು ನಾನು ನಂಬಿದ್ದೇನೆ.

ರುಕ್ಮಿಣಿಯ **ಬಾಳು**, ಬದುಕು, ಸಾವು **'ಗೃಹಲಕ್ಷ್ಮಿ' - 'ರುಕ್ಮಿಣಿ'** ಕಾದಂಬರಿಗಳಲ್ಲಿ ಮುಕ್ತಾಯವಾಗಿವೆ. ಆದರೆ ಇಲ್ಲಿಗೆ ರುಕ್ಮಿಣಿಯ ಕಥೆ ಮುಗಿದಿಲ್ಲ. ಹಿರಿಯ ಜೀವನದ ಪ್ರಭಾವ ಕ್ಷಣಭಂಗುರವಾದುದಲ್ಲ – ಅದು ಗಂಗಾಸಲಿಲದಂತೆ ಓತಪ್ರೋತವಾಗಿ ಹರಿಯುತ್ತಲೇ ಇರುತ್ತದೆ. ತಲೆಮಾರುಗಳು ಕಳೆದು ಹೋದರೂ ರುಕ್ಮಿಣಿ ಅಮರಳಾಗಿ ಉಳಿಯುತ್ತಾಳೆ. ರುಕ್ಮಿಣಿಯ ಅಮರ ಜೀವನ, ಅವಳ ತರುವಾಯ, ಅವಳ ಪೀಳಿಗೆಯ ಮೇಲೆ ಯಾವ ಪ್ರಭಾವವನ್ನು ಮೂಡಿತೆನ್ನುವುದನ್ನು ನನ್ನ ಮುಂದಿನ **'ತಾಯಿ – ಮಕ್ಕಳು'** ಕಾದಂಬರಿಯಲ್ಲಿ ಚಿತ್ರಿಸುತ್ತೇನೆ

"ಅನ್ನಪೂರ್ಣ"
ವಿಶ್ವೇಶ್ವರಪುರಂ, ಬೆಂಗಳೂರು - ೪.
೬ - ಜನ್ಯುಅರಿ ೧೯೫೪.

ಅ. ನ. ಕೃ.

# ೧

“ಅಮ್ಮ . ಅಮ್ಮ… …”

ಕಮಲ ಹಲುಬುತ್ತಿದ್ದಳು.

ಪ್ರಜ್ವಲಿಸುವ ಅಗ್ನಿಗೆ ಸಿಕ್ಕಿದ ಮರದ ಕೊರಡು ಸಿಡಿದು ‘ಚಟ ಚಟ’ ಎಂದು ಶಬ್ದ ಮಾಡುವಂತೆ ಕಮಲಳ ಹೃದಯದಲ್ಲಿ ತುಂಬಿದ್ದ ದಾವಾಗ್ನಿ ಆಗಾಗ್ಗೆ ಸಿಡಿದು ‘ಅಮ್ಮ-ಅಮ್ಮ’ ಎಂದು ನುಡಿಯುತ್ತಿತ್ತು

“ಅಮ್ಮ….ಅಮ್ಮ….”

ಎಂದು ಗೋಪಾಲ ಹಸಿದು ಚೀರುತ್ತಿದ್ದ.

“ಅಮ್ಮ….ಅಮ್ಮ….”

ಹೊರಗೆ ಸೌದೆ ಒಡೆದುಹಾಕಿದ ಕೂಲಿ, ಮನೆಯ ಯಜಮಾನಿತಿಯನ್ನು ಕೂಗುತ್ತಿದ್ದ.

“ಅಮ್ಮ…ಅಮ್ಮ….”

ಬೀದಿಯಲ್ಲಿ ಭಿಕ್ಷುಕಿ ಒಂದು ತುತ್ತು ಅನ್ನಕ್ಕಾಗಿ ಗೋಗರೆಯುತ್ತಿದ್ದಳು. ಹಸಿದಿದ್ದ ಅವಳ ಮಗು ಶುಷ್ಕವಾಗಿದ್ದ ಅವಳ ಮೊಲೆದೊಗಲನ್ನು ಹಿಡಿದು ಹಲ್ಲಿನಲ್ಲಿ ಜಗ್ಗುತ್ತಿತ್ತು. ತಾಯಿಯ ದೇಹದಲ್ಲಿ ರಕ್ತವಿಲ್ಲ-ತಾಯಿಯ ಮೊಲೆಯಲ್ಲಿ ಹಾಲಿಲ್ಲ.

“ಅಮ್ಮ….ಅಮ್ಮ….”

ಎಂದು ರುಕ್ಮಿಣಿ, ಅತ್ತೆ ಗೋದಮ್ಮನವರ ಮಡಿಲಿನಲ್ಲಿ ಮುಖ ವಿಟ್ಟುಕೊಂಡು ಗೋಳಾಡುತ್ತಿದ್ದಳು.

ಗೋದಮ್ಮನವರ ಹೃದಯವೂ 'ಅಮ್ಮ....ಅಮ್ಮ....' ಎಂದೇ ಕರೆಯುತ್ತಿತ್ತು.

ತಾಯಿಯಿಲ್ಲದ ಮಕ್ಕಳಿಗೆ ಭುವನೇಶ್ವರಿಯೇ ತಾಯಿ. ಎಷ್ಟು ಮಕ್ಕಳ ಶೋಕವನ್ನು ಆ ತಾಯಿ ತನ್ನ ಉದರದಲ್ಲಿ ಧರಿಸಬೇಕಾಗಿತ್ತು. ಎಷ್ಟು ಮಕ್ಕಳ ಸತತ ಅಶ್ರುಸ್ರೋತವನ್ನು ತೊಡೆಯಬೇಕಾಗಿತ್ತು.

ಕಮಲಳಿಗೆ ರುಕ್ಮಿಣಮ್ಮನ ಆಶ್ರಯವಿತ್ತು.

ರುಕ್ಮಿಣಮ್ಮನಿಗೆ ಗೋದಮ್ಮನವರ ಆಶ್ರಯವಿತ್ತು.

ಗೋದಮ್ಮನವರಿಗೆ....?

ಮಗ ಬೆಳೆದು ದೊಡ್ಡವನಾಗಿದ್ದ. ಪುಣ್ಯದೇವತೆಯಾಗಿದ್ದ ರುಕ್ಮಿಣಿಯ ಕೈ ಹಿಡಿದು ಯಶೋದುಂದುಭಿ ಮೊಳಗಿಸಿದ್ದ. ಸಂಪತ್ ಲಕ್ಷ್ಮಿ, ಸಂತಾನಲಕ್ಷ್ಮಿಯರಿಬ್ಬರೂ ಆ ಮನೆಯ ಕಲ್ಯಾಣ ಮಾಡಲು ಕಂಕಣಬದ್ಧರಾಗಿ ನಿಂತಿದ್ದರು.

ಮನೆ ನಂದಗೋಕುಲದಂತೆ ಬೆಳೆಯಿತು.

ಮೊಮ್ಮಗ ಕಾಲೇಜಿನಲ್ಲಿ ಓದುತ್ತಿದ್ದ.

ಮಗಳು ಗಂಡನ ಮನೆಯಲ್ಲಿ ಸುಖವಾಗಿದ್ದಳು.

ಮೊಮ್ಮಗಳು ಗಂಡು, ಹೆಣ್ಣನ್ನು ಹಡೆದು ನಿತ್ಯಮಂಗಳೆಯಾಗಿದ್ದಳು.

ಸ್ವರಸೌರಭ ತುಂಬಿ, ಪ್ರಕೃತಿಯನ್ನೇ ತನ್ನ ಸಂಭ್ರಮದಲ್ಲಿ ಕುಣಿಸುತ್ತಿದ್ದಾಗ ಅಪಸ್ವರವೆದ್ದಿತ್ತು.

ಗೀತಗಾಯನ, ನೃತ್ಯನೃತ್ತ ತುಂಬಿದೆಡೆ ಅಸಹಾಯಕ ಹೆಣ್ಣಿನ ಆಕ್ರಂದನ.

ಸುಂದರ ರಾಗತರಂಗದಲ್ಲಿ ಓಲಾಡುತ್ತಿದ್ದ ಮನೆ ಆರ್ತಾಲಾಪದ ಹೃದಯವಿದ್ರಾವಕ ಸ್ಪಂದನಕ್ಕೆ ಸಿಕ್ಕುಬಿದ್ದಿತ್ತು.

"ಈ ದೌರ್ಭಾಗ್ಯ–ಈ ದುರಂತ–ನಿಯತಿಯ ವಿಕಟಾಟ್ಟಹಾಸ ನೋಡುವುದಕ್ಕೆ ನಾನು ಇಷ್ಟು ದಿನ ಬದುಕಬೇಕಾಯಿತೇ? ಸಾವನ್ನು

ಸೋದರನಂತೆ ಸ್ವಾಗತಿಸುತ್ತಿರುವಲ್ಲಿ ಎಳೆಚಿಗುರು ಬೆಂದು ಭಸ್ಮವಾಗ ಬೇಕೇ ? ”

ಎಂದು ಗೋದಮ್ಮನವರು ಚಿಂತಿಸತೊಡಗಿದರು.

ಇತರರು ಅತ್ತಾದರೂ ಅಲ್ಪಸ್ವಲ್ಪ ಸಮಾಧಾನಪಡೆಯಬಹು ದಾಗಿತ್ತು. ಗೋದಮ್ಮನವರಿಗೆ ಅದಕ್ಕೂ ಅವಕಾಶವಿಲ್ಲ.

ದುಃಖ ದಾವಾಗ್ನಿಯ ಹೊಡೆತಕ್ಕೆ ಸಿಕ್ಕಿ ಉರುಳುತ್ತಿದ್ದ ಎಳೆಯ ಗಿಡಬಳ್ಳಿಗಳಿಗೆ ಒಂದು ಊರೆಗೋಲು ಅತ್ಯವಶ್ಯಕವಾಗಿತ್ತು.

ಆ ಊರೆಗೋಲೇ ಗೋದಮ್ಮ.

ರುಕ್ಮಿಣಿಯ ಮನಸ್ಸಿನಲ್ಲೆದ್ದಿದ್ದ ವಿಚಾರತರಂಗಗಳು ಅವಳ ನೈಸರ್ಗಿಕ ಸ್ಥೈರ್ಯ, ಸನಾತನ ನಂಬಿಕೆ, ಆತ್ಮಾರೂಢವಾದ ದೈವಭಕ್ತಿ ಗಳನ್ನು ಬಲವಾಗಿ ಹಿಡಿದಲುಗಿಸಿತ್ತು.

“ ದೇವರಿಲ್ಲಮ್ಮ. ಅದೊಂದು ಮನಸ್ಸಿನ ಭ್ರಾಂತಿ. ಇದ್ದರೂ ಅವನು ಅಂಗಾಂಗಹೀನನಾದ ದುರ್ಬಲ–ಕ್ರೌರ್ಯ, ಶೋಕ, ನೋವುಗಳ ವಿಷ ಆಹಾರ ತಿಂದು ಬದುಕುವ ವಿಷಕ್ರಿಮಿ.”

ರುಕ್ಮಿಣಿಯ ಬಾಯಿಂದಲೇ ಆ ಮಾತುಗಳು ಹೊರಬಿದ್ದಿದ್ದವು. ಗೋದಮ್ಮನವರ ಮೈನಡುಗಿತು, ಕ್ಷಣಕಾಲ ಮೂಕರಂತೆ ಕುಳಿತರು.

ಅಂದಿನ ಪರಿಸ್ಥಿತಿಯಲ್ಲಿ ರುಕ್ಮಿಣಿ ಆಡಿದ ಮಾತನ್ನೇ ಯಾರಾದರೂ ಆಡುತ್ತಿದ್ದರು.

ಆದರೆ ರುಕ್ಮಿಣಿ ಅಂಥ ಮಾತು ಆಡಬಾರದು !

“ ಹಾಗನ್ನಬಾರದು ರುಕ್ಕೂ. ಅಗ್ನಿಗೆ ಮಾಲಿನ್ಯವುಂಟೇ ? ಪರಮಾತ್ಮನ ಕರುಣೆಗೆ ಕೊರೆಯುಂಟೇ ?”

“ ಇದು ಕರುಣೆಯೇ ?–ಕಮಲ ಪರಮಾತ್ಮನನ್ನು ಪದಚ್ಯುತ ನನ್ನಾಗಿಸಲು ಯತ್ನಿಸಿದಳೇ ? ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವೆನ್ನು ವುದಕ್ಕೆ ಲೋಕವನ್ನೇ ಕಾಣದ ಕಂದ ಪಾಪದ ನೆಳಲನ್ನಾದರೂ ನೋಡಿರುವಳೇ ?”

“ರುಕ್ಕೂ ನೀನು ಜ್ಞಾನಿ–ಜ್ಞಾನಿಗೂ ಮಾಯೆ ಮುಸುಕಬೇಕೆ?”

" ಜ್ಞಾನಿ ಹೃದಯಶೂನ್ಯನೇ? ಅಮ್ಮ....ನಾನು ಜ್ಞಾನಿಯಲ್ಲ, ಭಕ್ತಳಲ್ಲ – ನಾನು ಹೆಣ್ಣು - ತಾಯಿ—ಯಾರಿಗೇನು ಅನ್ಯಾಯ ಮಾಡಿದೆ? ಯಾವ ಹೆಣ್ಣಿನ ಭಾಗ್ಯ ನಾನು ಕಿತ್ತುಕೊಂಡೆನೆಂದು ದೇವರು ನನ್ನ ಮಗಳ ಭಾಗ್ಯ ಕಿತ್ತುಕೊಂಡಿದ್ದಾನೆ."

" ರುಕ್ಕೂ, ನೀನು ಯಾರಿಗೂ ಅನ್ಯಾಯಮಾಡಿಲ್ಲಮ್ಮ - ಯಾರ ಮನೆಯ ಭಾಗ್ಯವನ್ನೂ ಕಿತ್ತುಕೊಂಡಿಲ್ಲ. ಭಗವಂತನಿಗೆ ಯಾರ ಮೇಲೆ ವಿಶೇಷ ಪ್ರೇಮವೋ ಅವರಿಗೆ ಹೆಚ್ಚಿನ ಕಷ್ಟ ಕೊಡುತ್ತಾನಂತೆ!"

" ಭಗವಂತ ಪ್ರೇಮ ತೋರಿಸುವ ಲಕ್ಷಣವೇ ಇದು ?"

" ಹೌದು ರುಕ್ಕೂ - ಎಷ್ಟೋ ಕಷ್ಟಗಳು ಬಂದರೂ ಧೈರ್ಯ ಗುಂದದೆ, ಸತ್ಯ ಬಿಡದೆ, ಭಗವಂತನ ಮೇಲಣ ಭಕ್ತಿ ತೊರೆಯದೆ ಲೋಕಕ್ಕೆ ಮಾದರಿಯಾಗುವ ಜೀವದ ಆವಶ್ಯಕತೆಯಿದೆಯಲ್ಲವೇ ? ಸುಖ ಬಂದಾಗ ಸ್ಥೈರ್ಯವನ್ನುಳಿಸಿಕೊಳ್ಳುವುದು ಸುಲಭ - ದುಃಖ ಬಂದಾಗಲೂ ಸ್ಥಿರಚಿತ್ತದಿಂದಿರುವುದೇ ಅಲ್ಲವೇ ಹಿರಿತನದ ಲಕ್ಷಣ."

" ನಾನು ಹಿರಿಯತನ ಆಶಿಸಲಿಲ್ಲ - ಸಂಪತ್ತು ಸೌಭಾಗ್ಯ ಬೇಡಲಿಲ್ಲ. ನನ್ನ ಗಂಡ, ಮಕ್ಕಳು ನೆಮ್ಮದಿಯಾಗಿರಬೇಕೆಂದು ಬೇಡಿದೆ - ಅದನ್ನೂ ಭಗವಂತ ಕರುಣಿಸಲಿಲ್ಲವಲ್ಲ ! "

" ಹುಚ್ಚಿ! ಅವನ ಕರುಣೆಯಿಲ್ಲದಿದ್ದರೆ ಮಾಧೂ ಗಂಡಾಂತರ ಗಳಿಂದ ಪಾರಾಗುತ್ತಿದ್ದನೇ - ನಿನ್ನ ಮನೆ ನಂದಗೋಕುಲದ ಹಾಗೆ ಬೆಳೆಯುತ್ತಿತ್ತೇ ? — ಕರ್ತವ್ಯ ಕಾದಿರುವಾಗ ನೀನು ದುಃಖದಲ್ಲಿ ಮೈಮರೆಯುವುದು ತರವಲ್ಲ. ನೀನೇ ನಿರ್ವಿಣ್ಣಳಾದರೆ ಕಮಲೂವನ್ನು ಸಂತೈಸುವವರು ಯಾರು ? ಮಾಧೂಗೆ ಧೈರ್ಯ ಹೇಳುವವರು ಯಾರು ? "

ಗೋದಮ್ಮನವರ ಸಮಾಧಾನೋಕ್ತಿಯಿಂದ ರುಕ್ಮಿಣಿಯ ಹೃದ ಯಕ್ಕೆ ಮೊಬ್ಬು ಬೆಳಕು ಹರಿದಿತ್ತು. ಆದರೆ ಅವಳ ದುರ್ದಮನೀಯ ಯಾತನೆಗೆ ಪರಿಹಾರವಿರಲಿಲ್ಲ.

ರುಕ್ಮಿಣಿ ತನ್ನ ಆರಾಧ್ಯದೇವನ ಕಂಚಿನ ಮೂರ್ತಿಯನ್ನು

ಕೈಯಲ್ಲಿ ಹಿಡಿದು ಅದಕ್ಕೆ ಕಣ್ಣೀರಿನ ಅಭಿಷೇಕ ಮಾಡಿದಳು. ತಾನು ಸಣ್ಣವಳಾಗಿದ್ದಾಗ - ಬಹಳ ದಿವಸಗಳ ಹಿಂದೆ - ತೀರ್ಥಯಾತ್ರೆ ಮಾಡಿಕೊಂಡು ಬಂದಿದ್ದ ಶೇಷಾಚಾರ್ರು ಕೃಷ್ಣನ ಮೂರ್ತಿಯನ್ನು ತಂದುಕೊಟ್ಟಿದ್ದರು. ಅಂದಿನಿಂದ ಆ ಕೃಷ್ಣನ ಚರಣಸನ್ನಿಧಿಗೆ ರುಕ್ಮಿಣಿ ತನ್ನ ಸಮಸ್ತ ಕಷ್ಟ ಸುಖವನ್ನೂ ನಿವೇದಿಸುತ್ತ ಬಂದಿದ್ದಳು.

ರುಕ್ಮಿಣಿಯ ಆತ್ಮನಿವೇದನೆ ಕೇಳಿ ಕಾಳೀಯಮರ್ದನ ಸುಹಾಸ ವದನನಾಗಿ ನಿಂತಿದ್ದ. ದುಷ್ಟ ಕಾಳೀಯನ ಹೆಡೆಯನ್ನಪ್ಪಳಿಸಿ ನರ್ತಿಸುತ್ತಿದ್ದ ಕೃಷ್ಣನೇ ಇಂದು ಕಮಲನ ಬಾಳಹೆಡೆಯನ್ನೂ ಅಪ್ಪಳಿಸಿ ನರ್ತಿಸುತ್ತಿದ್ದ - ಈಗಲೂ ಅದೇ ನಗು - ಅದೇ ಸುಹಾಸವದನ. ವಿಶ್ವಚೈತನ್ಯಸ್ವರೂಪನಾದ ವಿಭು ಕೇವಲ ಲೋಹದ ಮೂರ್ತಿಯೇ ?- ಲೋಕದ ಕಷ್ಟ, ನೋವಿನ ಪರಿವೆಯಿಲ್ಲದೆ ಅವನು ತನ್ನ ನೃತ್ಯದಲ್ಲಿ ನಿಮಗ್ನನಾಗುವನೇ ಎಂದು ರುಕ್ಮಿಣಿ ಯೋಚಿಸುತ್ತ ನಿಂತಳು.

'ಭಗವಾನ್ - ನೀನು ಕಠಿಣಚಿತ್ತ. ಗುರುಹಿರಿಯರು, ಸಾಕಿ ಸಲಹಿದವರು ಎನ್ನುವ ಭಾವನೆಯನ್ನು ಬದಿಗೊತ್ತಿ ಬಿಲ್ಲಿಗೆ ಹೆದೆಯೇರಿಸು ಎಂದು ಆಜ್ಞೆಮಾಡುತ್ತಿರುವೆ - ಇದು ಧರ್ಮವೇ ?'

ಎಂದು ವಿಷಣ್ಣನಾದ ಅರ್ಜುನ ಕೇಳಿದ್ದ.

'ಭಗವಾನ್ - ಕಾಸೀನನನ್ನು ಅಂಗರಾಜ್ಯಾಧಿಪತಿಯನ್ನಾಗಿ ಮಾಡಿ ತನ್ನ ನಿಸ್ಸೀಮ ಪ್ರೇಮಸಂಪುಟದಲ್ಲಿ ಪೊರೆದು ಪೋಷಿಸಿದ ಸ್ವಾಮಿ, ದೊರೆ, ಗೆಳೆಯ, ಉದ್ಧಾರಕ ಸುಯೋಧನನ್ನು ನಿರಾಕರಿಸಿ, ಪಾಂಡವಪಕ್ಷ ನೇರೆಂದು ಹೇಳುತ್ತಿರುವೆ - ಇದು ಧರ್ಮವೇ ?'

ಎಂದು ಕರ್ಣ ಕೇಳಿದ್ದ.

'ಅಣ್ಣಾ, ತುಂಬಿದ ಸಭೆಯಲ್ಲಿ ನನ್ನನ್ನು ವಿವಸ್ತ್ರಳನ್ನಾಗಿಸಿ ಅಪ ಮಾನಮಾಡಿದ ದುರ್ಯೋಧನನಲ್ಲಿ ಶಾಂತಿಸಂಧಾನಕ್ಕೆ ಹೊರಟಿರುವೆ. ನನ್ನ ಗಂಡಂದಿರ ಕ್ಷಾತ್ರವನ್ನೂ ಕಡೆಗಾಣಿಸುತ್ತಿರುವೆ! ಪ್ರತೀಕಾರಕ್ಕೆ ಹಾತೊರೆಯುತ್ತಿರುವ ನನ್ನ ಉರಿಮನಸ್ಸಿನ ಮೇಲೆ ಶೀತಲೋದಕ ಎರಚುತ್ತಿರುವೆ. ಇದು ಧರ್ಮವೇ ?'

ಎಂದು ಕೃಷ್ಣೆ ಕೇಳಿದ್ದಳು.

ಯಾವದು ಧರ್ಮ?

ಧರ್ಮದ ಸೂಕ್ಷ್ಮಸ್ವರೂಪವನ್ನು ಕೃಷ್ಣ ಬಲ್ಲನೇ?

ಅವನಿಗೆ ಸಾಕಿ ಸಲಹಿದವರು ಎನ್ನುವ ಮಮತೆ ಇದೆಯೇ?-

ಸೋದರಮಾವನನ್ನೇ ಕೊಂದ ಕೃಷ್ಣ ಹೃದಯಜೀವಿಯೇ?

ತ್ರಿಕಾಲವಂದ್ಯನಾದ ಪಿತಾಮಹನ ಮೇಲೆ ಸುದರ್ಶನ ಪ್ರಯೋಗಿಸಲು ಹೊರಟ ಕೃಷ್ಣ ಧರ್ಮಕರ್ಮಗಳ ರಹಸ್ಯ ಬಲ್ಲನೇ?

ಗೋಪಸ್ತ್ರೀಯರ ಸೀರೆ ಕದಿಯುತ್ತಿದ್ದ ಕೃಷ್ಣ ಕುಲವಧುವಿನ ಲಜ್ಜಾಸ್ವಭಾವವನ್ನರಿಯಬಲ್ಲನೇ?

ರುಕ್ಮಿಣಿಯ ಮನಸ್ಸಿನಲ್ಲಿ ಬುದ್ಬುಧವಾಗಿ ಸಂಶಯಗಳೆದ್ದಿದ್ದವು.

ಕೃಷ್ಣ ನಗುತ್ತಲೇ ಇದ್ದ. ಕಾಳೀಯನ ಹೆಡೆಯ ಮೇಲೆ ಅವನು ನಡಸಿದ್ದ ನೃತ್ಯ ಅವ್ಯಾಹತವಾಗಿ ಸಾಗಿಯೇ ಇತ್ತು.

ಕೃಷ್ಣನ ಮೂರ್ತಿಯನ್ನಪ್ಪಿ ರುಕ್ಮಿಣಿ

'ಭಗವಾನ್ - ನಾನು ಅಜ್ಞಳು - ಪಾಮರಳು - ಮಾಯಾ ಪಂಕದಲ್ಲಿ ಬಿದ್ದು ತೊಳಲಾಡುತ್ತಿರುವ ಬಡಪಶು. ನನಗೆ ದಾರಿ ತೋರಿಸು - ಮನಸ್ಸಿಗೆ ಶಾಂತಿ ಕೊಡು.'

ನಗೆಮೊಗದ ಕೃಷ್ಣನ ಪಾಂಚಜನ್ಯ ಮೊಳಗಿತು.

> 'ಸರ್ವಧರ್ಮಾನ್ಪರಿತ್ಯಜ್ಯ
> ಮಾಮೇಕಂ ಶರಣಂ ವ್ರಜ ।
> ಅಹಂ ತ್ವಾ ಸರ್ವ ಪಾಪೇಭ್ಯೋ
> ಮೋಕ್ಷಯಿಷ್ಯಾಮಿ ಮಾ ಶುಚಃ' ॥

(ಎಲ್ಲ ಧರ್ಮಗಳನ್ನೂ ತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು. ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುತ್ತೇನೆ. ಅಳಬೇಡ.)

> 'ಮನ್ಮನಾ ಭವ ಮದ್ಭಕ್ತೋ
> ಮದ್ಯಾಜೀ ಮಾಂ ನಮಸ್ಕುರು ।

ಮಾಮೇ ವೈಷ್ಯಸಿ ಸತ್ಯಂ ತೇ
ಪ್ರತಿಜಾನೇ ಪ್ರಿಯೋಸಿ ಮೇ' ॥

(ನನ್ನಲ್ಲಿ ಮನಸ್ಸಿಡು. ನನ್ನಲ್ಲಿ ಪ್ರೇಮ ಉಳ್ಳವನಾಗು. ನನ್ನನ್ನು ಪೂಜೆಮಾಡು. ನನಗೆ ಎರಗು, ನನ್ನನ್ನೇ ಹೊಂದುತ್ತೀ. ನೀನು ನನ್ನ ಗೆಳೆಯನೆಂಬುದರ ಮೇಲೆ ನಿನಗೆ ನಿಜವಾಗಿ ಆಣೆಮಾಡಿ ಹೇಳುತ್ತೇನೆ.)

ಪ್ರಕೃತಿಗೆ ಹೇಗೆ ಹಗಲು, ಇರುಳೋ ಹಾಗೆ ನಿಯತಿಗೆ ಸಾವು, ಹುಟ್ಟು–ಚಿರಂತನ ಲೀಲೆ. ಈ ಚಕ್ರ ಸತತ ಸುತ್ತುತ್ತಲೇ ಇರಬೇಕು. ಆದರೆ ಚಕ್ರದ ದವಡೆ ಹಲ್ಲುಗಳಿಗೆ ಸಿಕ್ಕಿಕೊಂಡ ಮಾನವರ ಗತಿಯೇನು? ಯಂತ್ರದ ನಿಷ್ಕರುಣ ಕೋರೆದಾಡೆಗಳು ಅವರನ್ನು ಜಜ್ಜದಂತೆ ರಕ್ಷಿಸುವವರು ಯಾರು?

ಶ್ರೀಕೃಷ್ಣನೇ!

'ನಾನಿದ್ದೇನೆ–ಸಕಲ ಜೀವಕೋಟಿಯೂ ನಾನೇ ಆಗಿದ್ದೇನೆ. ನಾನಿಲ್ಲದ ಎಡೆಯಿಲ್ಲ. ಪ್ರಕೃತಿಯ ಪ್ರತಿಯೊಂದು ಚಲನವಲನವೂ ನನ್ನ ಅಧೀನ. ಲೋಕದ ಸುಖ ದುಃಖ, ರಾಗ ದ್ವೇಷ, ಶಾಂತಿ ಅಶಾಂತಿಗಳೆಲ್ಲದಕ್ಕೂ ನಾನೇ ಕಾರಣನು. ನನ್ನನ್ನೇ ದೃಢವಾಗಿ ನಂಬಿದವರು ಈ ದ್ವಂದ್ವ ಪ್ರಪಂಚದಿಂದ ವಿಮುಕ್ತರಾಗುತ್ತಾರಲ್ಲದೆ ನಾನೇ ಆಗುತ್ತಾರೆ.'

ರುಕ್ಮಿಣಿಯ ಹೃದಯಾಂತರಾಳದಿಂದ ಒಂದು ಪ್ರಾರ್ಥನೆ ಹೊರ ಹೊಮ್ಮಿತು

"ಅನ್ಯಥಾ ಶರಣಂ ನಾಸ್ತಿ
ತ್ವಮೇವ ಶರಣಂ ಮಮ ॥"

ಎಂದು ಹಲವು ಬಾರಿ ಹೇಳಿಕೊಂಡಳು.

ಆ ಪ್ರಾರ್ಥನೆಯೇ ರುಕ್ಮಿಣಿಗೆ ಮಗಳನ್ನು ನೋಡುವ ಧೈರ್ಯ ತಂದು ಕೊಟ್ಟಿತು.

ಕಮಲ ಹಾಸಿಗೆಯ ಮೇಲೆ ಜೀವಶವದಂತೆ ಮಲಗಿದ್ದಳು. ಅವಳ ದೇಹದಲ್ಲಿ ಸ್ವಲ್ಪವೂ ಚೈತನ್ಯ ಉಳಿದಿರಲಿಲ್ಲ. ಅಳುವುದಕ್ಕೂ

ಅವಳಿಗೆ ತ್ರಾಣವಿರಲಿಲ್ಲ.

ತಾಯಿಯ ಮಗ್ಗುಲಲ್ಲಿ ಮಲಗಿದ್ದ ಮಗು ಅತ್ತು ಅತ್ತು ಸೊರಗಿ ನಿತ್ರಾಣಗೊಂಡು ನಿದ್ರಿಸುತ್ತಿತ್ತು. ಮಗುವಿನತ್ತ ಮೊಗ ತಿರುಹಲೂ ತಾಯಿಗೆ ಮನಸ್ಸಾಗದು. ಮಗುವನ್ನು ಕಂಡು ಕಮಲನಿಗೆ ಜಿಗುಪ್ಸೆ–ವಿಕರ್ಷಣೆ ಹುಟ್ಟಿತ್ತು. 'ಅವರನ್ನು ತಿಂದುಕೊಂಡು ಈ ಪ್ರಾರಬ್ಧ ಬದುಕಿದೆಯಲ್ಲ' ಎಂದುಕೊಳ್ಳುವಳು. ಮೊದಲೇ ನಿಶಕ್ತವಾಗಿದ್ದ ಮಗು ತಾಯಿಯ ಉಪೇಕ್ಷೆಯಿಂದ ಮತ್ತಷ್ಟು ದುಬರ್ಲವಾಗುತ್ತಿತ್ತು.

ಕಮಲನ ದುಃಖೋಪಶಮನ ಮಾಡಲು ಏನು ಮಾಡ ಬೇಕೆಂಬುದೇ ರುಕ್ಮಿಣಮ್ಮನಿಗೆ ತಿಳಿಯದಾಯಿತು. ಕಮಲನ ಅಂತ ರಂಗ ಭೇದಿಸಿಕೊಂಡು ಹೊರಬರುತ್ತಿದ್ದ ಉದ್ಗಾರಗಳು ರುಕ್ಮಿಣಮ್ಮನ ಸ್ಥೈರ್ಯವನ್ನು ಅಲುಗಾಡಿಸುತ್ತಿದ್ದವು.

ಮಾಧವರಾಯನಿಗೆ ಸಹಾನುಭೂತಿ ವ್ಯಕ್ತ ಮಾಡಲು ಜವರೇಗೌಡರು, ಷರೀಫ್ ಸಾಹೇಬರು ದಯಮಾಡಿಸಿದರು

"ರಾಯರಿಲ್ಲವೇ ತಾಯಿ ?" ಎಂದು ಜವರೇಗೌಡರು ಕೇಳಿದರು.

"ಇಲ್ಲ–ಬನ್ನಿ ಕುಳಿತುಕೊಳ್ಳಿ"

ಎಂದು ರುಕ್ಮಿಣಿ ಸ್ವಾಗತ ಬಯಸಿದಳು.

ಗೌಡರು ಸಾಹೇಬರೂ ಹಜಾರದಲ್ಲಿ ಕುಳಿತರು. ನಗೆ ಚಿಮ್ಮುತ್ತಿದ್ದ ಮನೆಯಲ್ಲಿ ದುಃಖದ ಕಪ್ಪುನೆಳಲು ಬಿದ್ದಿರುವುದನ್ನು ಕಂಡು ಅತಿಥಿಗಳು ಚಕಿತರಾದರು. ಗೌಡರೇ ಧೈರ್ಯಮಾಡಿಕೊಂಡು

"ರಾಯರು ಊರಿನಲ್ಲಿಲ್ಲವೇ ತಾಯಿ" ಎಂದು ಕೇಳಿದರು.

"ಊರಿನಲ್ಲೇ ಇದ್ದಾರೆ–ಸಕ್ಕರೆ ಕಂಪೆನಿ ಕಛೇರಿಗೆ ಹೋಗಿ ಬರುತ್ತೇನೆಂದು ಹೇಳಿ ಹೋದರು. ಬೇಗ ಬಂದು ಬಿಡುತ್ತಾರೆ."

"ಕಮಲಮ್ಮನಿಗೆ ಒದಗಿದ ದುಃಖ ಕೇಳಿ ತುಂಬ ಸಂಕಟ ವಾಯಿತು."

"ವಿಧಿಲಿಖಿತ ಗೌಡರೇ–ಯಾರು ತಪ್ಪಿಸಲು ಸಾಧ್ಯ ?"

" ನೀವೂ ರಾಯರೂ ಸಮಾಧಾನ ತಂದುಕೊಂಡು ಮಗುವಿಗೆ ಧೈರ್ಯ ಹೇಳಬೇಕು. ನಾವಾದರೂ ಅದಕ್ಕಿಂತ ಹೆಚ್ಚೇನು ಹೇಳಲು ಸಾಧ್ಯ ? ನೀವು ಎಲ್ಲಾ ತಿಳಿದವರು–ಅನೇಕ ಕಷ್ಟಗಳನ್ನು ಕಂಡವರು, ಅನುಭವಿಸಿದವರು...."

" ನನ್ನ ಕಷ್ಟ ಮುಗಿದಿಲ್ಲ ಗೌಡರೇ. ನನ್ನ ಮನಸ್ಸು ಕಲ್ಲು ಮಾಡಿದ ಹೊರತೂ ಭಗವಂತನಿಗೆ ತೃಪ್ತಿಯಿಲ್ಲ."

" ಸುಖ ಬಂದಾಗ ಭಗವಂತನನ್ನು ನಂಬುವುದು ಸುಲಭ; ದುಃಖ ಬಂದಾಗ ಅವನನ್ನು ನಂಬುವುದಕ್ಕೆ ನಿಮ್ಮ ಆತ್ಮಶಕ್ತಿಬೇಕು ತಾಯಿ."

" ನನ್ನ ಆತ್ಮಶಕ್ತಿಯೂ ಉಡುಗಿಹೋಗಿದೆ ಗೌಡರೇ."

" ಶಿವಶಿವಾ–ಅದೆಂದಿಗೂ ಆಗದಿರಲಿ. ನಿಮ್ಮ ಆತ್ಮಶಕ್ತಿಯೇ ಅಲ್ಲವೆ ನಮ್ಮನ್ನು ರಕ್ಷಿಸುತ್ತಿರುವುದು."

" ಗೌಡರು ಹೇಳುವುದು ನಿಜ ತಾಯಿ. ಒಂದು ಒಳ್ಳೆಯ ಜೀವನ ಸಮೀಪದಲ್ಲಿ ನಾವಿದ್ದರೆ, ಅದರ ಪ್ರಭಾವದಿಂದ ನಮ್ಮ ಬಾಳೇ ಬದಲಾಯಿಸುತ್ತದೆ."

ಎಂದು ಷರೀಫ್ ಸಾಹೇಬರು ಸಮರ್ಥಿಸಿದರು.

" ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರೆಯೇ ಗೌಡರೇ ?"

" ಚೆನ್ನಾಗಿದ್ದಾರಮ್ಮ.

" ನಿಮ್ಮ ಮನೆಯಲ್ಲಿ ಚೆನ್ನಾಗಿದ್ದಾರೆಯೇ ಸಾಹೇಬರೇ ?"

" ಚೆನ್ನಾಗಿದ್ದಾರಮ್ಮ....ಬೀಬಿ ಒಂದೇ ಸಮನೆ ಕಣ್ಣೀರು ಹಾಕುತ್ತಿದ್ದಾಳೆ. ಅಮ್ಮಾವರನ್ನು ಹೋಗಿ ನೋಡಿ ನನ್ನ ಸಲಾಂ ತಿಳಿಸಿಬನ್ನಿ ಎಂದು ಹೇಳಿದಳು."

" ನೀವೆಲ್ಲಾ ಅಣ್ಣತಮ್ಮಂದಿರಹಾಗಿದ್ದೀರಪ್ಪಾ. ಅವರಿಗೆ ಅಪಘಾತವಾದಾಗ ನೀವು ಮಾಡಿದ ಸಹಾಯ ಹೇಗೆ ಮರೆಯಲಿ ? ಬೀಬಿಯವರನ್ನು ಯಾವಾಗಲಾದರೂ ಕರೆದುಕೊಂಡು ಬನ್ನಿ."

" ನೀವು ಪಟ್ಟಣಕ್ಕೆ ಬರುವುದಿಲ್ಲವೇ ತಾಯಿ ?"

" ಬರದೇ ಉಂಟೇ - ಗೌಡರ ಮಗನ ಲಗ್ನಕ್ಕೆ ನಾವು ಬರದಿದ್ದರೆ ಆಗುತ್ತದೆಯೇ ? "

" ನೀವು ಬರದಿದ್ದರೆ ನಾನು ಲಗ್ನವೇ ಮಾಡುವುದಿಲ್ಲ ತಾಯಿ."

" ಇಲ್ಲೇ ಊಟಕ್ಕೇಳಿ."

"ಬೇಡಿ ತಾಯಿ-ಈ ದಿವಸ ಬೇಡ-ಇನ್ನೊಂದು ದಿನ ಬರುತ್ತೇವೆ."

ರುಕ್ಮಿಣಮ್ಮ ಬಲವಂತಪಡಿಸಲಿಲ್ಲ. ಇಬ್ಬರು ಅತಿಥಿಗಳಿಗೂ ಕಾಫಿಮಾಡಿ ತಂದುಕೊಟ್ಟಳು. ಗೌಡರು ಕಾಫಿ ಕುಡಿಯುತ್ತ,

" ನಿಮಗೆಷ್ಟು ಕಷ್ಟವಾದರೂ ಈ ಸಮಾರಾಧನೆ ತಪ್ಪುವಹಾಗಿಲ್ಲ."

ಎಂದರು. ರುಕ್ಮಿಣಮ್ಮ ನಸುನಗುತ್ತಾ

" ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆಯುವುದು ಹೀಗೇ ಅಲ್ಲವೇ ಗೌಡರೇ."

" ಕೆರೆಯ ನೀರಿಗೂ ಈಗ ಕಂದಾಯ ಹಾಕುತ್ತಾರಮ್ಮ."

ಎಂದು ಷರೀಫ್ ಸಾಹೇಬರು ನುಡಿದರು.

ಇಬ್ಬರೂ ಕಾಫಿ ಲೋಟ ಕೆಳಗಿಟ್ಟು ಮೇಲಕ್ಕೆದ್ದರು. ರುಕ್ಮಿಣಮ್ಮ

" ಯಜಮಾನರನ್ನು ನೋಡುವುದಿಲ್ಲವೇ ? "ಎಂದು ಕೇಳಿದಳು.

" ಸಕ್ಕರೆ ಕಂಪೆನಿ ಕಛೇರಿಗೇ ಹೋಗಿ ನೋಡುತ್ತೇವೆ "

ಎಂದು ಗೌಡರು, ಸಾಹೇಬರು ಅಲ್ಲಿಂದ ಹೊರಟರು.

ರುಕ್ಮಿಣಿಯ ನಿತ್ಯಜೀವನದ ಚಾ-ಚೂ ವ್ಯತ್ಯಾಸವಾಗಲು ಸಾಧ್ಯವಾಗಲಿಲ್ಲ. ಸಂಜೆಗೆ ಶ್ರೀದೇವಿ, ರಾಮು ಬೆಂಗಳೂರಿನಿಂದ ಇಳಿದರು; ಮಾರನೆಯ ಬೆಳಿಗ್ಗೆ ನಾರಾಯಣಸ್ವಾಮಿ, ಚಿನ್ನಸ್ವಾಮಿ ಮೈಸೂರಿನಿಂದ ಬಂದರು. ಮಧ್ಯಾಹ್ನಕ್ಕೆ ರಾಮಣ್ಣಾಚಾರ್ಯರೂ ಮೈಸೂರಿನಿಂದ ಬಂದಿಳಿದರು. ಸಂಜೆಗೆ ಭರಮೇಗೌಡ, ಲಕ್ಕಿ ಪಟ್ಟಣದಿಂದ ಬಂದರು. ಶೇಷಾಚಾರ್ರು ಉಡುಪಿಯಿಂದ ಧಾವಿಸಿ ಬಂದರು.

ಲಕ್ಕಿ ಅಪ್ಪಾವರ ಮೇಲೆ ಸಿಟ್ಟಾಗಿ

" ಯಾಕ್ರಮಣ್ಣೋ ಇಂಗೆ ಮಾಡಿದಿರಿ ? " ಎಂದಳು.

" ಏನು ಮಾಡಿದೆನೇ ಲಕ್ಕಿ ? "

" ಒಂದು ಕಾಗಜ ಬರ್ಸಾಕೆ ಆಗಲಿಲ್ವ್ರಾ ? "

" ಯಾವ ಸಂತೋಷಕ್ಕೆ ಬನ್ನಿರೆಂದು ಕಾಗದ ಬರೆಸಲೇ ಲಕ್ಕಿ ?"

" ಸಂತೋಸವಾದ್ರೇ ಬರೆಸಬೇಕೇನ್ರಮ್ಮಣ್ಣಿ."

" ಮಕ್ಕಳನ್ನೆಲ್ಲಿ ಬಿಟ್ಟೆ ?"

" ಅವ್ವನ ತಾವ."

" ಅತ್ತೆ ಚೆನ್ನಾಗಿದ್ದಾಳೆಯೇ – ನಿನ್ನ ಕಂಡರೆ ವಿಶ್ವಾಸವಾಗಿದ್ದಾಳೆಯೇ ? "

" ಮುದ್ಕಿ ನಂಗೆ ಬಲು ಒದ್ಕೊಂತೈತ್ರಮ್ಮಣ್ಣಿ. ಭೋ ಮುಚ್ಚಟೆ ಮಾಡ್ತೈತೆ."

" ಸಂತೋಷ – ನಮ್ಮ ಮನೆಯಲ್ಲಿ ನಡೆದ ವಿಷಯ ನಿನಗೆ ಯಾರು ಹೇಳಿದರು ? "

" ಜವರೇಗೌಡರು ಸಿಕ್ಕಿದ್ರಂತೆ–ಅವರೇ ಸಮಾಚಾರ ತಿಳಿಸಿದ್ರು."

ಮನೆಯೇನೋ ತುಂಬಿತು.

ಆದರೆ ಯಾರ ಮನಸ್ಸಿಗೂ ಸಂತೋಷವಿಲ್ಲ. ರುಕ್ಮಿಣಮ್ಮ ತನ್ನ ದುಃಖ ನುಂಗಿಕೊಂಡು ಅತಿಥಿಗಳ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಿದ್ದರು. ಆದರೆ ಅವಳ ಹೃದಯ ಸುಡುತ್ತಿದ್ದ ಜ್ವಾಲೆಯ ಶಾಖ ಎಲ್ಲರಿಗೂ ತಗುಲಿತ್ತು.

ಲಕ್ಕಿ ಕಮಲನ ಮಗುವಿನ ಯೋಗಕ್ಷೇಮ ಪೂರ್ಣವಾಗಿ ತನ್ನ ಮೇಲೆ ಹಾಕಿಕೊಂಡಳು. ಅವಳು ಕಮಲೂ ಮಗುವಿಗೆ ಮೊಲೆಯೂಡಿಸುತ್ತಿರುವುದನ್ನು ಕಂಡು ರುಕ್ಮಿಣಮ್ಮ ಗಾಬರಿಯಾಗಿ

" ಇದೇನೇ ಲಕ್ಕಿ – ಏನು ಮಾಡುತ್ತಿರುವೆ " ಎಂದು ಕೇಳಿದಳು.

ಲಕ್ಕಿಯೂ ಗಾಬರಿಗೊಂಡು

" ಏನೂ ಇಲ್ರಮ್ಮಣ್ಣೀ – ಮಗ ಭೋ ಅಳ್ತಿತ್ತು. ಆಲು ಕೊಡ್ತಿದ್ದೆ."

" ಲಕ್ಕೀ, ನಿನ್ನ ಮಗುವಿಗೆ ಎದೆಹಾಲು ಬಿಡಿಸಿರುವೆಯಾ ? "

"ಅದೆಲ್ಲಿ ಬಿಡತ್ತೈತ್ರಮಣ್ಣಿ - ಹಿಂಜಿ ಹಿಪ್ಪೆಯಾಗೋತನ್ಕಾ ಸುರ್ಕೊಂತೈತೆ."

"ಇದು ಯಾವ ಜನ್ಮದ ಋಣ ತೀರಿಸುತ್ತಾ ಇದ್ದೀ ಲಕ್ಕೀ - ನಿನ್ನ ಮಗು ಪಾಲಿನ ಹಾಲು...."

"ಕಮಲಪ್ಪನ ಮಗ ನನ್ನ ಮಗ ಅಲ್ಲವೇನ್ರಮಣ್ಣಿ. ನನ್ನ ಮನೆ ಉಳಿಸಿದ ಲಕ್ಷ್ಮಿ ನೀನು - ಈ ದೇಹ, ರಕ್ತ, ಪರಾಣ ಎಲ್ಲಾ ನಿನ್ನದು ನಮ್ಮವ್ವ. ಆಲು ಕೊಡಬೇಡಾಂತ ಏಳಬೇಡಿ - ನಂಗೆ ಅಪಾರ ದುಕ್ಕವಾಗ್ತೈತೆ."

"ಲಕ್ಕೀ, ನೀನು ಮನುಷ್ಯಳಲ್ಲ ಕಣೇ - ದೇವತೆ."

"ಔದ್ರವ್ವಾ. ರಾಮದೇವರು ಕಲ್ಲು ತುಳಿದರಂತೆ, ಕಲ್ಲು ಎಣ್ಣಾಯ್ತಂತೆ. ನೀವು ಆಸೀರ್ವಾದ ಮಾಡಿದ್ರೆ ನಾನೂ ದೇವ್ರೆ ಆಗ್ತೇನ್ರವ್ವಾ!" ಎಂದಳು.

ರಾಮಣ್ಣಾಚಾರ್ಯರು ಭೂಮಿಗಿಳಿದು ಹೋಗಿಬಿಟ್ಟಿದ್ದರು. ಗೋವಿಂದನನ್ನವರು ಮಗನಂತೆ ಪ್ರೀತಿಸುತ್ತಿದ್ದರು. ಅವನ ಅಭ್ಯುದಯಕ್ಕೆ ನೆರವಾಗಿದ್ದವರೂ ಅವರೇ! ಎಲ್ಲಕ್ಕೂ ಹೆಚ್ಚಾಗಿ ಕಮಲ, ಗೋವಿಂದನ ಲಗ್ನ ಕೂಡಿಸಿದ್ದವರೂ ಅವರೇ! ಕಮಲನ ತಲೆಯ ಮೇಲೆ ತಾವೇ ಕಲ್ಲು ಎತ್ತಿಹಾಕಿದಂತಾಯಿತಲ್ಲ ಎಂದು ಆಚಾರ್ಯರು ಮರುಗಿದರು. ವಿಧಿಲಿಖಿತಕ್ಕೆ ಯಾರು ಹೊಣೆ? ಗೋವಿಂದನ ಆಯುಸ್ಸಿನ ಮಿತಿ ಯಾರಿಗೆ ಗೊತ್ತಿತ್ತು?

ಗೋವಿಂದನ ಕೈ ಹಿಡಿದು ಕಮಲ ಸುಖವಾಗಿಯೇ ಇದ್ದಳು. ಗೋವಿಂದ ಒಂದು ದಿನವೂ ಅತ್ತೆಮಾವಂದಿರಿಗಾಗಲಿ ಹೆಂಡತಿಗಾಗಲಿ ಆತಂಕವುಂಟುಮಾಡಿದವನಲ್ಲ. ಅಳಿಯತನದ ಯಾವ ಬಿಂಕ, ಬಿಗುಮಾನಕ್ಕೂ ಹೋಗದೆ ಗೋವಿಂದ ಮನೆಯವನಾಗಿ ಸೌಹಾರ್ದದಿಂದ ವರ್ತಿಸುತ್ತಿದ್ದ. 'ಗೋವಿಂದನ ಗುಣ ನಾರಾಯಣಸ್ವಾಮಿಗಿರಬಾರದಾಗಿತ್ತೇ' ಎಂದು ರುಕ್ಮಿಣಮ್ಮ ಹಲವು ಸಲ ಚಿಂತಿಸಿದ್ದಳು.

ಆದರೆ ಈ ದುರಂತದಲ್ಲಿ ತಮ್ಮದು ಏನೋ ಒಂದು ಪಾಲಿದೆ,

ಏನೋ ಒಂದು ಜವಾಬ್ದಾರಿಯಿದೆ ಎನ್ನುವುದನ್ನು ರಾಮಣ್ಣಾಚಾರ್ಯರು ಮರೆಯಲಾಗಲಿಲ್ಲ. ಮಾಧವರಾಯನೇ ಆಚಾರ್ಯರನ್ನು ಸಮಾಧಾನ ಪಡಿಸಬೇಕಾಯಿತು.

"ಆಚಾರ್ಯರೇ, ತಾವು ಜ್ಞಾನಿಗಳು, ಭಗವದ್ಭಕ್ತರು. ತಾವೇ ಹೀಗೆ ನಿರ್ವಿಣ್ಣರಾದರೆ ನಮಗೆ ಧೈರ್ಯ ಹೇಳುವವರು ಯಾರು? — ನಮ್ಮ ದುಃಖ ಹೋಗಲಾಡಿಸುವವರು ಯಾರು?"

"ಅಭಿಮನ್ಯುವಿನ ಮರಣದಿಂದ ತಪ್ತರಾದ ಸುಭದ್ರಾರ್ಜುನರಿಗೆ ಸಮಾಧಾನ ಹೇಳಿದ ಪುರುಷೋತ್ತಮನೇ ನಿಮಗೂ ಸಮಾಧಾನ ಹೇಳಬೇಕು - ಮನುಷ್ಯಮಾತ್ರದವನಾದ ನನ್ನಿಂದ ಆಗುವ ಕೆಲಸವಿದಲ್ಲ ರಾಯರೇ. ಹೆಣ್ಣು ಬಾಳೇ ಕಷ್ಟದ ಬಾಳು – ವೈಧವ್ಯವನ್ನೂ ಅನುಭವಿಸುತ್ತಾ ಬಾಳುವುದು ಮತ್ತೂ ಕಷ್ಟ."

ನಾರಾಯಣಸ್ವಾಮಿಯೂ ದುಃಖತಪ್ತನಾಗಿದ್ದ. ಅಕ್ಕನ ಅಪಾರ ವೇದನೆ ಕಂಡು ಅವನ ಕರುಳಿನಲ್ಲಿ ಕಲಮಲವೆದ್ದಿತ್ತು. ನಿಶ್ಶಬ್ದವಾಗಿ ಬಂದು ಅಕ್ಕನ ಹಾಸಿಗೆಯ ಬಳಿ ನಿಲ್ಲುವನು. ಅವಳನ್ನು ಮಾತನಾಡಿಸಿ ಸಹಾನುಭೂತಿ ವ್ಯಕ್ತಮಾಡಬೇಕೆಂದು ಮನಸ್ಸು ತವಕ ಪಡುತ್ತಿತ್ತು. ಗಂಟಲವರೆಗೆ ಬಂದ ಮಾತು ಅಲ್ಲಿಯೇ ಉಳಿಯುತ್ತಿತ್ತು. ಅವನ ಕಂಠ ಗದ್ಗದವಾಗುತ್ತಿತ್ತು. ಕಣ್ಣುಬಟ್ಟಲು ತುಂಬುತ್ತಿತ್ತು. ಒಮ್ಮೆ ಧೈರ್ಯ ತಂದುಕೊಂಡು

"ಅಳಬೇಡಮ್ಮ - ಕಮಲಾ" ಎಂದು ಹೇಳಿದ.

ಕಮಲಾ ಅವನ ಕಡೆ ತಿರುಗಿ ತನ್ನ ಕರುಣಾರ್ತ ನೇತ್ರಗಳನ್ನು ತೆರೆದು ನೋಡಿದಳು.

ಅಕ್ಕ, ತಮ್ಮ ಇಬ್ಬರ ಕಣ್ಣುಗಳೂ ಕೂಡಿದವು. ಇಬ್ಬರ ಕಣ್ಣುಗಳಿಂದಲೂ ಕರುಣಾಜಲ ಒಸರಿತು.

"ನೀನು ಸುಮ್ಮನೆ ಅಳುತ್ತಿದ್ದರೆ ಮೈ ನಂಜಾಗಿ ಸನ್ನಿ ಮುಚ್ಚಿಕೊಳ್ಳುತ್ತದೆ ಎಂದು ಅಜ್ಜಿ ಹೇಳುತ್ತಾಳೆ."

"ನಾನು ಯಾರಿಗಾಗಿ ಬದುಕಬೇಕು ನಾಣಿ. ನನ್ನ ಮಾಂಗಲ್ಯ

ಹೋದ ಗಳಿಗೆಯಲ್ಲೇ ನನ್ನ ಪ್ರಾಣವೂ ಹೋಯಿತು."

"ಗೋಪಾಲಿ, ಸೌಭಾಗ್ಯ ಇವರನ್ನು ನೋಡಿಕೊಂಡಾದರೂ ದುಃಖ ಸಹಿಸಿಕೊಳ್ಳಬೇಕಮ್ಮ."

"ಸೌಭಾಗ್ಯ - ಎಂಥ ಸೌಭಾಗ್ಯ ತಂದಳಪ್ಪಾ ಈ ರಾಕ್ಷಸಿ."

"ಕಮಲಕ್ಕ, ಮೂರು ನಾಲ್ಕು ದಿನದ ಈ ಹಸುಗಂದನನ್ನೇಕೆ ಆಕ್ಷೇಪಿಸುತ್ತೀ ?"

"ನಾಣಿ, ಇದರ ಮುಖ ನಾನು ನೋಡಲಾರೆ."

"ಹಾಗನ್ನಬಾರದಮ್ಮ - ಮಕ್ಕಳೇ ದೇವರಲ್ಲವೇ ?"

"ದೇವರು - ಯಾವ ದೇವರು - ಯಾರ ದೇವರು ? ಅಮ್ಮನಿಗಿಂತ ದೇವರಲ್ಲಿ ಭಕ್ತಿಯಿಟ್ಟವರುಂಟೆ ? ರಾಮಣ್ಣಾಚಾರ್ಯರಿಗಿಂತ ದೇವರನ್ನು ಪೂಜಿಸಿದವರುಂಟೇ ? - ದೇವರು ಅವರಿಗೇನು ಮಾಡಿದ ? ಆ ದೇವರಿಗೆ ನಾನು ಯಾವ ಅನ್ಯಾಯ ಮಾಡಿದ್ದೆ ? ನನ್ನ ಮನೆಯ ನಂದಾದೀಪವನ್ನು ಅವನೇಕೆ ಮುರಿದುಹಾಕಿದ ?"

"ನೀನು ಹೇಳುವುದು ನಿಜ - ಆದರೆ ನೀನು ಅತ್ತರೆ ಈ ಪ್ರಶ್ನೆ ಬಗೆಹರಿಯುತ್ತದೆಯೇ ?"

"ನನ್ನ ಅಳು ಇದೇ ಆರಂಭವಾಗಿದೆ ನಾಣಿ - ಮುಂದೆ ನಾನೆಷ್ಟು ಅಳಬೇಕಾಗಿದೆಯೋ ?"

ನಾರಾಯಣಸ್ವಾಮಿ ನಿರುಪಾಯನಾದ. ಕಮಲಾ ಕೇಳಿದ್ದ ಪ್ರಶ್ನೆಗಳನ್ನೇ ದೊಡ್ಡ ದೊಡ್ಡ ತತ್ತ್ವಜ್ಞಾನಿಗಳೂ ಕೇಳಿದ್ದರು. ಅವರಿಗೆ ಉತ್ತರ ಸಿಕ್ಕಿದೆಯೇ? ಅವರೇ ಉತ್ತರಿಸಲಾಗದ ಪ್ರಶ್ನೆಗಳಿಗೆ ತಾನು ಉತ್ತರ ಹೇಳುವುದು ಹೇಗೆ ?"

ಗೋಪಾಲಿಯನ್ನು ಮುಂದಿಟ್ಟುಕೊಂಡು ಕರ್ಮಾಂತರ ಮುಗಿಸಿದುದೂ ಆಯಿತು. ಅಶುಭ ಕಾರ್ಯಕ್ಕೆ ಬಂದವರು ಮನೆಯಲ್ಲಿ ಹೆಚ್ಚು ದಿನ ನಿಲ್ಲುವಂತಿರಲಿಲ್ಲ. ಶ್ರೀದೇವಿ, ರಾಮು, ರಾಮಣ್ಣಾಚಾರ್ಯರು, ಭರಮೇಗೌಡ, ನಾಣಿ, ಚಿನ್ನಸ್ವಾಮಿ ಎಲ್ಲರೂ ಪ್ರಯಾಣ ಮಾಡಿದರು.

ರುಕ್ಮಿಣಮ್ಮ ಎಷ್ಟು ಹೇಳಿದರೂ ಲಕ್ಕಿ ಊರಿಗೆ ಹೋಗಲಿಲ್ಲ.

" ಕಮಲವ್ವ ಹೊಲೆಮನೆ ಬಿಟ್ಟು ಬರೋಟಂಕಾ ನಾನು ಊರ್ಗೆ ಓಗಾಕಿಲ್ರವ್ವಾ. ಎಳೇ ಬತ್ತೀಗೆ ಡಬ್ಬದ ಪುಡಿ ಆಕೋದು ನಂಗೆ ಇಷ್ಟ ಇಲ್ರವ್ವಾ."

" ಲಕ್ಕೀ - ಊರಿನಲ್ಲಿ ನಿನ್ನ ಮಕ್ಕಳು ನಿನ್ನ ದಾರಿ ನೋಡುತ್ತಿರುತ್ತಾರೆ ಕಣೇ. ಕಮಲೂ ಮಗೂನ ನಾನು ನೋಡಿಕೊಳ್ಳುತ್ತೇನೆ. ನೀನು ಊರಿಗೆ ಹೋಗು."

" ನಾನು ನಿಮ್ಮ ಮಗಳಲ್ಲ ಎಂದುಬಿಡ್ರವ್ವ - ಒಂಟೋಗ್ತೀನಿ ಇನ್ನು ನಿಮ್ಗೆ ಮಕಾ ತೋರ್ಸಾಕಿಲ್ಲ."

" ಯಾವ ಬಾಯಲ್ಲಿ ಆ ಮಾತು ಹೇಳಲೇ ಲಕ್ಕಿ. ಅವರಿಗೆ ಮಹಾಮಾರಿ ಬೇನೆ ಬಂದಿದ್ದಾಗ ನೀನೂ, ಭರಮಣ್ಣ ಮಾಡಿದ ಸೇವೆ ನಾನು ಮರೆತರೆ ದೇವರು ಮೆಚ್ಚುತ್ತಾನೆಯೇ ? "

" ಈ ಮಗಳೂ ತೌರುಮನೇಗೆ ನಾಕು ದಿವ್ಸ ಬಂದವ್ಳೆ ಅಂದ್ಕೊಳ್ರವ್ವಾ."

" ಹಾಗೇ ಆಗಲಿ ನನ್ನ ತಾಯಿ. ಋಣಾನುಬಂಧನಕ್ಕೆ ಅಡ್ಡಿಯಾಗುವುದಕ್ಕೆ ನಾನು ಯಾರು ? "

ಎಂದಳು.

## ೨

ಮನೆಯಲ್ಲಿ ಸಂಭವಿಸಿದ ವಿಪತ್ತಿನಿಂದ ಮಾಧವರಾಯನ ಜೀವ ತಲ್ಲಣಗೊಂಡಿತ್ತು. ಒಂದೆರಡು ತಿಂಗಳು ಕಳೆದರೂ ಮನಸ್ಸಿನ ಗಾಯ ಮಾಗಿರಲಿಲ್ಲ. ಜೀವನವೇ ಬೇಸರವಾಗಿ ಪ್ರತಿಯೊಂದು, ಕೆಲಸದಲ್ಲಿಯೂ ಆಲಸ್ಯ - ನಿರಾಶೆ ಮೂಡಿತ್ತು. ಕಛೇರಿಯ ಕೆಲಸಕ್ಕೂ ಮಾಧವರಾಯ ಹೆಚ್ಚು ಲಕ್ಷ್ಯಕೊಡುತ್ತಿರಲಿಲ್ಲ. ಮಾಧವರಾಯನ ಪರಿಸ್ಥಿತಿಯನ್ನರಿತಿದ್ದ ಕಕ್ಷಿಗಾರರೂ, ನ್ಯಾಯಧೀಶರೂ ಅವನನ್ನು ಸಹಾನುಭೂತಿಯಿಂದ ನೋಡುತ್ತಿದ್ದರು.

ವಾರಕ್ಕೆರಡು ಮೂರು ಬಾರಿ ಜವರೇಗೌಡರು, ಷರೀಫ್ ಸಾಹೇಬರು ಬಂದು ಮಾಧವರಾಯನನ್ನು ಜತೆಯಲ್ಲಿ ಕರೆದೊಯ್ಯುತ್ತಿದ್ದರು. ಲೋಕಾಭಿರಾಮದ ಮಾತುಗಳನ್ನಾಡಿ ಅವನ ಮನಸ್ಸು ಕ್ಷಣಕಾಲವಾದರೂ ದುಃಖ ಮರೆಯುವಂತೆ ಮಾಡುತ್ತಿದ್ದರು. ಲೋಕದ ಕಷ್ಟ ನಷ್ಟದ ಮಾತು ಯಾವದು ಬಂದರೂ ಮಾಧವರಾಯನ ಮನಸ್ಸಿನ ಗಡಿಯಾರದ ಮುಳ್ಳು ಸ್ವಸ್ಥಾನಕ್ಕೆ ಬಂದು ನಿಂತು ಬಿಡುತ್ತಿತ್ತು.

ಕಮಲನ ಭವಿಷ್ಯಚಿಂತನೆ ಮಾಧವರಾಯನನ್ನು ಎಡಬಿಡದೆ ಕಾಡುತ್ತಿತ್ತು. ಬೃಹದಾಕಾರದಲ್ಲಿ ನಿಂತಿರುವ ಸಮಸ್ಯೆಗೆ ಅವಕುಂಠನ ಹಾಕಿ ಆತ್ಮವಿಸ್ಮೃತಿ ಹೊಂದುವದಕ್ಕಿಂತ ಅದನ್ನು ಧೈರ್ಯವಾಗಿ

ಎದುರಿಸಿ, ಪರಿಹಾರೋಪಾಯ ಹುಡುಕುವುದೇ ಯುಕ್ತವಾದುದೆಂದು ನಿರ್ಧರಿಸಿದ ಜವರೇಗೌಡರು ಒಂದು ದಿನ ಕೇಳಿದರು,

"ಕಮಲಮ್ಮನಿಗೆ ಈಗ ಮೂರು ತಿಂಗಳು ಕಳೆಯಿತಲ್ಲವೇ ಸ್ವಾಮಿ."

"ಹೌದು ಗೌಡರೇ - ಕಾಲ ನೋಡಿ ಹೇಗೆ ಓಡುತ್ತಿದೆ. ದೀಪಾವಳಿ ಹಬ್ಬಕ್ಕೆ ಗೋವಿಂದ ನಿನ್ನೆ ಮೊನ್ನೆ ಬಂದು ಹೋದ ಹಾಗಿದೆ."

"ಮುಂದಿನ ಯೋಚನೆ ಏನು ಮಾಡಿರುವಿರಿ ?"

"ಯೋಚನೆ ಮಾಡುತ್ತಿದ್ದೇನೆ. ಯಾವ ನಿರ್ಧಾರಕ್ಕೆ ಬರುವುದೂ ಸಾಧ್ಯವಾಗಿಲ್ಲ - ನಿರ್ಧಾರಕ್ಕೆ ಬರುವುದಕ್ಕೆ ಧೈರ್ಯವೂ ಆಗಿಲ್ಲ."

"ಈ ಬಗ್ಗೆ ಸುಮ್ಮನೆ ಯೋಚಿಸುತ್ತ ಕುಳಿತರೆ, ಯೋಚನೆ ಬೆಳೆಯುತ್ತಲ್ಲದೆ ಯಾವ ಪ್ರಯೋಜನವೂ ಆಗುವುದಿಲ್ಲ."

"ನಿಜ. ಏನು ಮಾಡು ಎಂದು ಹೇಳುವಿರಿ ?"

"ಅಮ್ಮಾವರು ಏನು ಹೇಳುತ್ತಾರೆ ?"

"ಅವಳು, ಏನು ಹೇಳುತ್ತಾಳೆ. ಗೌಡರು, ನೀವು, ಸಾಹೇಬರು ಆಲೋಚಿಸಿ ನಿರ್ಧರಿಸಿದುದೇ ನನಗೂ ಸಮ್ಮತ ಎಂದು ಹೇಳುತ್ತಾಳೆ."

"ಕಮಲಮ್ಮ ತನ್ನ ಮಕ್ಕಳ ವಿಷಯ ಯೋಚನೆ ಮಾಡ ಬೇಕಾದದ್ದಿಲ್ಲ. ತಾವೂ ಅಮ್ಮಾವರೂ ಅವರಿಗೆ ಯಾವ ಕೊರತೆಯೂ ಆಗದಂತೆ ನೋಡಿಕೊಳ್ಳುವಿರಿ."

"ನೋಡಿಕೊಳ್ಳದಿದ್ದರೆ ಆಗುತ್ತದಯೇಪ್ಪ. ಮಾವನ ಕಡೆಯೂ ಅವಳಿಗೆ ಯಾವ ಆಧಾರವೂ ಇಲ್ಲ."

"ಕಮಲಮ್ಮನಿಗೆ ನಾಲ್ಕು ಎಕರೆ ಗದ್ದೆ ಮಾಡಿಕೊಟ್ಟರಾಯಿತು. ಆಕೆಯ ಜೀವನ ಸುಸೂತ್ರವಾಗಿ ಕಳೆದು ಹೋಗುತ್ತದೆ."

ಎಂದು ಷರೀಫ್ ಸಾಹೇಬರು ಸೂಚಿಸಿದರು.

"ಹೌದು ಸಾಹೇಬರೇ. ಅದನ್ನೂ ಮಾಡಬಲ್ಲೆ. ಆದರೆ ಮನೆಯಲ್ಲಿಯೇ ಕುಳಿತುಕೊಂಡು ಕಣ್ಣೀರಿನಲ್ಲಿ ಕೈ ತೊಳೆಯುತ್ತ ಅವಳು

ಕಾಲದೂಡುವುದು ಹೇಗೆ? ಕಮಲ ಸ್ವಭಾವತಃ ಬಹಳ ಸ್ವಾಭಿಮಾನಿ!"

"ತಂದೆಯ ಮಗಳಲ್ಲವೇ?" ಎಂದು ಗೌಡರು ಹಾಸ್ಯ ಮಾಡಿದರು.

"ತಂದೆಯ ಸ್ವಾಭಿಮಾನ ಮಗಳಿಗೆ, ಹಟಮಾರಿತನ ಮಗನಿಗೆ ಬಂದಿದೆಯೆಂದೂ ಹೇಳಿ ಗೌಡರೇ."

ಗೌಡರು ನಕ್ಕು

"ತಾವೇ ಹೇಳುತ್ತಿರುವಾಗ ನಾನೇಕೆ ಹೇಳಲಿ ಸ್ವಾಮಿ" ಎಂದರು.

"ಬಲು ಜಾಣರು ಕಣ್ರೀ ನೀವು– ನಿಮ್ಮ ಅಭಿಪ್ರಾಯ ನನ್ನ ಬಾಯಲ್ಲಿ ಆಡಿಸಿ ಉಪಾಯವಾಗಿ ನುಣುಚಿಕೊಳ್ಳುತ್ತೀರಿ."

"ದೊಡ್ಡ ಲಾಯರ ಸ್ನೇಹಿತರಾಗಿ ಅಷ್ಟೂ ನಾವು ಕಲಿಯದಿದ್ದರೆ ತಮಗೇ ಅಪಖ್ಯಾತಿ ಬರುತ್ತದೆ."

"ಏನೇನು ಬರುತ್ತದೋ ಬರಲಪ್ಪ."

"ಮನೆಯಲ್ಲಿ ಕುಳಿತು ಕಾಲ ತಳ್ಳುವುದು ಕಷ್ಟ. ಕಮಲಮ್ಮ ನನ್ನು ಮುಂದೆ ಏತಕ್ಕೆ ಓದಿಸಬಾರದು?"

"ಓದಿ ಮುಂದೆ...."

"ಓದುವುದು ಓದಲಿ - ಮುಂದೆ ಕಾಲಗತಿ ಏನಾಗುತ್ತದೋ ನೋಡೋಣ."

"ಅವಳು ಜಾಣೆ. ಓದಿನಲ್ಲಿ ಹಿಂದೆ ಬೀಳುವ ಹಾಗಿಲ್ಲ. ಆದರೆ ಮನೆಯಲ್ಲಿ ಏನು ಹೇಳುವರೋ?"

"ಯಾರು ಅಮ್ಮಾವರೇ?"

"ನಮ್ಮ ತಾಯಿ ಒಪ್ಪಬೇಕಲ್ಲ ಗೌಡರೇ."

"ದೊಡ್ಡ ಅಮ್ಮಾವರು ಓದಿಸುವುದಕ್ಕೆ ವಿರೋಧವೇ?"

"ತಾಯಿ ತುಂಬ ಹಳೆಯ ಕಾಲದವರು. ಹೆಣ್ಣುಮಕ್ಕಳಿಗೆ ಹೆಚ್ಚು ಓದು ಅವಶ್ಯಕವಿಲ್ಲ ಎನ್ನುವ ಅಭಿಪ್ರಾಯದವರು. ಈಗಿನ ಕಾಲದ ಕಾಲೇಜು, ಹಾಸ್ಟೆಲ್ಲು ಎಂದರೆ ಅವರಿಗೆ ತುಂಬ ಭಯ.

ನಾಣಿ ವರ್ತನೆ ಬೇರೆ ಈ ಭಯವನ್ನು ಪೋಷಿಸಿದೆ."

"ಅಮ್ಮಾವರನ್ನು ನೀವು ಒಪ್ಪಿಸಿದರೆ ದೊಡ್ಡ ಅಮ್ಮಾವರನ್ನ ಅವರು ಸುಲಭವಾಗಿ ಒಪ್ಪಿಸುತ್ತಾರೆ ಸ್ವಾಮಿ. ಅಮ್ಮಾವರ ಮಾತನ್ನು ಗೋದಮ್ಮನವರು ಎಂದಿಗೂ ವಿರೋಧಿಸುವುದಿಲ್ಲ."

"ನಮ್ಮ ಮನೆ ಗುಟ್ಟು ಬಯಲು ಮಾಡುತ್ತಿದ್ದೀರಲ್ರೀ ಗೌಡರೇ."

"ಇಲ್ಲಿ ಹೊರಗಿನವರು ಯಾರೂ ಇಲ್ಲವಲ್ಲ. ಸಾಹೇಬರೂ ತಮ್ಮ ಸಂಸಾರಕ್ಕೆ ಸೇರಿದವರು ತಾನೆ!"

"ಅದರಲ್ಲಿ ಸಂದೇಹವೇನು ? ನೀವಿಬ್ಬರೂ ನನ್ನ ಅಣ್ಣತಮ್ಮಂದಿರ ಹಾಗಿದ್ದೀರಪ್ಪಾ."

"ತಮ್ಮಂದಿರು ಸ್ವಾಮಿ - ಅಣ್ಣಂದಿರಲ್ಲ."

ಎಂದು ಷರೀಫ್‌ಸಾಹೇಬರು ತಿದ್ದುಪಡಿ ಸೂಚಿಸಿದರು.

ಗೌಡರು ಸೂಚಿಸಿದ ವಿಷಯ ಕೂಡಲೇ ರುಕ್ಮಿಣಿಯಲ್ಲಿ ಪ್ರಸ್ತಾಪಿಸುವುದಕ್ಕೆ ಮಾಧವರಾಯ ಆತುರ ಪಡಲಿಲ್ಲ.

ಕಮಲ ಹೊಲೆಮನೆ ವಾಸ ಮುಗಿಸಿಕೊಂಡು ಹೊರ ಬಂದಳು. ಸೌಭಾಗ್ಯ ಲಕ್ಕಿಯ ಆರೈಕೆಯಿಂದ ದಷ್ಟಪುಷ್ಟಳಾಗಿ ಬೆಳೆದಿದ್ದಳು.

ನಿರಕ್ಷರಕುಕ್ಷಿಯಾದ ಲಕ್ಕಿಯಲ್ಲಿ ಸ್ತ್ರೀಸಹಜವಾದ ಜಾಣ್ಮೆ ಯಿತ್ತು. ಐದು ತಿಂಗಳ ಅವಧಿಯಲ್ಲಿ ಅವಳು ಕಮಲನ ವಿಶ್ವಾಸ ಸಂಪಾದಿಸಿಕೊಂಡಿದ್ದುದಲ್ಲದೆ, ಗೌರವಕ್ಕೂ ಪಾತ್ರಳಾಗಿದ್ದಳು.

ಸೌಭಾಗ್ಯನ ಬಗ್ಗೆ ಕಮಲ ತೋರಿಸುತ್ತಿದ್ದ ಅನಾದರ ಲಕ್ಕಿಯ ಮನಸ್ಸಿಗೆ ಆತಂಕವನ್ನುಂಟುಮಾಡಿತ್ತು. ತಾಯಿ ಮಗಳನ್ನು ದ್ವೇಷಿಸುವುದು ಅಸ್ವಾಭಾವಿಕ, ಅಯೋಗ್ಯ ಎಂಬ ಭಾವನೆ ಅವಳ ಮುಗ್ಧ ಮನಸ್ಸಿನಲ್ಲಿ ಬೇರೂರಿತ್ತು. ಅವಕಾಶ ಸಿಕ್ಕಿದಾಗ ತನ್ನ ಕಥೆಯನ್ನೇ ನಿರೂಪಿಸುತ್ತಾ

"ಅವ್ವ ಇದಾಳಲ್ರ ಕಮಲವ್ವ....!"

"ಯಾರೇ ಅವ್ವ!"

"ನಮ್ಮತ್ತೇ ಕಣ್ರವ್ವ ಜೈರವ್ವ - ನೀವು ಕಾಣ್ರಾ ?"

"ಓಹೋ! ಅವರೇ - ಮುಂದೆ ಹೇಳು."

"ಕಂಡೋರ ಮಾತು ಕೇಳ್ಕೊಂಡು ಮಗನನ್ನೇ ಮನೆ ಬುಟ್ಟು ಒರಗೆ ಹಾಕಿದಳ್ರವ್ವಾ – ನಂಗೂ, ಮಕ್ಳಿಗೂ ಬಿಕ್ಸ ಬೇಡೋ ಪಾಡು ಬಂತು. ರಾಯ್ರು – ಮಾರಾಯ್ರು – ಇಂಥ ತಂಪೊತ್ತಿನಲ್ಲಿ ನೆನಸ್ಕೋಬೇಕು. ತಾಯಿ ಮಗನಿಗೆ ರಾಜಿ ಮಾಡಿಸಿದರವ್ವಾ. ಈಗೇನೂಂತೀರಿ - ಒಂದ್ಕ್ಸಣ ಮಗನ್ನ ಕಾಣ್ದೇಯಿದ್ರೆ ಮುದುಕಿ ಅನ್ನಾ ನೀರು ಬುಟ್ಟು ಕುಂತ್ಬಿಡತ್ತೆ. ನನ್ನ ಕಂಡರೂ ಹಂಗೆ ಪಿರೀತಿ ಮಾಡತ್ತೆ ಕಣ್ರವ್ವಾ! 'ನಿಂಗೀ–ನಿಂಗೆ ಬೋ ಕಸ್ಟಕೊಟ್ಟುಬುಟ್ಟೆ ಮನೆ ಆಳ್ರ ಮಾತು ಕೇಳ್ಕೊಂಡಿ–ನನ್ನ ಮ್ಯಾಕೆ ಜಿದ್ದು ಮಡಗ ಬೇಡವ್ವಾ ಕಣವ್ವಾ - ಈಗ್ನೀನೇ ಗೌಡ್ತಿ - ನಿಂಗೆ ಎಂಗೆ ಸಂತೋಸವೋ ಅಂಗೆ ಮಾಡು' ಎಂತೈತೆ."

"ಅದಕ್ಕೆ ನೀನೇನು ಹೇಳುತ್ತೀ ?"

"ಅಂಗೆಲ್ಲಾ ಆಯ್ತೈತಾ ಕಣಬ್ಬೆ. ನೀನು ಹಿರೇಳು–ನೀನು ಸಾಯೋಟಂಕಾ ನೀನೇ ಗೌಡ್ತಿ – ನಾನೂ ನಿನ್ನ ಮಗ–ತಪ್ಪು ಮಾಡಿದ್ರೆ ಬರ್ಲು ತಗೊಂಡು ಬಡಿ ಎಂತಾ ಏಳ್ದೆ ಕಣ್ರವ್ವಾ."

"ಒಂದಕ್ಷರ ಕಲಿಯದಿದ್ದರೂ ನಿನ್ನ ಮನಸ್ಸು ಎಷ್ಟು ಶುದ್ಧ ವಾಗಿದೆಯೇ ಲಕ್ಕಿ."

"ಅಕ್ಷರ ಕಲ್ತರೆ ಎಲ್ಲರೂ ದೊಡ್ರಾಯ್ರಂಗೆ ಆಯ್ತಾರೇನವ್ವಾ. ಕೇಸವಯ್ಯಂಗಾರೀನೂ ಅಕ್ಸರ ಕಲ್ತಿದ್ದ – ಅಕ್ಸರಕ್ಕಿಂತ ದರ್ಮ ದೊಡ್ಡದು ಕಣ್ರವ್ವಾ."

"ಧರ್ಮ ಎಂದರೇನೇ ಲಕ್ಕಿ."

"ಓಗ್ರವ್ವಾ - ಅಳ್ಳೀಮುಕ್ಕ ಅವೆಲ್ಲಾ ನಂಗೇನು ತಿಳೀತೈತೆ. ಅವ್ವಾವರ್ನ ಕೇಳಿದ್ರೆ ಪಸಂದಾಗಿ ಏಳ್ತಾರೆ."

ಎಂದು ಕಮಲನ ಮನಸ್ಸು ಪ್ರಸನ್ನಗೊಳಿಸಿ ಸೌಭಾಗ್ಯನ ಅಂದ ಚೆಂದ, ಆಟಪಾಟಗಳನ್ನು ಬಣ್ಣಿಸತೊಡಗುತ್ತಿದ್ದಳು. ತಿಂಗಳು

ಗಟ್ಟಳೆ ಲಕ್ಕಿ ಪಟ್ಟ ಪ್ರಯಾಸ ಸಾವಕಾಶವಾಗಿ ಫಲಕಾರಿಯಾಗ ತೊಡಗಿತು.

ಒಮ್ಮೊಮ್ಮೆ ಕಮಲ ತನ್ನ ಮಗುವಿನ ಗುಂಗುರುಕೂದಲನ್ನು ನೇವರಿಸುವಳು. ತಕ್ಷಣವೇ ಐದು ತಿಂಗಳ ಹಿಂದಿನ ಘಟನೆ ಜ್ಞಾಪಕಕ್ಕೆ ಬರುತ್ತಿತ್ತು. ಒಮ್ಮೊಮ್ಮೆ ಸೌಭಾಗ್ಯನ ನಿರ್ಮಲಹಾಸ ಕಂಡು ತಾನೂ ನಗುವಳು. ನಗೆ ಹುಟ್ಟಿದಲ್ಲಿಯೇ ಅಳಿಯುತ್ತಿತ್ತು.

ಸೌಭಾಗ್ಯನ ಮುಖ ತಂದೆಯ ಪ್ರತಿರೂಪವಾಗಿದ್ದುದನ್ನು ಕಂಡು ಕಮಲ ಹೆಮ್ಮೆಯಿಂದ ಅದನ್ನೇ ಎವೆಯಿಕ್ಕದೆ ನೋಡುವಳು. ಆದರೆ ಆ ಭಾವನೆಯೂ ಚಿಂತಾಗ್ನಿಯ ಮಹಾ ಕುಂಡಕ್ಕೆ ಆಹುತಿ ಯಾಗುತ್ತಿತ್ತು.

ಲಕ್ಕಿ ಹೆಚ್ಚುಕಾಲ ಮಂಡ್ಯದಲ್ಲಿ ನಿಲ್ಲುವಂತಿರಲಿಲ್ಲ. ಬೈರಮ್ಮ ಸೊಸೆಯನ್ನು ನೋಡಲು ಕಾತರಳಾದಳು. ಮಕ್ಕಳು ತಾಯಿಯನ್ನು ಬಯಸತೊಡಗಿದ್ದುವು. ಮಕ್ಕಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಮುದುಕಿಗೆ ಪ್ರಯಾಸವಾಗುತ್ತ ಬಂದಿತ್ತು.

ಭರಮೇಗೌಡ ಹೆಂಡತಿಯನ್ನು ಊರಿಗೆ ಕರೆದೊಯ್ಯಲು ಬಂದ. ಅಮ್ಮಾವರನ್ನ, ಕಮಲವ್ವನ್ನ, ಸೌಭಾಗ್ಯನ್ನ ಬಿಟ್ಟುಹೋಗಬೇಕೆಂದು ಲಕ್ಕಿ 'ಗೊಳೋ' ಎಂದು ಅತ್ತಳು. ರುಕ್ಮಿಣಮ್ಮ ಲಕ್ಕಿಯನ್ನು ಸಂತೈಸುತ್ತಾ

"ಹೋಗಿ ಬಾ ಲಕ್ಕಿ. ಹೆಣ್ಣುಮಕ್ಕಳಿಗೆ ತೌರುಮನೆ ಶಾಶ್ವತವಲ್ಲ. ಕರೆದುಕೊಂಡು ಹೋಗುವುದಕ್ಕೆ ನಿನ್ನ ಗಂಡ ಬಂದಿದ್ದಾನೆ."

"ಔದು ಕಣ್ರವ್ವಾ – ಇದೇ ನನ್ನ ತವರು – ನೀವೇ ನನ್ನ ಹಡೆದ ತಾಯಿ."

"ಲಕ್ಕೀ, ನಿನಗೆ ಪಾಯಸ ಮಾಡಿಹಾಕಿ, ಒಂದು ಕುಪ್ಪುಸದ ಕಣ ಕೊಡುವುದಕ್ಕೂ ಸಾಧ್ಯವಿಲ್ಲವಾಗಿದೆ. ಐದು ತಿಂಗಳು ಈ ಮನೆಗೆ ದೇಹ ತೇದೆ. ನಿನ್ನ ಬರಿಗೈಯಲ್ಲಿ ಕಳಿಸಬೇಕಲ್ಲಪ್ಪಾ."

"ಇನ್ನೊಂದ್ಸಾರಿ ಬಂದು ನನ್ನ ಬಾಕಿ ವಸೂಲ್ಮಾಡಿಕೊಂಡು ಓಗ್ತೀನ್ರವ್ವಾ - ನೀವು ಮನಸ್ಸು ಚಿಕ್ಕದುಮಾಡಿಕೊಳ್ಳಬೇಡಿ - ನಂಗೂ ಯಾವ ಸಂತೋಷಾ ಇದೇಂತಾ ಪಾಯಸವುಂಡು, ಕುಪ್ಪುಸ ತೊಟ್ಟು ಕೊಳ್ಳಲಿ ?"

ಎಂದು ಹೇಳಿದಳು. ಪ್ರಯಾಣದ ವೇಳೆ ಸಮೀಪಿಸಲು ಲಕ್ಕಿ ಕಮಲಮ್ಮನ ಬಳಿ ಬಂದು

"ಕಮಲವ್ವ ದುಕ್ಕ ಮರೆತು ಮಗಾನ ನೋಡ್ಕೊಳವ್ವ - ಮಗ ಜರಿದುಕೊಂಡ್ರೆ ನಿನ್ನ ಯಜಮಾನಪ್ಪನ ಕಣ್ಣಾಗೆ ನೀರು ಬತ್ತೈತವ್ವ."

ಎಂದಳು. ಕಮಲ ಲಕ್ಕಿಯನ್ನಪ್ಪಿಕೊಂಡು ಗಟ್ಟಿಯಾಗಿ ಅತ್ತುಬಿಟ್ಟಳು.

ಲಕ್ಕಿ ಹೋಗುವಮುನ್ನ ದೊಡ್ಡ ಅಮ್ಮಾವರಿಗೆ, ರಾಯರಿಗೆ ನಮಸ್ಕಾರಮಾಡಿ, ಮಕ್ಕಳನ್ನು ಮಾತನಾಡಿಸಿದಳು. ತನ್ನನ್ನು ಬೀಳ್ಕೊಡಲು ನಿಂತಿದ್ದ ರುಕ್ಮಿಣಮ್ಮನ ಕಾಲಿಗೆಬಿದ್ದು, ಕಣ್ಣೀರಿನ ಅಭಿಷೇಕ ಮಾಡಿದಳು. ರುಕ್ಮಿಣಮ್ಮ ಅವಳನ್ನು ಮೇಲಕ್ಕೆತ್ತಿ ಅಪ್ಪಿ ಕೊಂಡು, ಅವಳ ಕೈಗೆ ಎರಡು ನೋಟಿನ ಮಡಿಕೆಯನ್ನಿತ್ತಳು.

ಹೆಂಡತಿ ನೋಡಿದ ಬಿರುನೋಟಕ್ಕಂಜಿ ಭರಮೇಗೌಡನೂ ರಾಯರ, ಅಮ್ಮಾವರ ಕಾಲಿಗೆ ಬಿದ್ದ.

ಲಕ್ಕಿ ಹೊರಟುಹೋದಮೇಲೆ ಮತ್ತೆ ಮನೆಯಲ್ಲಿ ಮಂಕು ಸುತ್ತಿಕೊಂಡಿತು.

ಹಿಮಗಾಲ ಕಳೆದು ಬೇಸಿಗೆಯಾರಂಭವಾಗಿತ್ತು. ನಾರಾಯಣ ಸ್ವಾಮಿ ಪರೀಕ್ಷೆ ಮುಗಿಸಿಕೊಂಡು ಮಂಡ್ಯಕ್ಕೆ ಬಂದಿದ್ದ. 'ಪರೀಕ್ಷೆ ಯಲ್ಲಿ ಚೆನ್ನಾಗಿ ಮಾಡಿದ್ದೇನೆ. ಈ ಸಾರೆ ನನಗೆ ಫಸ್ಟ್‌ಕ್ಲಾಸೇ ಬರಬೇಕು' ಎಂದವನು ಹೇಳಿದ್ದನ್ನು ಕೇಳಿಯೇ ಮಾಧವರಾಯ, ರುಕ್ಮಿಣಮ್ಮ ಹಿಗ್ಗಿಹೋಗಿದ್ದರು. ಮಂಡ್ಯ ಕ್ಲಬ್ಬಿನ ಟೆನಿಸ್‌ಕೋರ್ಟು ನಾರಾಯಣಸ್ವಾಮಿಯದಾಯಿತು. ಬೆಳಿಗ್ಗೆ ಸಂಜೆ ಟೆನಿಸ್‌ಕೋರ್ಟಿ ನಲ್ಲಿ ಕಳೆದು, ಮಧ್ಯಾಹ್ನ ಮನೆಯಲ್ಲಿ ಥಾಮಸ್‌ಹಾರ್ಡಿಯ ಕಾದಂಬರಿ

ಗಳನ್ನೋದುತ್ತಿದ್ದ. ಅವನ ಅಭಿರುಚಿಗೆ ಹೊಂದಿಕೆಯಾಗುವ ಗೆಳೆಯರು ಕ್ಲಬ್ಬಿನಲ್ಲಿ ಸಿಕ್ಕಿದ್ದುದರಿಂದ ನಾರಾಯಣಸ್ವಾಮಿಗೆ ಮಂಡ್ಯದ ವಾಸ ಬೇಸರವೆನಿಸಲಿಲ್ಲ. ವಾರಕ್ಕೊಮ್ಮೆ ಮೈಸೂರಿಗೆ ಹೋಗಿ ಒಂದೆರಡು ಸಿನೀಮಾ ಚಿತ್ರಗಳನ್ನಾದರೂ ನೋಡಿ ಬರದಿದ್ದರೆ ಅವನಿಗೆ ಸಮಾಧಾನ ಇರುತ್ತಿರಲಿಲ್ಲ.

ಮನೆಯ ವಿಷಯದಲ್ಲಿ ನಾರಾಯಣಸ್ವಾಮಿ ತೋರುತ್ತಿದ್ದ ತಾತ್ಸಾರ ಮಾಧವರಾಯನಿಗೆ ಬೇಸರವನ್ನುಂಟುಮಾಡಿತ್ತು. ಆದರೆ ಈ ವಿಷಯಕ್ಕೆ ತಾನು ಪ್ರವೇಶಿಸಿ ಅನವಶ್ಯಕ ಘರ್ಷಣೆಗೆ ಕಾರಣ ನಾಗುವುದಕ್ಕಿಂತ ಸದ್ಯಕ್ಕೆ ತಾಟಸ್ಥ್ಯವಹಿಸುವುದೇ ಲೇಸೆಂದು ಭಾವಿಸಿದ್ದ.

ಕಮಲನ ಭವಿಷ್ಯ ಅನಿರ್ದಿಷ್ಟವಾಗಿಯೇ ಉಳಿದಿತ್ತು. ಒಂದು ದಿನ ರಾತ್ರಿ, ಊಟ ಮುಗಿದಮೇಲೆ ಮಾಧವರಾಯ ರುಕ್ಮಿಣಿಯನ್ನು ಜತೆಯಲ್ಲಿ ಕರೆದುಕೊಂಡು, ಮನೆಯ ಆವರಣದಲ್ಲಿದ್ದ ಕಲ್ಲುಬೆಂಚಿನ ಮೇಲೆ ಕುಳಿತು

" ನೀನೂ ನಾನೂ ಮಾತನಾಡುವುದಕ್ಕೆ ಅವಕಾಶವೇ ಆಗುವುದಿಲ್ಲ ರುಕ್ಕೂ" ಎಂದು ಹೇಳಿದ.

" ಹೌದು, ಜವಾಬ್ದಾರಿಗಳು ಹೆಚ್ಚುತ್ತಿವೆ. ನನ್ನ ದೇವರನ್ನೂ ನಾನು ಮಾನಸಿಕ ಪೂಜೆಯಲ್ಲಿಯೇ ತೃಪ್ತಿಗೊಳಿಸಬೇಕಾಗಿದೆ."

" ನೀನು ಅನುಭವಿಸುತ್ತಿರುವ ತಾಪತ್ರಯದಲ್ಲಿ ನನ್ನ ಸೇವೆ ಮಾಡಲಿಲ್ಲ ಎಂದು ಆಕ್ಷೇಪಿಸಲೇ ?"

" ನೀವು ಆಕ್ಷೇಪಿಸುತ್ತೀರಂತಲ್ಲ - ನನ್ನ ಜನ್ಮ ಸಫಲವಾಗುವುದು ಹೇಗೆ ?"

" ನಿನ್ನ ಜನ್ಮ ಹೊಸದಾಗಿ ಸಾಫಲ್ಯಪಡೆಯಬೇಕಾಗಿಲ್ಲ ರುಕ್ಕೂ. ನೀನು ಜೀವನ್ಮುಕ್ತೆ."

" ಗಂಡ ಹೆಂಡತಿಯನ್ನು ಜೀವನ್ಮುಕ್ತೆ ಎನ್ನುವುದು ಸಂಪ್ರದಾಯವಲ್ಲ."

"ಪಶುವಿನಂತೆ ಕಾಣುವುದು ಸಂಪ್ರದಾಯ. ಪಶು ಸಮಾನ ಳಾದವಳನ್ನು ಪಶುವಿನಂತೆ ಕಾಣಬೇಕಾಗುತ್ತದೆ; ಜೀವನ್ಮುಕ್ತ ಳಾದವಳನ್ನು ಹಾಗೇ ಕಾಣಬೇಕಾಗುತ್ತದೆ."

"ನನ್ನ ಭಾಗ್ಯಕ್ಕೆ ಯಾವ ಎಣೆಯೂ ಇಲ್ಲ ಎಂದು ಬಹಳ ಗರ್ವಪಡುತ್ತಿದ್ದೆ."

"ನಿನ್ನ ಗರ್ವ ಅಸಹಜವಾದುದಲ್ಲ."

"ಗರ್ವವೇ ಅಸಹಜ - ತಾಮಸಿಕ."

"ನೀನು ಯೋಚಿಸುತ್ತಿರುವ ವಿಷಯವೇ ನನ್ನ ಮನಸ್ಸನ್ನೂ ಕೊರೆಯುತ್ತಿದೆ."

"ನಾನು ಬಲ್ಲೆ - ಪರಿಹಾರವೇನು?"

"ಕಮಲ ಏನನ್ನುತ್ತಾಳೆ?"

"ಯೋಚನೆ ಮಾಡುವಷ್ಟು ಅವಳಿಗೆ ಮನಃಶಾಂತಿ ಇದೆಯೇ? ಸದ್ಯ ಅವಳಿಗೆ ಬುದ್ಧಿ ವಿಕಲ್ಪವಾಗದಿದ್ದರೆ ಸಾಕು."

"ಹಿಂದೊಮ್ಮೆ ನಾವು ಮಾತನಾಡುತ್ತಿರುವಾಗ ಜವರೇಗೌಡರು ಒಂದು ಸಲಹೆಯಿತ್ತರು. ಅವರ ಸಲಹೆ ವಿಚಾರಾರ್ಹವಾಗಿದೆ."

"ಗೌಡರು ಏನು ಹೇಳಿದರು?"

"ಕಮಲ ಸ್ಕೂಲು ಸೇರಿ ಓದು ಏತಕ್ಕೆ ಮುಂದುವರಿಸ ಬಾರದೆಂದು ಕೇಳಿದರು."

"ನ್ಯಾಯ. ಅವಳ ಮನಸ್ಸಿಗೂ ಬೇರೊಂದು ವಿಚಾರದ ಆಶ್ರಯ ಬೇಕಾಗಿದೆ. ಈಗಿರುವ ಪರಿಸ್ಥಿತಿಯಲ್ಲಿ ಅವಳ ಪ್ರಾಣ ಉಳಿಯುವುದೂ ದುಸ್ತರವಾಗುತ್ತದೆ. ಐದಾರು ತಿಂಗಳಿಗೇ ಹೇಗಾಗಿದ್ದಾಳೆ ನೋಡಿ. ತಲೆಯಲ್ಲಿ ಒಂದೊಂದು ಬಿಳಿಯ ಕೂದಲೂ ಕಾಣಿಸಿಕೊಳ್ಳುತ್ತಿದೆ."

"ಓದುವುದಕ್ಕೆ ಅವಳನ್ನು ಮೈಸೂರಿಗೆ ಕಳಿಸಿಕೊಡ ಬೇಕಾಗುತ್ತದೆ. ಹಾಸ್ಟಲಿನಲ್ಲಿಟ್ಟು ಓದಿಸಬೇಕಾಗುತ್ತದೆ."

"ಅಮ್ಮ ಏನು ಹೇಳುವರೋ?"

"ನನಗೂ ಅದೇ ಸಂದೇಹ. ಈ ಕಾಲದ ಕಾಲೇಜಿನ ಶಿಕ್ಷಣ

ವೆಂದರೆ ಅಮ್ಮ ಕಿಡಿಕಿಡಿಯಾಗುತ್ತಾಳೆ."

"ಹೆಣ್ಣುಮಕ್ಕಳು ಕಾಲೇಜು ಮೆಟ್ಟುವುದು ನನಗೂ ಇಷ್ಟವಿಲ್ಲ. ಕಾಲೇಜಿಗೆ ಮಣ್ಣು ಹೊತ್ತು ಬರುವ ಗಂಡುಮಕ್ಕಳೇ ಧರ್ಮ, ಸಂಪ್ರದಾಯ, ಗುರು ಹಿರಿಯರು, ತಾಯಿ ತಂದೆ, ಅಕ್ಕತಂಗಿಯರೆಲ್ಲರಿಗೂ ತಿಲೋದಕ ಬಿಡುವಾಗ ಹೆಣ್ಣುಮಕ್ಕಳ ಪಾಡೇನು? ಗೀತೆಯಲ್ಲಿ ಹೇಳಿರುವುದು ನಿಮಗೆ ನೆನಪಿರಬಹುದು

'ಕುಲಕ್ಷಯೇ ಪ್ರಣಶ್ಯಂತಿ
ಕುಲಧರ್ಮಾಃ ಸನಾತನಾಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನ-
ಮಧರ್ಮೋಽಭಿ ಭವತ್ಯುತ' ॥

'ಅಧರ್ಮಾಭಿಭವಾತ್ ಕೃಷ್ಣ
ಪ್ರದುಷ್ಯಂತಿ ಕುಲಸ್ತ್ರಿಯಾಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ
ಜಾಯತೇ ವರ್ಣಸಂಕರಃ' ॥

"ಕುಲವೆಲ್ಲ ನಾಶವಾದರೆ ಬಹುಕಾಲದಿಂದ ನಡೆದುಕೊಂಡು ಬಂದಿರುವ ಕುಲಧರ್ಮಗಳೆಲ್ಲ ಹೋಗಿಬಿಡುವುವು. ಕುಲಧರ್ಮಗಳು ಹಾಳಾದರೆ ಕುಲವನ್ನೆಲ್ಲ ಅಧರ್ಮವು ತುಳಿದುಬಿಡುವದು.

"ಕೃಷ್ಣ, ಅಧರ್ಮಕ್ಕೆ ಸೋಲುವುದರಿಂದ ಸತ್ಕುಲದ ಹೆಂಗಸರು ಕೆಡುವರು. ಹೆಂಗಸರು ಕೆಟ್ಟರೆ ಜಾತಿಯು ಬೆರಕೆಯಾಗುತ್ತದೆ."

"ಇಂಗ್ಲಿಷ್ ಶಿಕ್ಷಣವಲ್ಲದೆ ಬೇರೆ ವಿಧಿಯೇ ಇಲ್ಲವಾಗಿದೆ."

"ಇಂಗ್ಲಿಷ್ ಶಿಕ್ಷಣಕ್ಕಾಗಿ ನಾನು ಹೆದರುತ್ತಿಲ್ಲ. ಆ ಶಿಕ್ಷಣ ಪಡೆಯುವವರ ಮನಸ್ಸಿನ ಮೇಲಾಗುವ ಪರಿಣಾಮಕ್ಕಾಗಿ ನಾನು ಯೋಚಿಸುತ್ತಿದ್ದೇನೆ. ಇಂಗ್ಲಿಷಿನಲ್ಲಿ ಒಳ್ಳೆಯ ಗ್ರಂಥಗಳಿಲ್ಲವೇ - ಒಳ್ಳೆಯ ವಿಚಾರಗಳಿಲ್ಲವೇ?"

"ಏಕಿಲ್ಲ. ಬೈಬಲ್, ಇಮಿಟೇಷನ್ ಆಫ್ ಕ್ರೈಸ್ಟ್ (Imitation of Christ), ಸಂತ ಆಗಸ್ಟೀನನ ಆತ್ಮನಿವೇದನೆ

(Confessions of St. Augustine) ಪ್ಲೇಟೋ ಸಂಭಾಷಣೆಗಳು (Dialogues of Plato) ಮೊದಲಾದ ಗ್ರಂಥಗಳು ನಮ್ಮ ಗೀತೋಪನಿಷತ್ತುಗಳಂತೆ ದಿವ್ಯ ಜೀವನವನ್ನೇ ಆವಿಷ್ಕಾರಮಾಡುತ್ತವೆ. ಆದರೆ ನೀನು ಊಹಿಸುವಂತೆ ನಮ್ಮ ವಿದ್ಯಾರ್ಥಿಗಳಿಗೆ ಇವು ಬೇಕಾಗಿಲ್ಲ. ಕಾಲೇಜು ವಿದ್ಯಾಕ್ಷೇತ್ರವೆಂಬ ಭಾವನೆಹೋಗಿ ವಿಹಾರಕ್ಷೇತ್ರವೆಂಬ ಭಾವನೆ ಬೆಳೆದಿದೆ. —ನಮ್ಮ ದೌರ್ಭಾಗ್ಯ. "

" ಹಾಗಾದರೆ....? "

" ಸಮುದ್ರಕ್ಕೆ ಹೋಗುವವರು ಕೆಲವರು ಜೊಂಡು, ನೊರಜೆಗಳನ್ನು ತರುತ್ತಾರೆ; ಕೆಲವರು ಕಪ್ಪೆಯಚಿಪ್ಪು ಶಂಖ ತರುತ್ತಾರೆ; ಕೆಲವರು ಸಮುದ್ರದಲ್ಲಿ ಮುಳುಗಿ ಅನರ್ಘ್ಯ ಮುತ್ತುಗಳನ್ನಾಯ್ದು ತರುತ್ತಾರೆ. ಕಾಲೇಜೂ ಒಂದು ಮಹಾ ಸಮುದ್ರ. ನಮ್ಮ ಮಗು ಅನರ್ಘ್ಯ ಮುತ್ತುಗಳನ್ನೇ ಆಯ್ದುಕೊಂಡು ಬರುತ್ತದೆ. "

" ನಿಮಗೆ ನಂಬಿಕೆಯಿದ್ದರಾಯಿತು....ನಿಮ್ಮ ನಂಬಿಕೆಯೇ ನನ್ನ ನಂಬಿಕೆ. "

" ಅಮ್ಮನನ್ನು ಒಪ್ಪಿಸುವ ಭಾರ. "

" ನನಗಿರಲಿ. "

" ಗೋಪಾಲ, ಸೌಭಾಗ್ಯನನ್ನೇನು ಮಾಡುತ್ತೀ. "

" ನಾನು ನೋಡಿಕೊಳ್ಳುತ್ತೇನೆ. "

" ಮೈಸೂರಿನಲ್ಲಿ ಮನೆಮಾಡಿ, ಅಮ್ಮನನ್ನು ಕಳಿಸಿಕೊಟ್ಟರೆ...."

" ಅದು ಆಗದ ಮಾತು. ಕಮಲನ ಮನೆಯಲ್ಲಿ ನಾಲ್ಕುದಿನ ಇದ್ದು ನಾಣೆಮಾಡಿದ ಹಗರಣ ಜ್ಞಾಪಕವಿಲ್ಲವೇ? ಅಮ್ಮನಿಗೂ ವಯಸ್ಸಾಗುತ್ತಿದೆ. ಅವರ ದೃಷ್ಟಿಪಾಠವೂ ಮಂದವಾಗುತ್ತಿದೆ. ಈ ವಯಸ್ಸಿನಲ್ಲಿ ಅವರನ್ನು ದೂರ ಕಳಿಸಲು ನನಗೇ ಇಷ್ಟವಿಲ್ಲ. ಕಮಲ ಹಾಸ್ಟಲ್ಲಿನಲ್ಲಿರಲಿ. ಬೇಕಾದರೆ ಪದ್ಮನೂ ಹೋಗಿ ಅವಳ ಜತೆಯಲ್ಲಿರಲಿ. ಕಮಲನಿಗೂ ಜತೆಯಾಗುತ್ತದೆ. "

" ನೀನೊಬ್ಬಳೇ ಆಗುವೆಯಲ್ಲ ರುಕ್ಕೂ. "

" ಗೋಪಾಲಿ, ಸೌಭಾಗ್ಯ ನನ್ನ ಜೊತೆಯಲ್ಲಿರುತ್ತಾರಲ್ಲಾ ? "

" ಸೇವೆ - ಸೇವೆ - ಸಾಯುವವರೆಗೂ ನಿನಗೆ ಸೇವೆಯೇ ಆಯಿತಲ್ಲೇ ರುಕ್ಕೂ. "

" ಅಂದೊಂದು ಸ್ಥಿರವಾಗಿದ್ದರೆ ನನಗೆ ಸಾಕು. ಭಗವಂತನ ಮಕ್ಕಳ ಸೇವೆ ಮಾಡಿದರೆ ಭಗವಂತನ ಸೇವೆ ಮಾಡಿದಷ್ಟೇ ಪುಣ್ಯ"

ಎಂದು ಪ್ರಶಾಂತ ಚಿತ್ತಳಾಗಿ ನುಡಿದಳು.

೩

ಕಾಲೇಜ್ ಬಾಗಿಲು ತೆಗೆದು ಮಕ್ಕಳೆಲ್ಲಾ ಮೈಸೂರಿಗೆ ಪ್ರಯಾಣ ಮಾಡಿದರೂ ರುಕ್ಮಿಣಮ್ಮನಿಗೆ ವಿಶ್ರಾಂತಿ ಸಿಕ್ಕಲಿಲ್ಲ. ಪೂಜೆ ಪುರಸ್ಕಾರಾದಿಗಳಲ್ಲದೆ ಯಥಾ ಕ್ರಮದಂತೆ ವೈದ್ಯಕೀಯ ಸೇವೆಯೂ ನಡದೇ ಇತ್ತು. ಮಾಧವರಾಯನ ಕಕ್ಷಿಗಾರರ ಊಟೋಪಚಾರ ಗಳನ್ನೂ ನೋಡಿಕೊಳ್ಳಬೇಕಾಗಿತ್ತು. ಎಲ್ಲಕ್ಕೂ ಹೆಚ್ಚಾಗಿ ಸೌಭಾಗ್ಯನ ಯೋಗಕ್ಷೇಮ ಅವಳ ಕೊರಳಿಗೇ ಗಂಟು ಬಿದ್ದಿತ್ತು. ಗೋಪಾಲಿ ಅಜ್ಜಿಯ 'ಅಚ್ಚರಿಯ ಕಂದ' ನಾಗಿದ್ದುದರಿಂದ ಅವನ ಕಾಟವಿರಲಿಲ್ಲ.

ರುಕ್ಮಿಣಮ್ಮ ರೋಗಿಗಳನ್ನು ನೋಡಲು ಹೋಗಬೇಕಾದರೂ ಕಂಕುಳಲ್ಲಿ ಸೌಭಾಗ್ಯನನ್ನು ಎತ್ತಿಕೊಂಡೇ ಹೋಗುತ್ತಿದ್ದಳು. ಮುನಸೀಫ್ ಪದ್ಮನಾಭಯ್ಯನವರ ಹೆಂಡತಿ ಸುನಂದಮ್ಮ ಒಂದು ದಿನ

"ಈ ಬಾಲಸಂಸಾರವೂ ನಿಮಗೇ ಗಂಟು ಬಿತ್ತಲ್ರಿ ರುಕ್ಮಿಣಮ್ಮ" ಎಂದಳು.

"ಹೌದಮ್ಮ. ನನ್ನ ಮೊಮ್ಮಕ್ಕಳನ್ನು ನಾನು ನೋಡಿ ಕೊಳ್ಳದೆ ಇನ್ನು ಯಾರು ನೋಡಿಕೊಳ್ಳಬೇಕು?"

"ಕಮಲಮ್ಮನಿಗೆ ಅತ್ತೆಯ ಮನೆ ಕಡೆ ಯಾರೂ ಇಲ್ಲವೇ?"

"ಯಾರೂ ಇಲ್ಲ ಸುನಂದಮ್ಮ. ರಾಮಣ್ಣಾಚಾರ್ಯರ ಪೋಷಣೆ ಯಲ್ಲಿಯೇ ನಮ್ಮ ಅಳಿಯಂದಿರು ಬೆಳೆದರು."

"ಪದ್ದೂನೂ ಮೈಸೂರಿಗೇ ಕಳಿಸಿದ್ದೀರಂತೆ ;"

"ಹೌದು. ಕಮಲನಿಗೆ ಜತೆಯಾಗಿರಲಿ ಎಂದು ಕಳಿಸಿಕೊಟ್ಟೆ."

"ಪದ್ದು ಮದುವೆ ವಿಷಯ ಯೋಚನೆ ಮಾಡಬೇಡವೇ ?"

"ಮಾಡಬೇಕಮ್ಮ ಮಾಡಬೇಕು."

"ಈ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚು ಓದಿಸಿದರೆ ಗಂಡು ಸಿಕ್ಕುವುದು ತುಂಬ ಕಷ್ಟವಾಗುತ್ತೆ ರುಕ್ಮಿಣಮ್ಮ."

"ಇದೇನ್ರೀ ಹೀಗೆ ಹೇಳುತ್ತೀರಿ. ಬಿ. ಎ., ಎಂ. ಎ ಪಾಸು ಮಾಡಿದ ಹುಡುಗಿಯರನ್ನೇ ತಾವು ಮದುವೆಯಾಗುವುದೆಂದು ಈ ಕಾಲದ ಹುಡುಗರು ಹಟ ಹಿಡಿಯುತ್ತಾರೆ."

"ಆ ಭ್ರಾಂತಿಯೂ ಕೆಲಕಾಲವಿತ್ತು ರುಕ್ಮಿಣಮ್ಮ. ನಾನೂ ಆ ಭ್ರಾಂತಿಗೆ ಬಿದ್ದೇ ಕಲ್ಯಾಣಿಯನ್ನು ಓದಿಸಿದೆ. ಅವಳು ಬಿ. ಎ. (ಆನರ್ಸ್) ಪರೀಕ್ಷೆಯನ್ನು ಸೆಕೆಂಡ್ ಕ್ಲಾಸಿನಲ್ಲಿ ಮಾಡಿಕೊಂಡು ಮನೆಯಲ್ಲಿ ಕುಳಿತಳು. ಈಗವಳಿಗೆ ಗಂಡು ಗೊತ್ತುಮಾಡುವುದೇ ಪ್ರಯಾಸವಾಗಿದೆ. ಯಾರನ್ನು ಕೇಳಿದರೂ 'ಬಿ.ಎ.,ಎಂ.ಎ. ಪ್ಯಾಸುಮಾಡಿದ ಹುಡುಗಿಯರು ಸಂಸಾರ ಮಾಡುತ್ತಾರೆಯೇ ?' ಎಂದು ಮೂಗೆಳೆಯುತ್ತಾರೆ. ಮೊನ್ನೆ ಒಂದು ವರ ಗೊತ್ತುಮಾಡಿದೆವು. ಎಲ್ಲಾ ಒಪ್ಪಿಕೊಂಡದ್ದೂ ಆಗಿತ್ತು. ಕಲ್ಯಾಣಿ ಸೆಕೆಂಡ್‌ಕ್ಲಾಸ್ ಆನರ್ಸ್ ಎಂದು ಕೇಳಿದಕೂಡಲೆ ವರ ಹಿಂದೇಟು ಹೊಡೆದು ಬಿಟ್ಟ."

"ಅವನಿಗೇನು ನಷ್ಟವಾಗುತ್ತಿತ್ತು ?"

"ಅವನು ಬರೀ ಬಿ.ಎ. ತಾನು ಬಿ.ಎ. ಆಗಿ ಹೆಂಡತಿ ಆನರ್ಸ್ ಆಗಿರುವುದು ಗಂಡಿನ ಗೌರವಕ್ಕೆ ಕಡಿಮೆಯಲ್ಲವೇ ? ಓದಿಸಿದರೂ ಕಷ್ಟ-ಓದಿಸದಿದ್ದರೂ ಕಷ್ಟ. ಹೆಣ್ಣು ಹೆತ್ತವರ ಪಾಡು ಬೇಡ ಕಣ್ರೀ ?"

"ಈಗ ಕಲ್ಯಾಣಿ ಎಲ್ಲಿದ್ದಾಳೆ ?"

"ನನ್ನ ಮಗ ಬೊಂಬಾಯಿಗೆ ಕರೆದುಕೊಂಡು ಹೋಗಿದ್ದಾನೆ. ಅವನಲ್ಲಿ ಕಾರ್ಪೊರೇಷನ್ ಇಂಜನಿಯರಾಗಿದ್ದಾನೆ."

"ಕಲ್ಯಾಣಿಗೆ ಈಗ ವಯಸ್ಸೆಷ್ಟು ?"

"ಇಪ್ಪತ್ತೆರಡು ನಡೆಯುತ್ತ ಇದೆಯಮ್ಮ. ಕೇಳಿದವರಿಗೆಲ್ಲಾ ಹದಿನೆಂಟು ಇದೇ ತುಂಬಿತು ಎಂದು ಹೇಳುತ್ತಿದ್ದೇವೆ."

"ಸಮಯೋಚಿತ ಎಚ್ಚರಿಕೆ ಕೊಟ್ಟು ಉಪಕಾರ ಮಾಡಿದಿರಿ ಸುನಂದಮ್ಮ."

"ಪದ್ಮೂಗೆ ಎಲ್ಲಿಯಾದರೂ ಗಂಡು ನೋಡಿದ್ದೀರಾ?"

"ಇಲ್ಲಮ್ಮ - ಮನೆಗೆ ಬಂದೊದಗಿದ ಆಪತ್ತಿನಿಂದ ಯಾವದಕ್ಕೂ ಬುದ್ಧಿಯೇ ಓಡದಂತಾಯಿತು."

"ನಿಮ್ಮಂಥವರಿಗೆ ದೇವರು ಈ ದುಃಖ ಕೊಡಬಾರದಿತ್ತು ರುಕ್ಮಿಣಮ್ಮ."

"ನಮ್ಮ ಕರ್ಮವೂ ಸವೆಯಬೇಕಲ್ಲಮ್ಮ."

"ನೀವೇ ಕರ್ಮ ಮಾಡಿದವರಾದರೆ ನಮ್ಮ ಪಾಡು ಏನ್ರೀ?"

"ಬಿಡಿ ಸುನಂದಮ್ಮ - ಏನು ಮಾತು! ನಿಮ್ಮ ಹಾಗೆ ನಾನೂ ಮನುಷ್ಯಳು."

"ಹೌದು ತಾಯಿ ನಿಜ. ಬೀದಿಯಲ್ಲಿರುವ ಕಲ್ಲೂ ಕಲ್ಲೇ; ಗೋಪಾಲಕೃಷ್ಣಸ್ವಾಮಿ ಕಡೆದಿರುವ ಕಲ್ಲೂ ಕಲ್ಲೇ. ಒಂದಕ್ಕೆ ಕಲ್ಲಿನ ರೂಪ, ಇನ್ನೊಂದಕ್ಕೆ ಭಗವಂತನ ರೂಪ. ಅಷ್ಟೇ ವ್ಯತ್ಯಾಸ" ಎಂದರು.

ಕಾಲೇಜ್ ಶಿಕ್ಷಣದ ಬಗ್ಗೆ ಸುನಂದಮ್ಮ ಆಡಿದ ಅನುಭವ ಜನ್ಯ ಮಾತುಗಳು ರುಕ್ಮಿಣಮ್ಮನ ಮನಸ್ಸನ್ನು ಕೊರೆಯತೊಡಗಿತು. ಪದ್ಮನ ಮದುವೆ ಬೇಗ ಮಾಡಬಿಡಬೇಕೆಂಬ ಆಕಾಂಕ್ಷೆ ಅವಳ ಹೃದಯದಲ್ಲಿ ಬಲಿಯಿತು.

ಹಾಸ್ಟಲ್ಲಿನಲ್ಲಿದ್ದ ಕಮಲನನ್ನು ಕುರಿತೇ ರುಕ್ಮಿಣಮ್ಮ ಯೋಚಿಸುವಳು. ಗೆಳತಿಯರು, ಸಹಪಾಠಿಗಳ ಸಂಗಡ ಅವಳು ಹೇಗಿರುವಳೋ? ಹಾಸ್ಟಲ್ಲಿನ ವಾಸಕ್ಕೆ ಹೇಗೆ ಹೊಂದಿಕೊಂಡಿರುವಳೋ? ಗೆಳತಿಯರು ಕಮಲನ ಬಗ್ಗೆ ಸೌಹಾರ್ದದಿಂದ ನಡೆಯುತ್ತಿದ್ದಾರೆಯೇ?

ಕಮಲ, ಪದ್ಮ ಎರಡು ದಿನಕ್ಕೊಮ್ಮೆಯಾದರೂ ತಾಯಿಗೆ

ಕಾಗದ ಬರೆದು ತಮ್ಮ ಯೋಗಕ್ಷೇಮ ತಿಳಿಸುತ್ತಿದ್ದರು. 'ಇಲ್ಲಿ ಎಲ್ಲವೂ ಅನುಕೂಲವಾಗಿದೆ. ನೀನು ವೃಥಾ ಯೋಚನೆ ಮಾಡ ಬಾರದು' ಎಂದು ತಾಯಿಗೆ ತಿಳಿಸುತ್ತಿದ್ದರು. ಆದರೆ ತಾಯಿಯ ಯೋಚನೆ ತಾಯಿಗೆ!

ಅಕ್ಕತಂಗಿಯರು ಒಂದೇ ರೂಮಿನಲ್ಲಿರುವುದಕ್ಕೆ ಹಾಸ್ಟಲ್ ವಾರ್ಡನ್ ಮಿಸ್. ಚಂಚಲಾ ಮೊದಲು ಅಸಮ್ಮತಿ ವ್ಯಕ್ತಮಾಡಿದರು. ಕಮಲ, ಪದ್ಮ ವಾರ್ಡನ್ ರೂಮಿಗೆ ಹೋಗಿ ಅವರನ್ನು ಕಂಡಾಗ ಮಿಸ್. ಚಂಚಲಾ ಬಿಗುಮಾನದಿಂದಲೇ

"ಏನು ಬಂದಿರಿ?" ಎಂದು ಕೇಳಿದರು.

"ರೂಮಿನ ವ್ಯವಸ್ಥೆ ಬಗ್ಗೆ ಮಾತನಾಡಲು ಬಂದಿದ್ದೇವೆ. ಮ್ಯಾಡಂ."

"ವ್ಯವಸ್ಥೆ ಮುಗಿದಿದೆಯಲ್ಲ?"

"ನಾವಿಬ್ಬರೂ ಒಂದೇ ರೂಮಿನಲ್ಲಿರಲು ಬಯಸುತ್ತೇವೆ."

"ಇದು ಹಾಸ್ಟಲಮ್ಮ - ನಿಮ್ಮ ಮನೆಯಲ್ಲ. ನಿಮ್ಮ ಮನಸ್ಸು ಬಂದ ಹಾಗೆ ಇಲ್ಲಿರಲು ಸಾಧ್ಯವಿಲ್ಲ. ಹಾಸ್ಟಲ್ ಮೇಟ್ಸ್ (Hostel mates) ಎಲ್ಲರನ್ನೂ ನೀವು ಅಕ್ಕತಂಗಿಯರೆಂದೇ ಭಾವಿಸಬೇಕು."

"ಹಾಗೇ ಭಾವಿಸುತ್ತೇವೆ ಮ್ಯಾಡಂ. ಒಂದು ಕಷ್ಟವಿದೆ ಅದಕ್ಕಾಗಿ...."

"ಏನು ಕಷ್ಟ ಹೇಳಿ."

"ನಾನು ಸ್ವಲ್ಪ ಹಳೆಯ ಕಾಲದ ಮನೆಯಲ್ಲಿ ಬೆಳೆದವಳು. ಬೆಳಿಗ್ಗೆ ಪೂಜೆ ಪುರಸ್ಕಾರ ಇಟ್ಟುಕೊಂಡಿದ್ದೇನೆ."

"ನಿಮ್ಮ ಪೂಜೆ ಪುರಸ್ಕಾರಕ್ಕೆ ಯಾರು ಅಡ್ಡಿ ಮಾಡುತ್ತಾರೆ."

ಕಮಲ ನಿಸ್ಸಹಾಯಕತೆಯಿಂದ ತಲೆತಗ್ಗಿಸಿದಳು. ಪದ್ಮ ಮೆಲ್ಲನೆ ವಾರ್ಡನ್‌ರನ್ನು ಹೊರಗೆ ಕರೆದೊಯ್ದು ಕಮಲನ ಪರಿಸ್ಥಿತಿ ವಿವರಿಸಿದಳು. ವಾರ್ಡನ್ ಹಿಂದಿರುಗಿ ಬಂದು

"Is that so! I am very sorry (ಹಾಗೇನು! ನನಗೆ

ತುಂಬ ವ್ಯಸನವಾಗಿದೆ) ನೀವಿಬ್ಬರೂ ಒಂದೇ ರೂಮಿನಲ್ಲಿರಿ. ನನ್ನ ಅಭ್ಯಂತರವೇನೂ ಇಲ್ಲ."

ಎಂದರು. ಕಮಲನ ಮನಸ್ಸಿನಿಂದ ದೊಡ್ಡ ಭಾರ ಇಳುಹಿದಂತಾಯಿತು.

ಹಾಸ್ಟಲ್ಲಿನಲ್ಲಿದ್ದರೂ ಕಮಲನ ಜೀವನಕ್ರಮದಲ್ಲಿ ಏನೂ ವ್ಯತ್ಯಾಸವಾಗಲಿಲ್ಲ. ಬೆಳಿಗ್ಗೆ ಐದು ಗಂಟೆಗೆ ಎದ್ದ ಕೂಡಲೆ ಹಾಸಿಗೆಯ ಎದುರಿಗಿದ್ದ ಪತಿಯ ಭಾವಚಿತ್ರಕ್ಕೆ ಕೈಮುಗಿದು, ಸ್ನಾನ ಮುಗಿಸಿಕೊಂಡು ಬರುತ್ತಿದ್ದಳು. ಒಂದು ಗಂಟೆ ನಿಶ್ಚಲಚಿತ್ತದಿಂದ ಕುಳಿತು ಗೀತಾ ಪಾರಾಯಣ ಮಾಡಿ, ಪತಿಯ ಭಾವಚಿತ್ರಕ್ಕೆ ಹೂವೇರಿಸಿ ದೀರ್ಘದಂಡ ಪ್ರಣಾಮಮಾಡುತ್ತಿದ್ದಳು – ಪೂಜೆ ಮುಗಿದ ಮೇಲೆ ಪದ್ಮನನ್ನು ಎಬ್ಬಿಸುತ್ತಿದ್ದಳು.

ಸಂಜೆ ಕಾಲೇಜು ಮುಗಿದೊಡನೆಯೇ ಹಾಸ್ಟಲ್ಲಿಗೆ ಬಂದು ಸ್ವಲ್ಪ ಹೊತ್ತು ಸಹಪಾಠಿಯರ ಜತೆಯಲ್ಲಿ ಮಾತನಾಡುತ್ತಿದ್ದು ಪುನಃ ತಣ್ಣೀರುಸ್ನಾನ ಮಾಡಿ ಪೂಜೆಗೆ ಕೂಡುತ್ತಿದ್ದಳು. ಪೂಜೆ ಮುಗಿದೊಡನೆಯೇ ಪಾಠಗಳನ್ನು ಓದುತ್ತಿದ್ದು, ಬೆಲ್ ಆದ ಕೂಡಲೆ ಊಟ ಮುಗಿಸಿ ಬಂದು, ರಾತ್ರಿ ಹತ್ತು, ಹನ್ನೊಂದರವರೆಗೆ ಓದುತ್ತಿದ್ದು ಮಲಗುತ್ತಿದ್ದಳು.

ಬೆಳಿಗ್ಗೆ ಪಾಠ, ಕಾಲೇಜು, ಸಹಪಾಠಿಯರ ಸಂಗದಲ್ಲಿ ಕಮಲನಿಗೆ ಹೊತ್ತು ಹೋಗುತ್ತಿತ್ತು. ರಾತ್ರಿ ಕಳೆಯುವುದೆಂದರೆ ಅವಳಿಗೆ ಮೈನಡುಕ ಬರುತ್ತಿತ್ತು. ಕಣ್ಣುಗಳು ಸೋತು ಸೊರಗುವವರೆಗೂ ಓದುತ್ತ ಕುಳಿತುಕೊಳ್ಳುವಳು. ನಿದ್ರೆ ಬರುವಂತಾಗಲು, ಹಾಸಿಗೆ ಸೇರಿದರೆ ನಿದ್ರೆ ಮಾಯವಾಗುತ್ತಿತ್ತು. ನಿದ್ರೆಯ ಬದಲು ನೂರೆಂಟು ಚಿಂತೆಗಳು - ನೆನಪುಗಳು.

'ಗಂಡ ಮನೆಗೆ ಬಂದಾನೇ ಎಂದು ತಾನು ಕಾಯುತ್ತಿದ್ದುದು. ಅವನು ತಡ ಮಾಡಿ ಬಂದರೆ ಮುನಿಯುತ್ತಿದ್ದುದು. ಅವನು ನಿದ್ದೆ ಹೋಗದಂತೆ ತಾನು ಕಾಡುತ್ತಿದ್ದುದು. ಅವನು ಮಾರನೆಯ ದಿನದ

ಪಾಠಗಳನ್ನು ಸಿದ್ಧ ಮಾಡಿಕೊಳ್ಳಲು ಕುಳಿತರೆ ತಾನು ಪುಸ್ತಕ ಕಿತ್ತು ಕೊಳ್ಳುತ್ತಿದ್ದುದು, – ಮೊದಲಾದ ಜೀವನಾರಂಭದ ಅನುಭವಗಳು!'

ತರುವಾಯ – ಗೋಪಾಲಿ ಹುಟ್ಟಿದ್ದ. ಬೆಳಿಗ್ಗೆಯೆಲ್ಲಾ ಚೆನ್ನಾಗಿ ನಿದ್ರೆ ಮಾಡಿ, ರಾತ್ರಿಯಾಗುತ್ತಲೇ ಆಟ ಆರಂಭಿಸುತ್ತಿದ್ದ ಗೋಪಾಲಿಯ ಮೇಲೆ ತಾನು ರೇಗಿದಾಗ ಗಂಡ ಕೆಣಕು ಧ್ವನಿಯಲ್ಲಿ 'ಗೋಪಾಲಿ ಕಂಡರೆ ತುಂಬ ಕೋಪ ಬರುತ್ತದಲ್ಲವೇ!' ಎಂದು ಏಡಿಸುತ್ತಿದ್ದುದು. 'ನಮ್ಮ ಕಷ್ಟ ಗಂಡನರು ನಿಮಗೇನು ಗೊತ್ತಾಗುತ್ತದೆ. ದಿನಾ ನಾನು ನಿದ್ದೆಗೆಟ್ಟು ಕಾಹಿಲೆಬಿದ್ದರೆ ಗೋಪಾಲಿ ನೋಡಿಕೊಳ್ಳುತ್ತಾನೆಯೇ?'— 'ಗೋಪಾಲಿ ನೋಡಿಕೊಳ್ಳದಿದ್ದರೆ ಅವನಪ್ಪ ನೋಡಿಕೊಳ್ಳುತ್ತಾನೆ.' 'ಆಹಾ! ನೀವೋ ನೋಡಿಕೊಳ್ಳುವವರು? ಕಾಲೇಜಿನ ಉದ್ಧಾರ ಒಂದು ಬಿಟ್ಟು ನಿಮಗೇನೂ ಬೇಕಾಗಿಲ್ಲ.'

ಆಗ ಗೋವಿಂದ ಮಾರ್ದವತೆಯಿಂದ, ಕಮಲನ ಕೈ ಹಿಡಿದು ನಲ್ನುಡಿಯಲ್ಲಿ 'ನನಗೂ ಕಾಲೇಜು ಹೊಸದು, ಕಮಲಾ. ನಾವು ಒಳ್ಳೆಯ ಹೆಸರು ಸಂಪಾದಿಸದಿದ್ದರೆ ಪ್ರೈವೇಟ್ ಕಾಲೇಜುಗಳಲ್ಲಿ ಏಗುವುದು ಬಹಳ ಕಷ್ಟ. ಪಾಠ ಪ್ರವಚನಗಳನ್ನು ಸರಿಯಾಗಿ ನಡಸಿ ವಿದ್ಯಾರ್ಥಿಗಳಿಂದಲೂ ಪ್ರಿನ್ಸಿಪಾಲರಿಂದಲೂ ನಾನು ಶಹಭಾಸ್ ಅನ್ನಿಸಿ ಕೊಳ್ಳಬೇಕಾಗಿದೆ' ಎಂದು ಸಮಾಧಾನ ಮಾಡುತ್ತಿದ್ದುದು.

'ನಿಮ್ಮ ಮೇಲೆ ಎಷ್ಟು ಕೋಪಮಾಡಿಕೊಳ್ಳುತ್ತಿದ್ದೆ. ಸಣ್ಣ ಪುಟ್ಟ ವಿಷಯಗಳಿಗೂ ನಾನೆಂಥಾ ಚಂಡಿಯಂತೆ ಆಡುತ್ತಿದ್ದೆ. ಒಂದು ದಿನವೂ ನೀವು ನನ್ನ ಮೇಲೆ ಕೋಪ ಮಾಡಿಕೊಳ್ಳಲಿಲ್ಲ. ತುಂಟ ಮಗುವನ್ನು ಆದರಿಸುವಂತೆ ಆದರಿಸಿದಿರಿ. ನಿಮ್ಮ ಮನಸ್ಸು ಎಷ್ಟು ನೋಯಿಸಿದೆ ಸ್ವಾಮಿ – ನನ್ನಲ್ಲಿ ಬೇಸರಗೊಂಡು ನನ್ನ ಕೈಬಿಟ್ಟು ಬಿಟ್ಟಿರಾ?'

ಚಿತ್ರ ಪಠದಿಂದ ಹೊರಗೆ ಧುಮುಕಿ ಗೋವಿಂದ ಹೆಂಡತಿಯನ್ನಪ್ಪಿ 'ಹುಚ್ಚು ಮಾತಾಡಬೇಡ ಕಮಲಾ. ಹುಡುಗಾಟಿಕೆ – ತುಂಟತನ ದಾಂಪತ್ಯದ ಅಂಗಗಳಲ್ಲವೇ? ಕೋಪಗೊಂಡ ನಿನ್ನ ಮುಖ

ದಲ್ಲಿಯೂ ಚೆಲುವಿದೆ ರಾಣಿ. ಶಾಂತವಾಗಿರುವ ಸಾಗರವೂ ಸುಂದರ ವಾಗಿರುತ್ತದೆ; ಭಯಂಕರ .ಬಿರುಗಾಳಿಗೆ ಸಿಕ್ಕಿ ಅಲ್ಲೋಲ ಕಲ್ಲೋಲ ವಾಗಿರುವ ಸಮುದ್ರವೂ ಸುಂದರವಾಗಿರುತ್ತದೆ. ಒಂದು ಶಾಂತಿ ಸುಂದರ, ಇನ್ನೊಂದು ರುದ್ರ ಸುಂದರ!'

'ಎಂಥಾ ದೈವಿಕ ಸಹನೆ ನಿಮ್ಮದು, ಸ್ವಾಮಿ. ನಿಮ್ಮ ಮನಸ್ಸು ಕನ್ನಡಿಯಂತೆ ಎಷ್ಟು ನಿಷ್ಕಲ್ಮಷವಾದುದು!'

'ಕಮಲಾ, ನಾನು ಅನಾಥ. ನಿರ್ಭಾಗ್ಯನಾದ ನಾನು ನನ್ನ ತಾಯಿ ತಂದೆಗಳ ಮುಖ ಕೂಡ ನೋಡಲಿಲ್ಲ. ರಾಮಣ್ಣಾಚಾರ್ಯರೇ ನನ್ನ ಭಾಗದ ದೇವರು. ತಾತಯ್ಯನವರೇ ನನ್ನ ತಂದೆಯಾದರು. ಅವರ 'ಅನಾಥಾಲಯ'ದಲ್ಲಿ ನಾನು ಬೆಳೆದು-ವಿದ್ಯೆ ಕಲಿತೆ. ನನ್ನ ಪೂರ್ವಜನ್ಮಪುಣ್ಯ ಪರಿಪಾಕದಿಂದ ನಿನ್ನ ಕೈ ಹಿಡಿದೆ. ನಿನ್ನ ತಂದೆ, ತಾಯಿ ನನ್ನ ತಂದೆ, ತಾಯಿಯಾದರು. ನಿನ್ನ ತಾಯಿಯ ವಿಶ್ವಾಸ, ಅಂತಃಕರಣ, ಭೂತಾನುಕಂಪ ನನ್ನ ಜೀವನದ ಎಲ್ಲ ಕೊರತೆಗಳನ್ನೂ ತುಂಬುತ್ತ ಬಂದವು. ತಾಯಿದೇವಿಯನ್ನು ಕಾಣದಿದ್ದ ನಾನು ತಾಯಿ ದೇವಿಯನ್ನು ಕಂಡೆ. ಅವರ ದಿವ್ಯ ಚರಣಗಳಲ್ಲಿ ತಲೆಯಿಟ್ಟು ನಮಸ್ಕರಿಸಿದಾಗ ನನ್ನ ದೇಹಾದ್ಯಂತದಲ್ಲಿ ವಿದ್ಯುತ್ ಸಂಚಾರ ವಾಗುತ್ತಿತ್ತು. ಆಗ ನಾನು ಅನುಭವಿಸುತ್ತಿದ್ದ ದಿವ್ಯಾನಂದಕ್ಕೆ ಯಾವ ಹೋಲಿಕೆ ಕೊಡಲಿ.'

ಕಮಲನ ಕಂಠ ಬಿಗಿದು ಬರುತ್ತಿತ್ತು. ಕಣ್ಣುಗಳಲ್ಲಿ ಕೋಡಿ ಹರಿಯುತ್ತಿತ್ತು. ಒಮ್ಮೊಮ್ಮೆ ಅವಳ ಅಳು ಪದ್ಮನನ್ನು ಎಚ್ಚರ ಗೊಳಿಸುತ್ತಿತ್ತು.

"ಅಳುತ್ತಿರುವೆಯಾ ಅಕ್ಕ"

"ಇಲ್ಲ ಪದ್ದು – ಮಲಗಿಕೊಂಡು ನಿದ್ರೆ ಮಾಡು."

ಪದ್ಮ ಎದ್ದು ಬಂದು ಅಕ್ಕನ ಪಕ್ಕದಲ್ಲಿ ಮಲಗಿ ಅಕ್ಕನನ್ನು ಬಿಗಿಯಾಗಿ ಅಪ್ಪಿಕೊಳ್ಳುತ್ತಿದ್ದಳು. ತಂಗಿಯ ಸಹಾನುಭೂತಿ ಅಕ್ಕನ ಉಮ್ಮಳವನ್ನು ತುಸು ಕಡಮೆ ಮಾಡುತ್ತಿತ್ತು.

"ಅಳಬೇಡ ಅಕ್ಕ. ನೀನು ಅತ್ತರೆ ಸ್ವರ್ಗದಲ್ಲಿರುವ ಜೀವಕ್ಕೆ ಹಿಂಸೆಯಾಗುವುದಂತೆ."

"ಇಲ್ಲ ಪದ್ದು. ನಾನು ಅಳುವುದಿಲ್ಲ–ನನ್ನ ಸ್ವಾಮಿಗೆ ಅಶ್ರೇಯಸ್ಸು ಬಯಸುವುದಿಲ್ಲ."

"ಅಳುವುದಿಲ್ಲ ಎಂದು ಅಳುತ್ತಲೇ ಇರುವೆಯಲ್ಲಾ ಅಕ್ಕ."

"ಪದ್ದು–ಪದ್ದು ನನ್ನ ಸ್ವಾಮಿಯನ್ನು ಬಿಟ್ಟಿರಲಾರೆ ಕಣೇ."

ಪದ್ಮನ ಕಣ್ಣುಗಳಲ್ಲಿಯೂ ದುಃಖಜಲ ಚಿಲುಮೆಯಂತೆ ಚಿಮ್ಮುತ್ತಿತ್ತು.

"ಅತ್ತು ಅತ್ತು ನಿನ್ನ ಕಣ್ಣು ಇಂಗಿಹೋಗುತ್ತದಲ್ಲೇ ಕಮಲಕ್ಕ."

"ಅವರೇ ಇಲ್ಲದಿರುವಾಗ ಅವರನ್ನು ನೋಡುವ ಕಣ್ಣು ಇಂಗಿ ಹೋದರೇನೇ ಪದ್ದು."

"ಅಯ್ಯೋ–ಹಾಗನ್ನಬೇಡಮ್ಮ."

ಎಂದು ಆರ್ತಳಾಗಿ ಮೊರೆಯಿಡುತ್ತಿದ್ದಳು. ಕಮಲಮ್ಮ ಉದ್ದೇಶ ಪೂರ್ವಕವಾಗಿ–ಪದ್ಮನನ್ನು ಸಂತೈಸಲು–ತನ್ನ ಅಳುವನ್ನು ತಡೆಗಟ್ಟ ಲೆತ್ನಿಸುವಳು. ಆದರೆ ಆದರೆ ....

೪

ನಾರಾಯಣಸ್ವಾಮಿ ರೂಮಿನಲ್ಲಿ ಗೆಳೆಯರ ಸಭೆ ಸೇರಿತ್ತು. ಚಿನ್ನಸ್ವಾಮಿ, ಶ್ರೀಧರರಲ್ಲದೆ ನಾರಾಯಣಸ್ವಾಮಿಯ ನೂತನ ಸ್ನೇಹಿತ ಶಿವಣ್ಣನೂ ಸಭೆಗೆ ಬಂದಿದ್ದ. ಟೆಸ್ಟ್ ಕ್ರಿಕೆಟ್ ಮ್ಯಾಚುಗಳ (Test Cricket matches) ಬಗ್ಗೆ ಚರ್ಚೆಯಾರಂಭವಾಗಿ ಅಮರನಾಥನನ್ನು ಕ್ಯಾಪ್ಟನ್ ಮಾಡಿದುದಕ್ಕೆ ಶಿವಪ್ಪ ತೀವ್ರ ವಿರೋಧ ವ್ಯಕ್ತಪಡಿಸಿದ.

"ಅಮರನಾಥ್ ಯದ್ವಾತದ್ವಾ ಆಸಾಮಿ. ಸ್ಥಿರವಾಗಿ (Steady) ಆಡುವುದನ್ನೇ ಅವನರಿಯ. ಸೆಂಚುರಿ ಹೊಡೆಯುವುದೆಷ್ಟು ಸುಲಭವೋ ಅವನಿಗೆ ವಿಕೆಟ್ ಕೈಬಿಟ್ಟು ಬ್ಯಾಟ್ ಬಿಸುಡುವುದೂ ಅಷ್ಟೇ ಸುಲಭ. ಇದೂ ಅಲ್ಲದೆ ಮಹಾ ಜಗಳಗಂಟಕ. ಟೀಮಿನ ಇತರ ಆಟಗಾರರ ಮೇಲೆಲ್ಲಾ ಜಗಳವಾಡಿ. ಟೀಮಿನ ನೀತಿ (morale) ಹಾಳು ಮಾಡುತ್ತಾನೆ."

ಎಂದು ಶಿವಣ್ಣ ಆಪಾದನೆಯ ಪಟ್ಟಿಯನ್ನೇ ಸಿದ್ಧಪಡಿಸಿದ.

ಸ್ವಯಂ ಕ್ರಿಕೆಟ್ ಆಟಗಾರನಾಗಿದ್ದ ಶ್ರೀಧರ ಚರ್ಚೆಗೆ ಬಾಯಿ ಹಾಕಲು ಚಿನ್ನಸ್ವಾಮಿ ಅಮರನಾಥ್‌ನ ಪರವಾಗಿ ವಾದಿಸಬೇಕಾಯಿತು.

"ಹಿಂದೆ ವಿಜಯನಗರದ ಯುವರಾಜ ಕುಮಾರ ಕಂಠೀರವ ಕ್ಯಾಪ್ಟನ್ ಆಗಿದ್ದಾಗ ಅಮರನಾಥ್ ಜಗಳ ಕಾದದ್ದುಂಟು. ಅದರ

ನಿಜವಾದ ಕಾರಣವನ್ನರಿಯದೆ ಅಮರನಾಥ್‌ನನ್ನು ಆಕ್ಷೇಪಿಸಿ ಏನು ಪ್ರಯೋಜನ. ಯುವರಾಜ ಕುಮಾರರು ಕ್ರಿಕೆಟ್ ಆಟದ ಬಯಲನ್ನು ತಮ್ಮ ಅರಮನೆ ಅಂಗಳವೆಂದು ತಿಳಿದುಕೊಂಡರು ಜತೆಯ ಆಟಗಾರರನ್ನು ತಮ್ಮ 'ಜೋಹುಕುಂ' ಸೇವಕರಂತೆ ಕಾಣಲಾರಂಭಿಸಿದರು. ಸ್ವಾಭಿಮಾನಿಯಾದ ಅಮರನಾಥ್ ಅವರ ದರ್ಪ, ದಬ್ಬಾಳಿಕೆಯನ್ನೆದುರಿಸಬೇಕಾಗಿಬಂತು. ಈಗ ಪರಿಸ್ಥಿತಿ ಬದಲಾಗಿದೆ. ಸ್ವಯಂ ಅಮರನಾಥ್‌ನೇ ಕ್ಯಾಪ್ಟನ್ ಆದ್ದರಿಂದ ಜತೆ ಆಟಗಾರರನ್ನು ಚೆನ್ನಾಗಿ ಕಾಣುವುದು ಎಷ್ಟು ಆವಶ್ಯಕವೆಂಬುದನ್ನು ಅವನು ಸ್ವಾನುಭವದಿಂದ ಬಲ್ಲ-ಆಸ್ಟ್ರೇಲಿಯಾದ ವಿಶ್ವವಿಖ್ಯಾತ ಟೀಮಿನ ಜತೆ ಆಡುವಾಗ ತಾವು ಎಚ್ಚರವಾಗಿರಬೇಕೆಂಬುದನ್ನೂ ನಮ್ಮವರು ಬಲ್ಲರು. ಪ್ರತಿಯೊಬ್ಬ ಆಟಗಾರನೂ ತನ್ನ ಆಟದಮೇಲೆ ಭಾರತದ ಕೀರ್ತಿ, ಗೌರವ ಅವಲಂಬಿಸಿದೆ ಎಂದು ತಿಳಿದುಕೊಂಡೇ ಆಡುವುದರಿಂದ ನಮ್ಮವರ ಆಟ ಮೇಲುಮಟ್ಟದ್ದಾಗಿರುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಆಲ್ ರೌಂಡರ್ (All rounder) ಆದ ಅಮರನಾಥ್‌ನನ್ನು ಕ್ಯಾಪ್ಟನ್ ಮಾಡಿ ಕ್ರಿಕೆಟ್ ಬೋರ್ಡ್‌ನವರು ಭಾರತದ ಗೌರವ ಕಾಪಾಡಿದರು."

"ಯುವರಾಜಕುಮಾರನ ಪ್ರಕರಣವೇ ಮತ್ತೆ ಸಂಭವಿಸುವುದಿಲ್ಲವೆಂದು ಹೇಗೆ ಹೇಳುವುದು. ಕ್ಯಾಪ್ಟನ್ ಎಂಥವನೇ ಆಗಿರಲಿ, ಅವನು ಏನೇ ಹೇಳಲಿ ಅವನ ಮಾತು ಕೇಳಿ ಟೀಮಿನ ಶಿಸ್ತು ಕಾಪಾಡುವುದು ಆಟಗಾರನ ಧರ್ಮ. ತನ್ನ ಕ್ಯಾಪ್ಟನ್ನಿನ ಗೌರವ ಕಾಯದಿದ್ದ ಅಮರನಾಥ್ ಈಗ ತಾನು ಗೌರವ ದೊರಕಿಸಿಕೊಳ್ಳಬಲ್ಲನೇ?"

ಎಂದು ಶ್ರೀಧರ ಕೋರಿ ಹಾಕಿದ.

"೧೯೪೭ರ ತರುವಾಯ ನಮ್ಮ ರಾಷ್ಟ್ರದ ಮನೋಭಾವವೇ ಬದಲಾಗಿಲ್ಲವೇ ಶ್ರೀಧರ. ಅಮರನಾಥ್ ಈಗ ಆಡುತ್ತಿರುವುದು ಭಾರತದ ಪರವಾಗಿಯಲ್ಲವೇ? ನಮ್ಮಷ್ಟೇ ಅವನೂ ದೇಶಾಭಿಮಾನಿಯಾಗಿದ್ದಾನೆ. ಯಾವದೋ ಹಳೆಯ ಕಾರಣಕ್ಕೆ ಅವನಂಥ ಪ್ರತಿಭಾ

ವಂತ ಆಟಗಾರನನ್ನು ದೂರವಿಡುವುದು ಯಾವ ನ್ಯಾಯ ?"

"ಅವನನ್ನು ಟೀಮಿನ ಹೊರಗಿಡಬೇಕೆಂದು ನಾವು ಹೇಳಲಿಲ್ಲ ಚಿನ್ನಸ್ವಾಮಿ. ಟೀಮಿನ ಕ್ಯಾಪ್ಟನ್ ಮಾಡಬಾರದಾಗಿತ್ತು ಎಂದು ಹೇಳುತ್ತಿದ್ದೇವೆ."

"ಅವನ ವಯಸ್ಸು, ಅನುಭವ, ಪ್ರತಿಭೆಗೆ ಗೌರವ ತೋರಿಸ ಬೇಕಾದುದು ನಮ್ಮ ಧರ್ಮ."

"ಹೋಗಲಿ ಬಿಡ್ರಪ್ಪ. ಏನು ಮಾತು! ಇನ್ನೇನಾದರೂ ಮಾತನಾಡಿ."

ಎಂದು ನಾರಾಯಣಸ್ವಾಮಿ ಸೂಚಿಸಿದ.

ಸಹಜವಾಗಿ ಮಾತು ಸಿನೀಮಾ ನಟ ನಟಿಯರ ಬಗ್ಗೆ ಹೊರ ಟಿತು. ನರ್ಗೀಸ್, ರಾಜಕಪೂರ್, ದಿಲೀಪ್, ಕಾಮಿನಿ ಕೌಶಲ್, ಮೀನಾ, ಭರತ್‌ಭೂಷಣ್ ಇವರ ಅಭಿನಯ ರಾಮುಚಂದರ್, ತಲತ್ ಮುಹಮುದ್, ನೌಷದ್ ಇವರ ಸಂಗೀತ ದಿಗ್ದರ್ಶನ, ಷಂಷಾದ್ ಬೇಗಂ, ಲತಾ ಮುಂಗೇಶ್‌ಕರ್ ಇವರ ಹಿನ್ನೆಲೆಯ ಹಾಡುಗಾರಿಕೆ ವಿಮರ್ಶೆಗೊಳ ಗಾದವು. ಸಿನೀಮಾ ಬಗ್ಗೆ ಎಂದೂ ಆಸಕ್ತಿವಹಿಸದ ಚಿನ್ನಸ್ವಾಮಿ ಚರ್ಚೆಯಲ್ಲಿ ಭಾಗವಹಿಸಲಿಲ್ಲ. ಅವರ ಚರ್ಚೆ ಒಂದು ಸಿಲುಗಡೆಗೆ ಬಂದಾಗ ಚಿನ್ನಸ್ವಾಮಿ ಥಟ್ಟನೆ ಶಿವಣ್ಣನನ್ನು

"ಡಿಗ್ರಿ ತೆಗೆದುಕೊಂಡಮೇಲೆ ಏನು ಮಾಡಬೇಕೆಂದಿರುವೆ ಶಿವಣ್ಣ ?" ಎಂದು ಕೇಳಿದ.

ಅವನ ಪ್ರಶ್ನೆಯೇ ಅಪ್ರಕೃತವಾದುದೆಂದು ಸೂಚಿಸುವಂತೆ ಶ್ರೀಧರ ನಸುನಗುತ್ತಾ

"ಅವನಿಗೇನಯ್ಯ ದೇವರು ಕಡಿಮೆಮಾಡಿರುವುದು. ಊರಿಗೆ ಹೋಗಿ ದೊರೆಯ ಹಾಗಿರುತ್ತಾನೆ. ತಂದೆ ಲಕ್ಷಾಂತರ ರೂಪಾಯಿ ಗಳಿಸಿಟ್ಟಿದ್ದಾರೆ" ಎಂದ.

ಶಿವಣ್ಣ ಅವನ ಮಾತನ್ನು ಸಮರ್ಥಿಸದೆ

"ಇಲ್ಲ ಶ್ರೀಧರ. ಊರಿಗೆ ಹೋಗುವುದಕ್ಕೆ ನನಗೆ ಸ್ವಲ್ಪವೂ

ಇಷ್ಟವಿಲ್ಲ. ಮದರಾಸಿಗೊ ಮುಂಬಯಿಗೊ ಲಾ ಪರೀಕ್ಷೆಗೆ ಹೋಗ ಬೇಕೆಂದಿದ್ದೇನೆ."

"ಬೆಂಗಳೂರಿನಲ್ಲೇ ಲಾ ಕಾಲೇಜು ಆಗಿದೆಯಲ್ಲ."

"ಮದರಾಸು, ಬೊಂಬಾಯಿಯಲ್ಲಿ ಅನಾಯಾಸ ಎರಡು ವರ್ಷ ಕಳೆಯುವ ಅವಕಾಶ ಕಳೆದುಕೊಳ್ಳುತ್ತಾರೇನು ಹೇಳು. ನೀನೇನು ಮಾಡಬೇಕೆಂದಿರುವೆ?"

"ಬಡವರ ಪಾಡು ಗೊತ್ತೇ ಇದೆಯಲ್ಲಪ್ಪಾ. ಯಾವದಾದರೂ ಹೈಸ್ಕೂಲಿನಲ್ಲಿ ಮೇಷ್ಟ್ರಾಗುವುದು. ಇಷ್ಟರವರೆಗೆ ನನ್ನ ಓದಿಸಬೇಕಾದರೇ ಮನೆಯವರು ಹಣ್ಣಾಗಿಬಿಟ್ಟಿದ್ದಾರೆ – ಸ್ವಲ್ಪ ಸಾಲವೂ ಆಗಿದೆ. ಆ ಸಾಲ ತೀರಿಸಬೇಕಾದುದು ನನ್ನ ಕರ್ತವ್ಯ."

ಎಂದು ಚಿನ್ನಸ್ವಾಮಿ ಇದ್ದ ಸಂಗತಿ ನಿವೇದಿಸಿದ.

ಶ್ರೀಧರ ತಾನು ಎಂ.ಎ.ಗೆ ಓದುವುದಾಗಿ ತಿಳಿಸಿದ. ಎಲ್ಲರೂ ನಾರಾಯಣಸ್ವಾಮಿ ಮುಖ ನೋಡಿದರು.

"ನಾನೂ ಮುಂಬಯಿಗೆ ಹೋಗಿ ತಾತಾ ಸ್ಕೂಲ್ ಆಫ್ ಸೋಷಿಯಾಲಜಿ (Tata School of Socialogy) ಸೇರ ಬೇಕೆಂದಿದ್ದೇನೆ. ತಂದೆಯವರು ಏನು ಹೇಳುವರೋ? ನನ್ನ ಅಕ್ಕ-ತಂಗಿ ಬೇರೆ ಕಾಲೇಜಿನಲ್ಲಿ ಓದುತ್ತಿದ್ದಾರೆ."

"ನೀನು ಓದಬೇಕೆಂದರೆ ನಿನ್ನ ತಾಯಿತಂದೆ ಸ್ವಲ್ಪವೂ ಅಡ್ಡಿ ಬರುವುದಿಲ್ಲ ನಾರಾಯಣಸ್ವಾಮಿ. ತಮ್ಮ ಕಷ್ಟ ಸುಖ ಮರೆತು ನಿನ್ನನ್ನು ಓದಿಸುತ್ತಾರೆ. ಅಂಥ ತಂದೆ ತಾಯಿ ಪಡೆದಿರುವ ನೀನು ಅಪೂರ್ವ ಪುಣ್ಯಶಾಲಿ"

ಎಂದು ಚಿನ್ನಸ್ವಾಮಿ ಧೈರ್ಯದಿಂದ ನುಡಿದ.

"ನಾರಾಯಣಸ್ವಾಮಿ ಮನೆಯಲ್ಲಿ ನೀನು ಹಳಬನೆಂದು ಕಾಣು ತ್ತದೆ ಚಿನ್ನಸ್ವಾಮಿ"

ಎಂದು ಶಿವಣ್ಣ ಕೇಳಿದ.

"ಅವನ ಮನೆಗೆ ಒಮ್ಮೆ ಕಾಲಿಟ್ಟವರೂ ಹಳಬರಾಗುತ್ತಾರೆ

ಶಿವಣ್ಣ. ಧರ್ಮದೇವತೆಯೇ ನಾರಾಯಣಸ್ವಾಮಿಯ ತಾಯಿಯಾಗಿದ್ದಾಳೆ. ಆ ಮಹಾತಾಯಿ ಒಂದು ಮಾತಾಡಿದರೆ ಸಾಕು, ಜನ್ಮ ಜನ್ಮದ ಪಾಪ ತೊಳೆದುಹೋಗುತ್ತದೆ. ಎಷ್ಟೋ ಸಲ ನಾರಾಯಣ ಸ್ವಾಮಿ ಮನೆಗೆ ಹೋಗಿ, ಅವನ ತಾಯಿ ಹಾಕಿದ ಅಮೃತಾನ್ನ ಉಂಡು ಜನ್ಮಸಾರ್ಥಕ ಪಡಿಸಿಕೊಂಡಿದ್ದೇನೆ."

"ನಿಮ್ಮನೇಗೆ ನನ್ನ ಕರೆದುಕೊಂಡು ಹೋಗುವುದಿಲ್ಲವೇನಯ್ಯಾ?" ಎಂದು ಶಿವಣ್ಣ ಕೇಳಿದ.

"ಕರೆದುಕೊಂಡು ಹೋಗುತ್ತೇನಪ್ಪ. ನಿಮ್ಮನ್ನೆಲ್ಲಾ ನೋಡಿದರೆ ಅಮ್ಮ ಸಂತೋಷಪಡುತ್ತಾಳೆ. ಆದರೀಗ ನಮ್ಮ ಮನೆ ದುಃಖದ ಸಂತೆಯಾಗಿಬಿಟ್ಟಿದೆ. ಅಮ್ಮ ನಿಟ್ಟುಸಿರುಬಿಡುವುದನ್ನು ನೋಡಿದರೆ ಮೈ ಜುಮ್ಮೆನ್ನುತ್ತದೆ."

"ನೀನು ಒಮ್ಮೆಯಾದರೂ ಅವರನ್ನು ನೋಡಲೇಬೇಕು ಶಿವಣ್ಣ. ಹತ್ತು ವರ್ಷ ನಾವು ಕಾಲೇಜಿನಲ್ಲಿ ಕಲಿಯಲಾಗದಿರುವುದನ್ನು ಆ ತಾಯಿಯ ಬಳಿ ಒಂದು ನಿಮಿಷದಲ್ಲಿ ಕಲಿಯುತ್ತೇವೆ."

ಚಿನ್ನಸ್ವಾಮಿ ಉತ್ಸಾಹಕಂಡು ನಾರಾಯಣಸ್ವಾಮಿ ನಗುತ್ತಾ

"ಚಿನ್ನಸ್ವಾಮಿ ಯಾವದೋ ಜನ್ಮದಲ್ಲಿ ನಮ್ಮಮ್ಮನ ಮಗನಾಗಿದ್ದನೆಂದು ಕಾಣುತ್ತದೆ. ಅಮ್ಮ ಎಂದರೆ ಅವನಿಗೆ ಆವೇಶ ಬಂದಂತಾಗುತ್ತದೆ."

"ಅಷ್ಟು ಪುಣ್ಯ ನನಗಿದ್ದರೆ ನನ್ನ ಹಿಡಿಯುವವರು ಯಾರು ನಾರಾಯಣಸ್ವಾಮಿ?"

ಎಂದು ಚಿನ್ನಸ್ವಾಮಿ ಅಂತಃಕರಣಪೂರ್ವಕವಾಗಿ ನುಡಿದ.

೫

ವಿಮನ್ಸ್ ಹಾಸ್ಟೆಲ್ಲಿನ (Women's Hostel) ಮಿಸ್. ಲೀಲಾವತಿ ಎಲ್ಲದರಲ್ಲಿಯೂ ಮುಂದಾಳು (forward) ಎನಿಸಿಕೊಂಡಿದ್ದಳು. ಹಾಸ್ಟೆಲ್ ಮತ್ತು ಕಾಲೇಜಿನ ಚಟುವಟಿಕೆಗಳಲ್ಲಿ ಅವಳದೇ ಅಗ್ರಸ್ಥಾನ. ಅವಳ ಚಮತ್ಕಾರವಾದ ಮಾತುಗಾರಿಕೆ, ಮುನ್ನುಗ್ಗುವ ಸ್ವಭಾವ ಎಂಥವರನ್ನೂ ಚಕಿತರನ್ನಾಗಿ ಮಾಡುತ್ತಿತ್ತು. ಸಾರ್ವಜನಿಕ ಚಟುವಟಿಕೆಗಳಲ್ಲಿಯೂ ಲೀಲಾವತಿ ಭಾಗವಹಿಸುತ್ತಿದ್ದಳು. ದೊಡ್ಡ ದೊಡ್ಡ ನಾಯಕರು ಮೈಸೂರಿಗೆ ಆಗಮಿಸಿದಾಗ ಪುರ ಮಹಿಳೆಯರ ಪರವಾಗಿ ಅವರಿಗೆ ಸ್ವಾಗತ ಬಯಸುವ ಜವಾಬ್ದಾರಿ ಲೀಲಾವತಿಯ ಮೇಲೇ ಬೀಳುತ್ತಿತ್ತು. 'ಲೇಡೀಸ್ ಕಾನ್‌ಫರೆನ್ಸ್'ಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದ ಲೀಲಾವತಿ ಸ್ತ್ರೀಯರಿಗೆ ಪುರುಷರ ಸಮಾನವಾದ ಹಕ್ಕುಗಳನ್ನು ದೊರಕಿಸುವುದಕ್ಕೂ ದಾಂಪತ್ಯವಿಚ್ಛೇದನಕ್ಕೆ ಅವಕಾಶ ಕಲ್ಪಿಸುವುದಕ್ಕೂ ಸತತವಾಗಿ ಹೋರಾಡುತ್ತಿದ್ದಳು.

'ಫೆಮಿನಿಸ್ಟ್' (Feminist) ಎಂದು ಹೆಸರಾಗಿದ್ದ ಲೀಲಾವತಿ ಅರಶಿನ, ಕುಂಕುಮ, ಹೂವು, ಗಾಜಿನ ಬಳೆ ಎಲ್ಲವೂ ಹೆಂಗಸಿನ ದಾಸ್ಯದ ಚಿನ್ಹೆಗಳೆಂದು ದೃಢವಾಗಿ ನಂಬಿದ್ದಳು. ತಾನು ಅವುಗಳನ್ನು ಬಹಿಷ್ಕರಿಸಿ ತಲೆಕೂದಲು ಕತ್ತರಿಸಿ ಬಾಬ್ (bob) ಮಾಡಿಸಿಕೊಂಡಿದ್ದುದಲ್ಲದೆ ತನ್ನ ಸಹಪಾಠಿಯರಿಗೂ ಫೆಮಿನಿಸಂ ಮಂತ್ರದೀಕ್ಷೆ

ಕೊಡಲು ಪ್ರಯತ್ನಿಸುತ್ತಿದ್ದಳು.

ಪುರುಷಾಕಾರ ತಳೆಯಲು ಮಿಸ್ ಲೀಲಾವತಿ ಪ್ರಯತ್ನಿಸು ತ್ತಿದ್ದರೂ ಅವಳ ಅಂತರಂಗ ಹೆಣ್ಣಿನ ಅಂತರಂಗವಾಗಿತ್ತು. ಇತರರ ದುಃಖಕ್ಕೆ ಮರುಗಿ, ತನ್ನ ಶಕ್ತಿಮೀರಿ ಸಹಾಯಮಾಡಲು ಅವಳೆಂದಿಗೂ ಹಿಂಜರಿಯುತ್ತಿರಲಿಲ್ಲ.

ರಾಜೀವಿಗೂ ಲೀಲಾವತಿಗೂ ವಿಶೇಷ ಸ್ನೇಹ ವಾತ್ಸಲ್ಯ ಬೆಳೆದಿತ್ತು. ರಾಜೀವಿಗೆ ಲೀಲಾವತಿಯ ಸಿಲುವು, ದಾಷ್ಟೀಕ ಎರಡೂ ಇರಲಿಲ್ಲ. ಕಿರು ಪ್ರಮಾಣದ ಅವಳ ದೇಹಕ್ಕೆ, ಶಿಶುಮುಖ ಚೆನ್ನಾಗಿ ಹೊಂದಿಕೊಂಡಿತ್ತು. ರಾಜೀವಿಯ ಬೆದರುವ ಸ್ವಭಾವ, ನೀರ್ಗಣ್ಣು, ಲಜ್ಜಾಪೂರ್ಣ ನಡೆವಳಿಕೆ ಕಂಡು ಲೀಲಾವತಿ ಅವಳಿಗೆ 'ಗುಬ್ಬಚ್ಚಿ' ಎಂದು ಹೆಸರಿಟ್ಟಿದ್ದಳು. ಗುಬ್ಬಚ್ಚಿಯನ್ನು ಲೀಲಾವತಿ ವಿಶೇಷವಾಗಿ ಪ್ರೀತಿಸುವುದಕ್ಕೆ ಎರಡು ಮುಖ್ಯ ಕಾರಣಗಳಿದ್ದವು. ನೂರೆಂಟು ಚಟುವಟಿಕೆಗಳ ಮಧ್ಯೆ ಲೀಲಾವತಿಗೆ ಓದುವುದಕ್ಕೇ ಪುರಸತ್ತು ಸಿಕ್ಕುತ್ತಿರಲಿಲ್ಲ. ಗುಬ್ಬಚ್ಚಿ ವಾಠಸಿದ್ಧತೆಯಲ್ಲಿ ಅದ್ವಿತೀಯಳಾಗಿದ್ದಳು. ಅಧ್ಯಾಪಕರು ಕೊಡುತ್ತಿದ್ದ ಟಿಪ್ಪಣಿಗಳ ಜತೆಗೆ, ತಾನು ಹಲವು ಆಧಾರ ಗ್ರಂಥಗಳನ್ನು ನೋಡಿ, ವಿಷಯ ಸಂಗ್ರಹಿಸಿ ಸೊಗಸಾಗಿ ಟಿಪ್ಪಣಿ ಸಿದ್ಧ ಮಾಡಿಡುತ್ತಿದ್ದಳು. ಅವಳ ಟಿಪ್ಪಣಿಗಳ ಆಧಾರದ ಮೇಲೆ ಲೀಲಾವತಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುತ್ತ ಬಂದಿದ್ದಳು.

ಲೀಲಾವತಿಯ 'ಗಂಡು ಸ್ವಭಾವ'ವೂ ಅವಳ, ರಾಜೀವಿಯ ಅನ್ಯೋನ್ಯತೆಗೆ ಕಾರಣವಾಗಿತ್ತು. ಲೀಲಾವತಿ ಹೇಳಿದುದಕ್ಕೆ 'ಹೂ'ಗುಟ್ಟಿ, ಅವಳ ತರ್ಕಸರಣಿಯನ್ನು ರಾಜೀವಿಯಂತೆ ಒಪ್ಪಿಕೊಳ್ಳು ವುದು ಬೇರೆ ಯಾರಿಗೂ ಸಾಧ್ಯವಾಗಿರಲಿಲ್ಲ. ತಾನು ಸಾಮಾನ್ಯ ಪತ್ತಲ ಉಟ್ಟುಕೊಂಡರೂ ಲೀಲಾವತಿ ರಾಜೀವಿಗೆ ತನ್ನ ಜಾರ್ಜೆಟ್ ಕ್ರೇಪ್ ಸೀರೆಗಳನ್ನುಡಿಸುವಳು. ತಾನು ಒಂದು ಪರ್ಸ್ ಕೊಂಡರೆ, ರಾಜೀವಿಗೆ ಅದಕ್ಕಿಂತಲೂ ಉತ್ತಮ ಪರ್ಸ್ ಕೊಂಡುಕೊಡುವಳು. ಹಾಸ್ಟಲ್ ಮೇಟ್ಸ್ ಲೀಲಾವತಿಗೆ ಎಷ್ಟು ಹೆದರುತ್ತಿದ್ದರೋ

ಗುಬ್ಬಚ್ಚಿಗೂ ಅಷ್ಟೇ ಹೆದರುತ್ತಿದ್ದರು. ಯಾರಾದರೂ ಗುಬ್ಬಚ್ಚಿಯನ್ನು ಕೆಣಕಿದ್ದರೆ ಲೀಲಾವತಿ ಅವರ ಮೇಲೆ ಸಿಂಹಿಣಿಯಂತೆ ಬೀಳುತ್ತಿದ್ದಳು. ಲೀಲಾವತಿಯ ಪ್ರೇಮಪಂಜರದಲ್ಲಿ ರಾಜೀವಿ ಬಂದಿಯಾಗಿದ್ದಳು. ಸ್ವಾತಂತ್ರ್ಯ – ಬಂಧನಗಳನ್ನು ಕುರಿತು ಆಲೋಚಿಸುವ ಪರಿಪಾಠ ರಾಜೀವಿಗಿಲ್ಲದಿದ್ದುದರಿಂದ ಅವಳ ಮನಸ್ಸಿಗೆ ಯಾವ ಕ್ಲೇಶವೂ ಆಗಿರಲಿಲ್ಲ.

ಕಮಲ, ಪದ್ಮ ಹಾಸ್ಟೆಲ್ಲಿಗೆ ಬಂದ ದಿನವೇ ಲೀಲಾವತಿ ತನ್ನ ಸ್ವಾಭಾವಿಕ ಸರಳತೆಯಿಂದ ಅವರ ಸ್ನೇಹ ಬೆಳೆಸಲೆತ್ನಿಸಿದಳು. ಲೀಲಾವತಿಯ ಮಾಸಲು ಬೂದು ಬಣ್ಣ, ಅದರ ಮೇಲೆ ಬೂದಿ ಬಳಿದಂತೆ ತುಂಬಿದ್ದ ಪೌಡರು, ಕೈ, ಕಾಲು ಬೆರಳುಗಳ ಮೇಲೆ ಝುಗಝುಗಿಸುತ್ತಿದ್ದ ರಕ್ತಗೆಂಪುವರ್ಣ – ಇವುಗಳಿಗೆ ಕಳಶಪ್ರಾಯ ವಾಗಿದ್ದ ಬಾಬ್ ಕೂದಲು, ಅರಶಿನ, ಕುಂಕುಮ, ಬಳೆ ವಿವರ್ಜಿತ ಬೋಳು ಮುಖ, ಕೈಗಳು ಕಂಡಕೂಡಲೆ ಕಮಲಸಿಗೆ ವಿಕರ್ಷಣೆ ಯುಂಟಾಗಿತ್ತು. ತೆಳುಕುಪ್ಪಸ ಧರಿಸಿ, ಅದರ ಮೇಲೆ ತೆಳ್ಳನೆಯ ನವುರು ವಾಯಿಲ್ ಧರಿಸಿ, ಬಿಣ್ಣೊಲೆಗಳನ್ನು ಪ್ರದರ್ಶಿಸುತ್ತಿದ್ದ ಅವಳ ವಸ್ತ್ರಾಲಂಕಾರ ಕಂಡು ಕಮಲಸಿಗೆ ಹೇಸಿಗೆಯಾಗಿತ್ತು.

'ಪೂರ್ವಕಾಲದ ಪುಟ್ಟಿ'ಯಂತಿದ್ದ ಕಮಲನ ಬಗ್ಗೆ ಲೀಲಾವತಿಗೆ ವಿಶ್ವಾಸ ಅಂಕುರಿಸಲಿಲ್ಲ. ಗಂಡನ ಭಾವಚಿತ್ರಕ್ಕೆ ಹಗಲಿರುಳು ಹೂವೇರಿಸಿ, ಅವಳು ಕಂಬನಿಗರೆಯುತ್ತ ಕೂಡುವುದು ದಾಸ್ಯದ ಪರಮಾವಧಿಯೆಂದು ಲೀಲಾವತಿ ಭಾವಿಸಿದ್ದಳು.

ಲೀಲಾವತಿಯ ದಿಟ್ಟತನ ಪದ್ಮನ ಮನಸ್ಸಿನ ಮೇಲೆ ಪರಿಣಾಮ ವನ್ನುಂಟುಮಾಡಿತ್ತು. ಅಕ್ಕ ಅನವಶ್ಯಕವಾಗಿ ಲೀಲಾವತಿಯ ಬಗ್ಗೆ ದುರಭಿಪ್ರಾಯ ತಳೆದಿದ್ದಾಳೆಂದು ಪದ್ಮ ಭಾವಿಸಿದಳು. ಯಾರು ಬಂದು ಏನು ಕೇಳಿದರೂ 'ಇಲ್ಲ'ವೆನ್ನುವ ಸ್ವಭಾವ ಲೀಲಾವತಿಯದಲ್ಲ ವಾಗಿದ್ದುದರಿಂದ ಪದ್ಮನಿಗೆ ಸಹಜವಾಗಿ ಅವಳ ಔದಾರ್ಯ ಹೃದಯಂಗಮವಾಗಿತ್ತು. ಹಾಸ್ಟೆಲ್ಲಿನ ವಿದ್ಯಾರ್ಥಿನಿಯರು ಧಾರಾಳವಾಗಿ

ಲೀಲಾವತಿಯ ಸೋಪು, ಟೂತ್‌ಪೇಸ್ಟ್, ಹೇರ್‌ಪಿನ್, ಲಿಪ್‌ಸ್ಟಿಕ್, ಹೇರ್ ಆಯಿಲ್, ಟವಲುಗಳು, ರಿಬ್ಬನ್‌ಗಳು, ಹಣವನ್ನು ಬಳಸಿಕೊಳ್ಳುತ್ತಿದ್ದುದನ್ನು ಪದ್ಮ ನಿತ್ಯ ಕಣ್ಣಾರೆ ಕಾಣುತ್ತಿದ್ದಳು.

ಅಕ್ಕನ ಬಿಗುಮಾನದಿಂದಾಗಿ ಪದ್ಮ ಲೀಲಾವತಿಯ ಸ್ನೇಹ ಬೆಳಸಲು ಸಾಧ್ಯವಾಗದೆ ಒಳಗೇ ಸಂಕಟಪಡುವುದಕ್ಕಾರಂಭಿಸಿದಳು.

ಪೌಡರ್, ಲಿಪ್‌ಸ್ಟಿಕ್ ಪರಿಚಯವಿಲ್ಲದ ಪದ್ಮ ಅವುಗಳನ್ನು ತಾನೂ ಒಂದು ದಿನ ಧರಿಸಿಕೊಂಡು ತನ್ನ ರೂಪವ್ಯತ್ಯಾಸವನ್ನು ಗಮನಿಸಬೇಕೆಂದು ಇಚ್ಛೆಪಟ್ಟಿದ್ದಳು.

ಒಂದು ದಿನ ಅನುಕೂಲ ಸನ್ನಿವೇಶವೂ ಒದಗಿತು. ಕೊನೆಯ ಗಂಟೆ ಪಾಠವಿಲ್ಲವ ಪ್ರಯುಕ್ತ ಪದ್ಮವೊಬ್ಬಳೇ ಹಾಸ್ಟಲ್ಲಿಗೆ ಬಂದಳು. ಲೀಲಾವತಿಯ ರೂಮಿನಿಂದ ಫಿಲ್ಮ್ ಹಾಡಿನ 'ಗುಣಗುಣ' ಕೇಳಿ ಬರುತ್ತಿದ್ದುದನ್ನು ಆಲೈಸಿ ಪದ್ಮ ಅವಳ ರೂಮು ಪ್ರವೇಶಿಸಿದಳು.

"ಬನ್ರಿ ಪದ್ಮ, ಕಾಲೇಜು ಮುಗಿಯಿತೇನು?"

"ಕೊನೆಯ ಗಂಟೆ ಪಾಠವಿರಲಿಲ್ರೀ – ಬಂದುಬಿಟ್ಟೆ. ನೀವು ಕಾಲೇಜಿಗೇಕೆ ಬರಲಿಲ್ಲ?"

"ಏಕೋ ಸ್ವಲ್ಪ ತಲೆ ನೋಯುತ್ತಿತ್ತು. ಫ್ರೆಂಚ್ ಲೀವ್ ತೆಗೆದುಕೊಂಡುಬಿಟ್ಟೆ. ಕಮಲಮ್ಮ ಇನ್ನೂ ಬಂದಿಲ್ಲವೇನು?"

"ಇಲ್ಲ – ಅವಳಿಗೆ ಕ್ಲಾಸಿದೆ."

ಎನ್ನುತ್ತಾ ಪದ್ಮ ಲೀಲಾವತಿಯ ಮೇಜಿನ ಮೇಲೆ ದೃಷ್ಟಿ ಚೆಲ್ಲಿದಳು.

"ನಿಮ್ಮ ಅಕ್ಕಾವರಿಗೆ ನನ್ನ ಕಂಡರೆ ತುಂಬ ಕೋಪವಲ್ಲವೇನ್ರೀ ಪದ್ಮ."

"ನಿಮ್ಮ ಮೇಲೇಕೆ ಕೋಪ?"

"ನಾನೂ ಅವರ ಹಾಗಿಲ್ಲವೆಂದು ಕೋಪ."

"ಅಲ್ರೀ ಲೀಲಾವತಿ, ನೀವು ಅರಶಿನ ಕುಂಕುಮ ಬಳೆ ಎಲ್ಲಾ ತೆಗೆದುಹಾಕಿರುವಿರಲ್ಲಾ ನಿಮ್ಮ ಮನೆಯಲ್ಲಿ ಬಯ್ಯುವುದಿಲ್ಲವೇ?"

" ನನ್ನ ಡ್ಯಾಡಿ ತುಂಬ ಸುಧಾರಿಸಿದವರು. ನನ್ನ ಸ್ವಾತಂತ್ರ್ಯಕ್ಕೆ ಅವರು ಅಡ್ಡಿ ಬರುವುದಿಲ್ಲ. ಅರಶಿನ ಕುಂಕುಮವೂ ಅಲಂಕಾರ ಸಾಮುಗ್ರಿ – ಪೌಡರ್, ವಾಸ್ಕರಾನೂ ಅಲಂಕಾರ ಸಾಮುಗ್ರಿ. ಹಿಂದಿನ ಕಾಲಕ್ಕೆ ಅದು ಚೆನ್ನು – ಈ ಕಾಲಕ್ಕೆ ಇದು ಚೆನ್ನು."

" ನನಗೂ ಪೌಡರ್ ಹಾಕಿಕೊಳ್ಳಬೇಕೆಂದು ಆಸೆ. ಅಕ್ಕ ಎಲ್ಲಿ ಬಯ್ಯುವಳೋ ಎಂದು ಭಯ."

" ಪೌಡರ್ ಹಾಕಿಕೊಳ್ಳಬೇಕೆನಿಸಿದರೆ ಹಾಕಿಕೊಳ್ಳಬೇಕಮ್ಮ. ನಿಮ್ಮ ಅಕ್ಕಾವರಿಗೆ ಬೇಡದಿದ್ದರೆ ಅವರು ಹಾಕಿಕೊಳ್ಳದಿರಲಿ – ನಿಮಗೇಕೆ ಅವರು ಅಡ್ಡಿ ಬರಬೇಕು. ಬನ್ನಿ ನಾನು ಹಾಕುತ್ತೇನೆ."

ಎಂದು ಪದ್ಮ ಒಲ್ಲೆಯೆನ್ನುತ್ತಿದ್ದರೂ ಕೇಳದೆ ಲೀಲಾವತಿ ಅವಳನ್ನಲಂಕರಿಸಿದಳು. ಲೀಲಾವತಿಯ ಕನ್ನಡಿಯಲ್ಲಿ ತನ್ನ ರೂಪ ನೋಡಿಕೊಂಡುದು ಪದ್ಮನಿಗೆ ಸಾಕಾಗಲಿಲ್ಲ. ತನ್ನ ರೂಮಿಗೆ ಹೋಗಿ ತನ್ನ ಕನ್ನಡಿಯ ಮುಂದೆ ಸ್ವಸ್ವರೂಪದರ್ಶನಾನಂದದಲ್ಲಿ ಮೈಮರೆತಳು.

ಕಮಲ ರೂಮು ಪ್ರವೇಶಿಸಿದುದನ್ನೂ ಪದ್ಮ ಗಮನಿಸಲಿಲ್ಲ. ಒಂದೆರಡು ನಿಮಿಷ ಕಳೆದಿರಬಹುದು. ಕಮಲ ಗಡಸು ಧ್ವನಿಯಲ್ಲಿ

" ಇದೇನೇ ಪದ್ಮ–ನಿನ್ನ ಅವತಾರ " ಎಂದಳು.

ಪದ್ಮ ಅಕ್ಕನ ಕಡೆ ತಿರುಗಿ,

" ನೋಡಕ್ಕ ಹೇಗೆ ಕಾಣುತ್ತೇನೆ. ಮಿಸ್. ಲೀಲಾವತಿ ನನಗೆ ಪೌಡರ್ ಹಚ್ಚಿದ್ದಾರೆ " ಎಂದಳು.

ಕಮಲ ಮರುಮಾತಾಡದೆ ಟವಲು, ಸೋಪು ತಂದು ಪದ್ಮನ ಕೈಯಲ್ಲಿಟ್ಟು

" ಮೊದಲು ಮೂತಿ ತೊಳೆದುಕೊಂಡು ಬಾ. ಈ ಅಲಾಬಿ ವೇಷ ನೋಡುವುದಕ್ಕಾಗುವುದಿಲ್ಲ " ಎಂದಳು.

ಅಕ್ಕನನ್ನು ನುಂಗಿ ಬಿಡುವಷ್ಟು ಪದ್ಮನಿಗೆ ಕೋಪ ಬಂದಿತು. ಕಣ್ಣುಗಳಿಂದ ಘಳಾರನೆ ನೀರಿಳಿಯಿತು.

ಮುಖ ತೊಳೆದುಕೊಂಡು, ತಲೆ ಬಾಚಿಕೊಂಡು ಬಂದು ಅಕ್ಕನ

ಮೇಲೆ ಧುಮುಗುಟ್ಟುತ್ತಲೇ ತನ್ನ ಕುರ್ಚಿಯ ಮೇಲೆ ಕುಳಿತು ಕೈಯಲ್ಲಿ ಪುಸ್ತಕ ಹಿಡಿದಳು.

ಕಮಲಮ್ಮ ಎದ್ದು ಹೋಗಿ ಪದ್ಮನ ಕುರ್ಚಿಯ ಪಕ್ಕದ ಮಂಚದ ತುದಿಯಲ್ಲಿ ಕುಳಿತು

"ಹಾಸ್ಟಲ್ ಗಾಳಿ ನಿನಗೂ ಬೀಸಿತೆಂದು ಕಾಣುತ್ತದೆ" ಎಂದಳು.

"ನಾನೇನಕ್ಕ ಮಾಡಬಾರದ್ದು ಮಾಡಿದ್ದು ?"

"ಪೌಡರ್ ಹಾಕಿಕೊಳ್ಳದಿದ್ದರೆ ನಿನ್ನ ಸಿಂಗಾರ ಸಂಪೂರ್ಣ ವಾಗುವುದಿಲ್ಲವೇನೋ ?"

"ಏನೋ ಆಸೆಯಾಯಿತು-ಹಾಕಿಕೊಂಡೆ."

"ಇವತ್ತು ಪೌಡರ್ ಹಾಕಿಕೊಳುವ್ವ ಆಸೆ- ನಾಳೆ ಇನ್ನೊಂದು ಆಸೆ. ಹೀಗೇ ಈ ವಿಷದ ಬಳ್ಳಿ ಹಬ್ಬುತ್ತ ಹೋಗುವುದು."

"ಹಿಂದಿನ ಕಾಲದಲ್ಲಿ ಅರಶಿನ ಕುಂಕುಮ ಹಾಕಿಕೊಳ್ಳುತ್ತಿದ್ದರು. ಈಗ ಪೌಡರ್ ಹಾಕಿಕೊಳ್ಳುತ್ತಾರೆ. ಅದರಲ್ಲೇನು ತಪ್ಪು ?"

"ಇದು ಲೀಲಾವತಿ ಪಾಠವೆಂದು ಕಾಣುತ್ತದೆ."

"ಅವರು ಹೇಳಿದ್ದರೆ ತಾನೆ ಅದರಲ್ಲೇನು ತಪ್ಪು ?"

"ಇಲ್ಲಿ ನಾವು ಪೌಡರ್, ಲಿಪಸ್ಟಿಕ್ ಹಾಕಿಕೊಂಡು ಮನಸ್ವೀ ಮೆರೆಯುವುದಕ್ಕಲ್ಲ ಪದ್ಮ ಬಂದಿರುವುದು! ನಾಣಿಯನ್ನೊಂದು ಹಾಸ್ಟಲ್ಲಿನಲ್ಲಿಟ್ಟು, ನಮ್ಮನ್ನು ಇನ್ನೊಂದು ಹಾಸ್ಟಲ್ಲಿನಲ್ಲಿಟ್ಟು ಓದಿಸುತ್ತಿರುವ ಅಪ್ಪ ಅಮ್ಮನ ಕಷ್ಟ ಸುಖವನ್ನೂ ನಾವೂ ಪರಿಗಣಿಸಬೇಕು. ನಮ್ಮ ಓದು ಮುಗಿಸಿಕೊಂಡು ನಾವು ಗಂಭೀರವಾಗಿ ಊರು ಸೇರುವುದೇ ಶ್ರೇಯಸ್ಕರ. ಇಂಗ್ಲಿಷ್ ಕಲಿತ ಹೆಂಗಸರು ಕೆಟ್ಟು ಹೋಗುತ್ತಾರೆಂಬ ಪ್ರತೀತಿಯಿರುವಾಗ ನಾವೂ ಅದಕ್ಕೆ ಸಾಕ್ಷ್ಯವೊದಗಿಸಬೇಕೇ ?"

"ಕಾಲಕ್ಕೆ ತಕ್ಕಂತೆ ನಾವೂ ಹೊಂದಿಕೊಳ್ಳಬೇಕಕ್ಕ !"

"ಹೆಣ್ಣುಮಕ್ಕಳು ಗಂಡುಬೀರಿಯರಾಗುವುದೇ ಕಾಲಧರ್ಮವೋ ? ನಾವು ಒಳ್ಳೆಯ ಕುಟುಂಬದಲ್ಲಿ ಹುಟ್ಟಿದ್ದೇವೆ. ದೇವತಾಸ್ತ್ರೀಯೊಬ್ಬಳು

ನಮ್ಮ ತಾಯಿಯಾಗಿದ್ದಾಳೆ. ಆ ತಾಯಿಯ ಮೇಲ್ಪಂಕ್ತಿಗಿಂತಲೂ ಉತ್ತಮ ಮೇಲ್ಪಂಕ್ತಿ ನಮಗೆ ಬೇಕೇ? ಇವತ್ತು ಅಮ್ಮ ಪೌಡರ್, ಲಿಪಸ್ಟಿಕ್ ಹಾಕಿಕೊಳ್ಳಲು ಇಚ್ಛಿಪಟ್ಟರೆ ಅಣ್ಣ ಅವಳಿಗೆ ಮಣಗಟ್ಟಳೆ ಪೌಡರ್, ಲಿಪಸ್ಟಿಕ್ ತಂದು ಕೊಡುವುದಿಲ್ಲವೆನ್ನುತ್ತಾರೆಯೇ? ಅವಳೇಕೆ ಹಳೆಯ ದಾರಿಯಲ್ಲೇ ಹೋಗುತ್ತಿರುವುದು?"

"ಏಕೆ?"

"ಅದೇ ಋಜುಮಾರ್ಗ. ನಮಗೆ ನಮ್ಮ ದೇಶದ ಸಂಸ್ಕೃತಿ, ನಾಗರಿಕತೆ, ಆಚಾರ ವಿಚಾರಗಳು ಶ್ರೇಷ್ಠ. ಪಾಶ್ಚಾತ್ಯರಿಗೆ ಅವರದು ಶ್ರೇಷ್ಠ. ಅವರ ದೇಶದ ಹವಾಮಾನ ಅನುಸರಿಸಿ ಅವರ ಆಚಾರ ವಿಚಾರಗಳು ರೂಪುಗೊಂಡಿವೆ, ನಮ್ಮ ದೇಶದ ಹವಾಮಾನ ಅನುಸರಿಸಿ ನಮ್ಮ ಆಚಾರ ವಿಚಾರಗಳು ರೂಪುಗೊಂಡಿವೆ. ಕೆಂಬೂತ, ಪುಕ್ಕ ಸೇರಿಸಿಕೊಂಡರೆ ನವಿಲಾಗುವುದಿಲ್ಲ, ನವಿಲು, ಬಿಳಿಯಂಗಿ ಧರಿಸಿದರೆ ಕಲಹಂಸವಾಗುವುದಿಲ್ಲ."

"ಹಾಗಾದರೆ ನಾವು ಇಂಗ್ಲಿಷ್ ಓದುವುದೂ ತಪ್ಪೇ!"

"ವಿದ್ಯೆಗೆ ಇತಿಮಿತಿಯೆಲ್ಲಿದೆ ಪದ್ಮ. ಸತ್ಯ, ಧರ್ಮ, ಆಸ್ತಿಕತೆ, ಭೂತಾನುಕಂಪ, ಹೃದಯಶುದ್ಧಿಗಳನ್ನು ಇಂಗ್ಲಿಷ್ ನಿರಾಕರಿಸುತ್ತದೆಯೇ? ಮ್ಯಾಡಾಂ ಕ್ಯೂರಿಯ ಜೀವನ ಚರಿತ್ರೆಯನ್ನು ನೀನೇ ಪಠ್ಯ ಪುಸ್ತಕವಾಗಿ ಓದುತ್ತಿರುವೆಯಲ್ಲ. ಕ್ಯೂರಿಗೂ ಅಮ್ಮನಿಗೂ ಏನು ವ್ಯತ್ಯಾಸ. ವೈಜ್ಞಾನಿಕಳಾದ ಕ್ಯೂರಿ ಪತಿಭಕ್ತಿ, ಪುತ್ರಪ್ರೇಮ, ಪರಮಾತ್ಮ ಚಿಂತನಗಳಿಗೆ ಯಾವ ಸ್ಥಾನ ಕೊಟ್ಟಿದ್ದಾಳೆ ಗಮನಿಸು.— ಪೌಡರ್ ಆಳಿಸೆಂದು ಹೇಳಿದುದಕ್ಕೆ ನನ್ನ ಮೇಲೆ ನಿನಗೆ ತುಂಬ ಕೋಪ ಬಂದಿರಬಹುದು. ಕೋಪ ಮಾಡಿಕೊಳ್ಳಬೇಡ ಪದ್ಮ. ನೀನು ನನ್ನ ತಂಗಿ—ನನ್ನ ಮಗಳು. ನಿನ್ನ ಜೀವನ ಸುಖಮಯವಾಗಿರಬೇಕೆಂದು ನಾನು ಬಯಸುವುದಿಲ್ಲವೇ? ಆದರೆ ಅಲ್ಪ ಸುಖಕ್ಕೆ ನಾವು ಮನಸ್ಸು ಹರಿಯಬಿಡಬಾರದು. ಒಂದು ತಪ್ಪು ಹೆಜ್ಜೆಯಿಡಲು ನಾವು ಅಳುಕದಿದ್ದರೆ ಹತ್ತು ತಪ್ಪುಹೆಜ್ಜೆ ಇಡುತ್ತೇವೆ–ಪಾಪವನ್ನೇ

ಪುಣ್ಯವೆಂದು ಭಾವಿಸುತ್ತೇವೆ–ಸತ್ಯವಾದುದನ್ನು, ಸನಾತನವಾದುದನ್ನು ಅಲ್ಪವಾಗಿ ಪರಿಗಣಿಸುತ್ತೇವೆ. ನಮ್ಮ ಜೀವನವನ್ನೇ ನಾವು ಅಧಃ ಪತನಕ್ಕೆಳೆದೊಯ್ಯುತ್ತೇವೆ."

ಪದ್ಮ ಅಕ್ಕನ ಮಾತುಗಳನ್ನು ಚಿತ್ತವಿಟ್ಟು ಕೇಳಿದಳು. ಅಕ್ಕನ ಪ್ರೌಢ ತರ್ಕಸರಣಿ ಅವಳ ಮುಗ್ಧ ಮನಸ್ಸಿಗೆ ಪೂರ್ಣವಾಗಿ ಹಿಡಿಯ ದಿದ್ದರೂ, ಅದರಲ್ಲಿ ಏನೋ ಸತ್ತ್ವವಿದೆಯೆಂದು ಭಾಸವಾಯಿತು.

೬

ಗಂಡು ಮಗನನ್ನು ಹಾಸ್ಟಲ್ಲಿನಲ್ಲಿಟ್ಟು ಓದಿಸುವುದರ ಜತೆಗೆ ಹೆಣ್ಣು ಮಕ್ಕಳನ್ನೂ ಓದಿಸುವ ಪ್ರಸಂಗ ಬಂದುದಕ್ಕೆ ಮಾಧವರಾಯ ವ್ಯಾಕುಲಗೊಳ್ಳದಿದ್ದರೂ, ಅವನ ಆರ್ಥಿಕ ಪರಿಸ್ಥಿತಿಗದು ಪ್ರಬಲವಾದ ಪೆಟ್ಟಾಗಿತ್ತು. ಮಕ್ಕಳ ವಿದ್ಯಾಭ್ಯಾಸಕ್ಕೆ ಕನಿಷ್ಠಪಕ್ಷ ತಿಂಗಳಿಗೆ ಮುನ್ನೂರು ರೂಪಾಯಿಗಳವರೆಗೆ ಅವನು ಖರ್ಚು ಮಾಡಬೇಕಾಗಿತ್ತು. ನಾರಾಯಣಸ್ವಾಮಿ ಯಾವ ತಿಂಗಳೂ ಹೆಚ್ಚು ಹಣ ಬೇಡದೆ ಸುಮ್ಮನಿದ್ದವನೇ ಅಲ್ಲ. ಮನೆಯ ಖರ್ಚು ರುಕ್ಮಿಣಿಯ ಔಷಧೋಪಚಾರದ ಖರ್ಚು, ಅಪ್ರಾರ್ಥಿತವಾಗಿ ಒದಗುತ್ತಿದ್ದ ಖರ್ಚುಗಳನ್ನೆಲ್ಲಾ ಗಮನಿಸಿದರೆ ತಿಂಗಳಿಗೆ ಸಾವಿರ ರೂಪಾಯಿಯಿಲ್ಲದೆ ಮಾಧವರಾಯನ ತಕ್ಕಡಿ ಮೇಲಕ್ಕೇಳುತ್ತಿರಲಿಲ್ಲ. ತನ್ನ ತಕ್ಕಡಿ ಪ್ರಯಾಸವಿಲ್ಲದೆ ಧಾರಾಳವಾಗಿ ಪ್ರತಿ ತಿಂಗಳೂ ಮೇಲಕ್ಕೇಳುತ್ತಿದ್ದುದನ್ನು ಕಂಡರೆ ಮಾಧವರಾಯನಿಗೇ ಆಶ್ಚರ್ಯವಾಗುತ್ತಿತ್ತು. ಮಾಧವರಾಯನ ಸಂಪಾದನೆ ದಿನದಿನಕ್ಕೆ ಬೆಳೆಯುತ್ತಿತ್ತೇ ವಿನಾ ಕಡಿಮೆಯಾಗಲಿಲ್ಲ. ಸಂಪಾದನೆಯ ಜತೆಗೆ ಖರ್ಚು ಪ್ರಮಾಣವಿಲ್ಲದೆ ಬೆಳೆಯುತ್ತಿತ್ತು.

ಒಂದು ದಿನ ಮಾಧವರಾಯ ತನ್ನ ಕಛೇರಿಯಲ್ಲಿ ಕುಳಿತಿದ್ದಾನೆ. ಕೈತುಂಬ ಕೆಲಸ. ಬೆಳಿಗ್ಗೆ ಹಿಡಿದ ಲೇಖನಿ ಇನ್ನೂ ಕೆಳಗಿಳಿಸಿಲ್ಲ.

ಮಧ್ಯೆ ಮಧ್ಯೆ ಎದುರಿಗಿದ್ದ ದೊಡ್ಡ ಗಡಿಯಾರ ನೋಡುತ್ತಿದ್ದಾನೆ. ಕೋರ್ಟಿಗೆ ಹೋಗುವ ಆತುರ ಬೇರೆ. ಯಾರೋ ವಯೋವೃದ್ಧರು ಒಬ್ಬ ಹುಡುಗನ ಜತೆ ಮಾಧವರಾಯನ ಭೆಟ್ಟಿಗೆ ಬಂದರು.

ಮಾಧವರಾಯ ವೃದ್ಧರನ್ನು ಮರ್ಯಾದೆಯಿಂದ ಬರಮಾಡಿಕೊಂಡು ಪೀಠ ಕೊಟ್ಟು ಕುಳ್ಳಿರಿಸಿದ. ಆದರವರೊಡನೆ ಮಾತನಾಡಲು ಪುರಸತ್ತಿಲ್ಲ.

ವೃದ್ಧರು ತಾಳ್ಮೆಯ ಗಣಿಯಾಗಿದ್ದರು. ಮಾಧವರಾಯ ಅರ್ಧಗಂಟೆ ಮಾತನಾಡಿಸದಿದ್ದರೂ ಅವರು ತುಟಿಪಿಟಕ್ಕೆನ್ನಲಿಲ್ಲ. ಅವರ ವಯಸ್ಸು ಸುಮಾರು ಅರವತ್ತಿರಬಹುದು. ಮಧ್ಯಮಾಕಾರದ ವ್ಯಕ್ತಿತ್ವ. ನೀಳವಾದ ಬಿಳಿಯಗಡ್ಡ. ಭ್ರೂಮಧ್ಯೆ ಕುಂಕುಮ. ಮೊಣಕಾಲು ಮುಚ್ಚುವಂತೆ ಖಾದಿ ಧೋತ್ರ, ಮೈಮೇಲೆ ಹಳೆಯ ಕಾಲದ ಬಗಲು ಗಸೆ ಅಂಗಿ, ತಲೆಯ ಮೇಲೆ ಖಾದಿ ಟೋಪಿ.

ಬರವಣಿಗೆ ಮುಗಿಯಲು ಮಾಧವರಾಯ ಕತ್ತೆತ್ತಿ

"ಕ್ಷಮಿಸಬೇಕು. ಬಹಳ ಕಾಯಿಸಿಬಿಟ್ಟೆ. ಎರಡು ದೊಡ್ಡ ಕೇಸಿನ ಹೀರಿಂಗ್ ಇವತ್ತೇ ಬಿದ್ದಿದೆ. ಮುನಸೀಫರು ಖಂಡಿತಸ್ಥರು. ತಾವು ಯಾರೋ ಗೊತ್ತಾಗಲಿಲ್ಲ."

"ನನ್ನ ಹೆಸರು ಶಾಮರಾಯ. ತುಮಕೂರು ಸ್ಥಳ."

ಎಂದಂದು ಶಾಮರಾಯರು ತಮ್ಮ ಕೈಚೀಲದಿಂದ ಕೆಲವು ಪುಟ್ಟ ಪುಸ್ತಕಗಳನ್ನು ತೆಗೆದು ಮಾಧವರಾಯನ ಮೇಜಿನ ಮೇಲಿಟ್ಟರು. ಮಾಧವರಾಯ ಅವುಗಳನ್ನು ಕೈಗೆ ತೆಗೆದುಕೊಂಡು ಹಾಳೆ ತಿರುವಿ

"ತಮ್ಮ ಹೆಸರು ನಾನು ಕೇಳಿದ್ದೇನೆ. ವಿದ್ಯಾರ್ಥಿನಿಲಯ ಸ್ಥಾಪಿಸುವುದಕ್ಕೆ ತಾವು ತುಂಬ ಶ್ರಮಪಡುತ್ತಿರುವ ವಿಷಯವೂ ನನಗೆ ಗೊತ್ತಿದೆ."

"ಹಾಗಾದರೆ ನನ್ನ ಕೆಲಸ ಹಗುರವಾಯಿತು. ಭವತಿ ಭಿಕ್ಷಾಂದೇಹಿ."

"ತಾವು ಒಳಗೆ ದಯಮಾಡಿಸಿ, ಸ್ನಾನ ಊಟ ಮುಗಿಸಿಕೊಳ್ಳಿ.

ನಾನು ಕೋರ್ಟಿಗೆ ಹಾಜರಿ ಹಾಕಿ ಬೇಗ ಬಂದು ಬಿಡುತ್ತೇನೆ."

"ನನ್ನ ಕೆಲಸ ಮುಗಿಸಿಬಿಟ್ಟಿದ್ದರೆ ಊರಿಗೆ ಪ್ರಯಾಣ ಮಾಡುತ್ತಿದ್ದೆ."

"ಅದು ಸಾಧ್ಯವಿಲ್ಲ ರಾಯರೇ. ವಶಿಷ್ಟರ ಹಾಗೆ ತಾವು ದಯಮಾಡಿಸಿದ್ದೀರಿ. ಒಪ್ಪತ್ತು ನಮ್ಮ ಮನೆಯಲ್ಲಿ ಊಟಮಾಡದೆ ಹೋದರೆ ನನ್ನ ಮನಸ್ಸಿಗೆ ತುಂಬ ಪೇಚಾಟವಾಗುತ್ತದೆ."

ಎಂದು ಶಾಮರಾಯರನ್ನೂ ಅವರ ಸಂಗಡ ಬಂದಿದ್ದ ಬಾಲಕ ನನ್ನೂ ಒಳಗೆ ಕರೆದುಕೊಂಡು ಹೋಗಿ ರುಕ್ಮಿಣಿಯ ಪರಿಚಯ ಮಾಡಿ ಕೊಟ್ಟು, ತಾನು ಕೋರ್ಟಿಗೆ ಹೋದ.

'ಸ್ನಾನ ಮುಗಿಸಿ, ಊಟಮಾಡಿ' ಎಂದು ರುಕ್ಮಿಣಿ ಉಪಚರಿಸಿ ದಳು. 'ರಾಯರೂ ಬಂದು ಬಿಡಲಿ' ಎಂದು ಶಾಮರಾಯರು ಹೇಳಿದರು. 'ಕೋರ್ಟಿಗೆ ಹೋದಮೇಲೆ ಅವರಿಗೆ ಹೊತ್ತೂ ಗೊತ್ತೂ ಒಂದೂ ತಿಳಿಯುವುದಿಲ್ಲ. ನೀವು ಊಟಮಾಡಿ ಕುಳಿತುಕೊಳ್ಳಿ' ಎಂದು ರುಕ್ಮಿಣಿ ತಿಳಿಸಿ ಶಾಮರಾಯರನ್ನೂ ಅವರ ಜತೆಯಲ್ಲಿದ್ದ ಬಾಲಕನನ್ನೂ ಊಟಕ್ಕೆಬ್ಬಿಸಿದಳು

ಶಾಮರಾಯರು ಊಟಮುಗಿಸಿ ತೊಟ್ಟಿಯಲ್ಲಿದ್ದ ಮಂದಲಿಗೆಯ ಮೇಲೆ ಸುಖವಾಗಿ ಪವಡಿಸಿದರು.

ಮಾಧವರಾಯ ಮನೆಗೆ ಬರುವ ವೇಳೆಗೆ ಎರಡು ಗಂಟೆ ಹೊಡೆ ದಿತ್ತು. ಬಂದವನೇ ಸ್ನಾನಮಾಡಿ, ದೇವರ ತಲೆಯ ಮೇಲೆ ಹೂ ಹಾಕಿ, ಊಟಮುಗಿಸಿದ. ಮಾಧವರಾಯ ಬಂದಾಗಲೇ ಎಚ್ಚರ ಗೊಂಡಿದ್ದ ಶಾಮರಾಯರು, ಮಂದಲಿಗೆಯ ಮೇಲೆ ಕುಳಿತಿದ್ದರು. ಮಾಧವರಾಯನೂ ಬಂದು ಅವರಜತೆ ಕುಳಿತ.

"ತಾವು ಊಟಮಾಡುವುದಕ್ಕೆ ದಿನವೂ ಇಷ್ಟು ಹೊತ್ತಾಗು ತ್ತದೆಯೇ?"

ಎಂದು ಶಾಮರಾಯರು ಕೇಳಿದರು.

"ಇಲ್ಲ. ಒಂದೊಂದು ದಿನ ಸ್ವಲ್ಪ ಹೊತ್ತಾಗುತ್ತದೆ. ಊಟ

ಸರಿಯಾಗಿಯಾಯಿತೇ ? ”

“ ಮೃಷ್ಟಾನ್ನ ಭೋಜನವಾಯಿತು ಸ್ವಾಮಿ. ಅನ್ನಪೂರ್ಣೇಶ್ವರಿಯೇ ಬಡಿಸಿದ ಮೇಲೆ ಕೇಳುವುದೇನಿದೆ. ”

“ ಕೃತಾರ್ಥನಾದೆ. ಇನ್ನು ತಾವು ಬಂದಕೆಲಸ ಅಪ್ಪಣೆ ಕೊಡಿಸೋಣವಾಗಲಿ.”

“ ತುಮಕೂರಿನಲ್ಲಿ ಎಲ್ಲಾ ಜಾತೀಯರ ವಿದ್ಯಾರ್ಥಿ ನಿಲಯಗಳೂ ಇವೆ. ಎಲ್ಲಾ ಜಾತೀಯರಿಗೂ ಸಾಕಷ್ಟು ವಿದ್ಯಾಸೌಕರ್ಯವಿದೆ. ಆದರೆ ಬ್ರಾಹ್ಮಣ ವಿದ್ಯಾರ್ಥಿಗಳನ್ನು ಕೇಳುವವರೇ ಇಲ್ಲ. ಹೈಸ್ಕೂಲು, ಕಾಲೇಜಿನಲ್ಲಿ ಓದುವ ವಿದ್ಯಾರ್ಥಿಗಳೂ ಭಿಕ್ಷಾನ್ನ, ವಾರಾನ್ನ ಮಾಡಿಕೊಂಡು ಬಹು ಪ್ರಯಾಸದಿಂದ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಈ ಸ್ಥಿತಿಯನ್ನು ನಾನು ನೌಕರಿಯಲ್ಲಿರುವಾಗಲಿಂದಲೂ ನೋಡುತ್ತಿದೆ. ಹೃದಯದಲ್ಲಿ ತಳಮಳವಾಗುತ್ತಿತ್ತು. ನಾನೊಬ್ಬ ಏನುಮಾಡಬಲ್ಲೆ ಎಂದುಕೊಂಡೇ ಕಾಲ ತಳ್ಳಿದೆ.”

“ ತಾವು ಸರ್ಕಾರಿ ನೌಕರಿಯಲ್ಲಿದ್ದಿರಾ ? ”

“ಹೌದು. ರೆವಿನ್ಯೂ ಹೆಡ್‌ಗುಮಾಸ್ತನಾಗಿದ್ದೆ. ನನ್ನ ನಲವತ್ತನೆಯ ವಯಸ್ಸಿನಲ್ಲೇ ಕುಟುಂಬ ತೀರಿಕೊಂಡರು. ಇಬ್ಬರು ಗಂಡು ಮಕ್ಕಳನ್ನು ನಾನೇ ಸಲಹಿ ಬೆಳಸಿದೆ. ದೈವಾನುಗ್ರಹದಿಂದ ಹುಡುಗರಿಬ್ಬರಿಗೂ ಕೆಲಸವಾಯಿತು. ಒಬ್ಬ ಹೈಸ್ಕೂಲ್ ಉಪಾಧ್ಯಾಯನಾಗಿದ್ದಾನೆ. ಇನ್ನೊಬ್ಬ ಸೆಕ್ರೆಟೇರಿಯಟ್ಟನಲ್ಲಿದ್ದಾನೆ. ರಿಟೈರ್ ಆದ ಮೇಲೆ ವಿದ್ಯಾರ್ಥಿಗಳ ಪಾಡು ನನ್ನನ್ನು ಒಂದೇ ಸಮನಾಗಿ ಕೊರೆಯಲಾರಂಭಿಸಿತು. ಒಂದು ದಿನ ಮಕ್ಕಳನ್ನು ಕೂರಿಸಿಕೊಂಡು, ಅವರಿಗೆ ಆಸ್ತಿಯನ್ನೆಲ್ಲಾ ಹಂಚಿಕೊಟ್ಟು ಅವರ ಒಪ್ಪಿಗೆ ಪಡೆದು ಪಿತ್ರಾರ್ಜಿತ ಮನೆಯೊಂದನ್ನು ಉಳಿಸಿಕೊಂಡೆ. ಆ ಮನೆಯನ್ನೇ ವಿದ್ಯಾರ್ಥಿನಿಲಯವನ್ನಾಗಿ ಮಾರ್ಪಡಿಸಿ, ನಾಲ್ಕು ಜನ ವಿದ್ಯಾರ್ಥಿಗಳಿಂದ ಆರಂಭಿಸಿದೆ. ನನಗೆ ಬರುತ್ತಿದ್ದ ಪೆರ್ಷ ಹಣದಲ್ಲಿ ನನ್ನ ಜೀವನ ಕಳೆದುಹೋಗುತ್ತಿತ್ತು. ಊರಿನಲ್ಲಿ ಭಿಕ್ಷವೆತ್ತಿ ವಿದ್ಯಾರ್ಥಿಗಳನ್ನು ಸಾಕಲಾರಂಭಿಸಿದೆ. ಐದು

ವರ್ಷಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ನಲವತ್ತೆರಡಕ್ಕೇರಿತು. ಕಟ್ಟಡ ಸಾಲದಾಯಿತು. ತಡಿಕೆ ಗೋಡೆಗಳನ್ನೆಬ್ಬಿಸಿ ಹೆಚ್ಚು ರೂಮುಗಳನ್ನು ಮಾಡಿಸಿದೆ. ಆದರವು ಮಳೆಗಾಲಕ್ಕೆ ತಡೆದುಬರಲಿಲ್ಲ. ಶಾಶ್ವತವಾದ ಕಟ್ಟಡವನ್ನೇ ಕಲ್ಪಿಸಬೇಕೆಂದು ಜೋಳಿಗೆ ತೆಗೆದುಕೊಂಡು ಹೊರಟೆ. ಈವರೆಗೆ ಇಪ್ಪತ್ತೆಂಟು ಸಾವಿರ ರೂಪಾಯಿಗಳನ್ನು ಸಂಗ್ರಹಿಸಿದೆ. ಆ ಹಣವನ್ನೆಲ್ಲಾ ಕಟ್ಟಡಕ್ಕಾಗಿ ಖರ್ಚು ಮಾಡಿದೆ. ಕಟ್ಟಡ ಮುಗಿಯ ಬೇಕಾದರೆ ಇನ್ನೂ ಹದಿನೈದು ಸಾವಿರ ರೂಪಾಯಿಗಳು ಬೇಕು. ತಮ್ಮ ಕೀರ್ತಿ ಕೇಳಿ ಜೋಳಿಗೆ ತೆಗೆದುಕೊಂಡು ಇಲ್ಲಿ ಬಂದೆ ಸ್ವಾಮಿ."

"ತಮ್ಮ ತ್ಯಾಗ, ಸಾಹಸ ಎರಡೂ ಶ್ಲಾಘನೀಯವಾದದ್ದು ಶಾಮರಾಯರೇ. ಈ ಬಗ್ಗೆ ನನಗೊಂದು ಅನುಮಾನ ಬಂದಿದೆ. ಕೇಳಬಹುದೇ?"

"ಅವಶ್ಯಕವಾಗಿ ಕೇಳಿ."

"ಬ್ರಾಹ್ಮಣರು ಬ್ರಾಹ್ಮಣರಿಗಾಗಿಯೇ ವಿದ್ಯಾರ್ಥಿ ನಿಲಯ ಮಾಡುವುದು, ಒಕ್ಕಲಿಗರು, ವೀರಶೈವರು ತಮ್ಮ ಜಾತಿಬಾಂಧವರಿಗಾಗಿಯೇ ವಿದ್ಯಾರ್ಥಿನಿಲಯ ಮಾಡುವುದು ದೇಶದ ಹಿತದೃಷ್ಟಿಯಿಂದ ಒಳ್ಳೆಯದೇ? ಕೋಮುವಾರು ಭಾವನೆ ತಾನೇ ತಾನಾಗಿ ಬೆಳೆಯುತ್ತಿರುವಾಗ ನಾವೂ ಅದನ್ನು ಪೋಷಿಸುವುದು ನ್ಯಾಯವೇ?"

"ನ್ಯಾಯವಲ್ಲ. ಸ್ವಜಾತಿಯನ್ನಷ್ಟೇ ಲಕ್ಷಿಸುವುದು ರಾಷ್ಟ್ರದ ಹಿತದೃಷ್ಟಿಯಿಂದ ಶ್ರೇಯಸ್ಕರವಾದುದಲ್ಲ. ಆದರೆ ಒಂದು ಮಾತು ತಮ್ಮಲ್ಲಿ ಅರಿಕೆಮಾಡಿಕೊಳ್ಳುತ್ತೇನೆ. ಈ ದುರಭ್ಯಾಸ ನಮಗೆ ೨೫-೩೦ ವರ್ಷಗಳಿಂದ ಮಾತ್ರ ಬಂದದ್ದು. ಮಿಲ್ಲರ್ ಕಮಿಟಿ ರಿಪೋರ್ಟ್, ಕೈಲಾಸವಾಸಿ ಎಂ. ಬಸವಯ್ಯನವರ ಕೃಪಾಕಟಾಕ್ಷದಿಂದ ಲಭಿಸಿದ ವರ. ಅದಕ್ಕೆ ಪೂರ್ವದಲ್ಲಿ ಬ್ರಾಹ್ಮಣ, ಬ್ರಾಹ್ಮಣೇತರ ಎನ್ನುವ ಭೇದವಿರಲಿಲ್ಲ. ಮರಿಯಪ್ಪನವರು, ಸುಬ್ಬಶೆಟ್ಟರು, ಚಿಂತಲಪಲ್ಲಿ ವೆಂಕಟಮುನಯ್ಯಶೆಟ್ಟರು ಮೊದಲಾದ ಮಹಾನುಭಾವರು ತಮ್ಮ ವಿದ್ಯಾರ್ಥಿನಿಲಯಗಳಲ್ಲಿ ಸಮಸ್ತ ಕೋಮಿನ ಜನ ಇರುವುದಕ್ಕೂ ಅವಕಾಶಮಾಡಿಕೊಟ್ಟರು.

ಜಾತೀಯ ವಿದ್ಯಾರ್ಥಿನಿಲಯಗಳು ಬೆಳೆದಮೇಲೆ ಬ್ರಾಹ್ಮಣ ವಿದ್ಯಾರ್ಥಿಗಳ ಗತಿಯೇನು? ಅವರೂ ಪ್ರತ್ಯೇಕ ವಿದ್ಯಾರ್ಥಿನಿಲಯ ಮಾಡಿಕೊಳ್ಳದೆ ಗತ್ಯಂತರವೇ ಇಲ್ಲವಾಯಿತು. ಸರ್ಕಾರ ಮೊದಲು ಬ್ರಾಹ್ಮಣರಿಗೆ ಕೆಲಸ ಕೊಡಕೂಡದೆಂದು ಕಾಯಿದೆಮಾಡಿತು-ಅದೂ ಹೋಗಲಿ ಎಂದರೆ ಈಗ ಬ್ರಾಹ್ಮಣರಿಗೆ ವಿದ್ಯಾದಾನಮಾಡುವುದಕ್ಕೂ ಸರ್ಕಾರ ಅಡ್ಡಿ ಬರುತ್ತಿದೆ - ತಮಗೆ ತಿಳಿದಿರುವಂತೆ ಬ್ರಾಹ್ಮಣ ವ್ಯಾಪಾರಿಯಲ್ಲ, ಶ್ರೀಮಂತನಲ್ಲ, ಭೂಸ್ಥಿತಿಯುಳ್ಳವನಲ್ಲ. ಅವನ ಸಕಲ ಸಂಪತ್ತೂ ವಿದ್ಯೆ. ವಿದ್ಯೆಗೇ ಲೋಪಬಂದರೆ ಬ್ರಾಹ್ಮಣ ಬದುಕುವುದು ಹೇಗೆ?"

"ಬ್ರಾಹ್ಮಣನ ಹಾಗೇ ಉಳಿದವರೂ ಬದುಕಬೇಡವೇ?"

"ಅಗತ್ಯವಾಗಿ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ನಾಲ್ವರೂ ಸಮಾಜಪುರುಷನ ನಾಲ್ಕು ಮುಖ್ಯಾಂಗಗಳು. ಯಾವ ಅಂಗ ಊನವಾದರೂ ಮೂರ್ತಿ ಭಿನ್ನವಾಗುತ್ತದೆ."

"ಇದುವರೆಗೆ ಬ್ರಾಹ್ಮಣನಿಗೆ ಸಾಕಷ್ಟು ವಿದ್ಯಾಸೌಲಭ್ಯ ಸಿಕ್ಕಿದೆ. ಇನ್ನು ಮೇಲೆ ಅದು ಇತರರಿಗೆ ಸಿಕ್ಕಲಿ."

"ಬ್ರಾಹ್ಮಣ ಮೊದಲಿನಿಂದಲೂ ವಿದ್ಯೆಯನ್ನೇ ನಂಬಿಕೊಂಡು ಬಾಳಿದವನು. ಗುಮಾಸ್ತೆಗಿರಿ, ಉಪಾಧ್ಯಾಯವೃತ್ತಿ ಅವನಿಗೆ ಕಟ್ಟಿಟ್ಟ ಮುಡಿಪು. ವ್ಯಾಪಾರ ಬಿಟ್ಟುಬಂದು ವೈಶ್ಯ, ವೀರಶೈವ ವಿದ್ಯೆಕಲಿತು ಅರಾರಾ ಕಛೇರಿಯ ಗುಮಾಸ್ತನಾದರೆ ಬಂದ ಪುರುಷಾರ್ಥವೇನು? ಪರಂಪರಾಗತವಾಗಿ ಬಂದ ವ್ಯಾಪಾರ, ವಾಣಿಜ್ಯ ನಾಶವಾಗುತ್ತದೆ. ಬ್ರಾಹ್ಮಣನ ಸ್ಥಳಕ್ಕೆ ಇನ್ನೊಬ್ಬ ಬಂದಂತಾಯಿತು; ಆದರೆ ವೈಶ್ಯ, ವೀರಶೈವರ ಸ್ಥಾನಗಳಿಗೆ ಬರುವವರು ಯಾರು?—ಮುಲ್ತಾನಿಗಳು, ಮಾರವಾಡಿಗಳು, ಸಿಂಧಿಗಳು, ಲಬ್ಬೆಯವರು, ಪಠಾಣರು. ಬ್ರಾಹ್ಮಣರಲ್ಲದವರಿಗೆ ವಿದ್ಯೆ ಪಡೆಯುವ ಅಧಿಕಾರವಿಲ್ಲವೆಂದು ನಾನು ಪ್ರತಿಪಾದಿಸುತ್ತಿಲ್ಲ. ವಿದ್ಯೆಯೂ ಗುಣ, ಕರ್ಮಗಳನ್ನನುಸರಿಸಿರಬೇಕು. ಯಂತ್ರದ ಅಚ್ಚುಗಳಂತೆ ಎಲ್ಲರೂ ಗುಮಾಸ್ತೆಗಿರಿಗೆ ಅರ್ಹತೆ ಪಡೆದುಕೊಂಡರೇನು ಪ್ರಯೋಜನ?—ನಾನು ಇನ್ನೂ ಒಂದು ವಾದವನ್ನು ತಮ್ಮ ಮುಂದಿಡು

ತ್ತೇನೆ. ಬ್ರಾಹ್ಮಣರಿಗೆ ಕೆಲಸಕೊಡುವುದಿಲ್ಲವೆಂದು ಹೇಳಿ ಸರ್ಕಾರ ನಿಜವಾಗಿ ಬ್ರಾಹ್ಮಣರಿಗೆ ಮಹೋಪಕಾರಮಾಡಿತು. ಸರ್ಕಾರಿ ನೌಕರಿಯ ಕ್ಷುಲ್ಲಕ ಆಸೆಗೆ ತುತ್ತಾಗಿ ಬ್ರಾಹ್ಮಣ ತನ್ನ ತೇಜಸ್ಸನ್ನೇ ಕಳೆದುಕೊಂಡ. ದಾಸ್ಯದ ಬಾಗಿಲು ಮುಚ್ಚಿದಮೇಲೆ ಬ್ರಾಹ್ಮಣ ಸ್ವತಂತ್ರವೃತ್ತಿ ಕಲ್ಪಿಸಿಕೊಳ್ಳುವುದರ ಕಡೆ ತನ್ನ ಬುದ್ಧಿ ಹರಿಸುತ್ತಾನೆ. ಆದರೆ ಬ್ರಾಹ್ಮಣನಿಗೆ ವಿದ್ಯಾದಾನಮಾಡುವುದಿಲ್ಲ ಎಂದು ಹೇಳುವುದಕ್ಕೆ ಸರ್ಕಾರಕ್ಕೆ ಯಾವ ಅಧಿಕಾರವಿದೆ ? ಬ್ರಾಹ್ಮಣನೂ ಈ ದೇಶದ ಪ್ರಜೆ- ಅವನೂ ಕಂದಾಯ ಕೊಡುತ್ತಾನೆ-ಅವನೂ ಈ ದೇಶದ ಅಭ್ಯುದಯ ಕ್ಕಾಗಿ ದುಡಿದಿದ್ದಾನೆ. ಅವನ ಬುದ್ಧಿಬಲದಿಂದ ಈ ದೇಶದ ನಾಗರಿಕತೆ, ವ್ಯಾಪಾರ, ವಾಣಿಜ್ಯ, ಸಾಹಿತ್ಯ, ಲಲಿತಕಲೆಗಳು ಅಭಿವೃದ್ಧಿಗೊಂಡಿವೆ. ಅವನು ಮಾಡಿರುವ ಸೇವೆಗೆ ದೇಶ ಕೃತಜ್ಞತೆ ತೋರಿಸುವ ಲಕ್ಷಣ ಇದೇನೇ!—ಬೀದಿ ಬೀದಿಗಳಲ್ಲಿ ಭಿಕ್ಷಬೇಡಿಕೊಂಡು, ಮುನಿಸಿ ಪಾಲಿಟಿಯ ದೀಪಗಳ ಕೆಳಗೆ ಓದುವ ಬ್ರಾಹ್ಮಣ ವಿದ್ಯಾರ್ಥಿಗಳನ್ನು ಕಂಡರೆ ಯಾರಿಗೆ ತಾನೆ ಕನಿಕರ ಬರಲಾರದು. ಯಾವನಲ್ಲಿ ಯೋಗ್ಯತೆ ಇದೆಯೋ ಅವನನ್ನು ಪೋಷಿಸಬೇಕಾದುದು ಸಮಾಜದ-ರಾಷ್ಟ್ರದ ಧರ್ಮ. ಅವನ ಬುದ್ಧಿಶಕ್ತಿ ಮಸಣಿಸಿಹೋದರೆ ರಾಷ್ಟ್ರಕ್ಕೇ ನಷ್ಟ ವಾಗುತ್ತದೆ. ವಿದ್ಯಾಕಾಂಕ್ಷಿಗಳಾದ ಎಲ್ಲ ವಿದ್ಯಾರ್ಥಿಗಳ ಯೋಗಕ್ಷೇಮ ವನ್ನೂ ಸಾರ್ವಜನಿಕರಾಗಲಿ ಸರ್ಕಾರವಾಗಲಿ ನೋಡಿಕೊಳ್ಳುವ ಕಾಲ ಬಂದಾಗ ನಾನೇ ಕೈಯ್ಯಾರ ಬ್ರಾಹ್ಮಣ ವಿದ್ಯಾರ್ಥಿನಿಲಯ ಮುಚ್ಚು ವುದಕ್ಕೆ ಸಿದ್ಧವಾಗಿದ್ದೇನೆ. ಅಲ್ಲಿಯವರೆಗೆ ಈ ಕೆಲಸ, ಈ ಅಲ್ಪಸೇವೆ ಮುಂದುವರಿಯಬೇಕಾಗಿದೆ.—ನಾನು ವೃದ್ಧ. ನನ್ನ ಕಾಲ ಮುಗಿದು ಹೋಗಿದೆ. ಯಾವ ಈಪ್ಸಿತವನ್ನಿಟ್ಟುಕೊಂಡೂ ನಾನು ಈ ಕೆಲಸಕ್ಕೆ ಕೈಹಾಕಿಲ್ಲ. ಇದೂ ಭಗವಂತನ ಸೇವೆ ಎಂಬ ಭಾವನೆಯಿಂದಲೇ ನಾನು ದುಡಿಯುತ್ತಿದ್ದೇನೆ. ”

ಮಾಧವರಾಯ 'ರುಕ್ಕೂ' ಎಂದು ಕೂಗಿದ.

ರುಕ್ಮಿಣಮ್ಮ ಒಳಬಾಗಿಲಿನಲ್ಲಿಯೇ ನಿಂತುಕೊಂಡು “ಏನು ?”

ಎಂದಳು.

"ಕೇಳಿದೆಯಾ ?"

"ಕೇಳಿದೆ."

"ನಿನ್ನ ಅಭಿಪ್ರಾಯವೇನು ?"

"ಶಾಮರಾಯರು ಹೇಳುವುದು ಸರಿಯೆನಿಸುತ್ತದೆ."

"ದೊಡ್ಡವರು ಇಷ್ಟುದೂರ ದಯಮಾಡಿಸಿದ್ದಾರೆ. ಅವರಿಗೇನು ಹೇಳಲಿ ?"

"ಭಗವಂತ ಪ್ರೇರೇಪಿಸಿದಂತೆ ಮಾಡಿ."

ಮಾಧವರಾಯ ಎದ್ದು ಒಳಗೆ ಹೋದ. ಗಂಡ, ಹೆಂಡತಿ, ತಾಯಿ ವಿಚಾರ ವಿನಿಮಯಮಾಡಿಕೊಂಡರು. ಹತ್ತು ನಿಮಿಷ ಕಳೆದಿರ ಬಹುದು. ಮಾಧವರಾಯ ರುಕ್ಮಿಣಮ್ಮನ ಜತೆ ಹೊರಗೆಬಂದ.

ರುಕ್ಮಿಣಮ್ಮ ಫಲತಾಂಬೂಲವಿದ್ದ ತಟ್ಟೆಯನ್ನು ಶಾಮರಾಯರ ಮುಂದಿಟ್ಟಳು. ದಂಪತಿಗಳಿಬ್ಬರೂ ಶಾಮರಾಯರಿಗೆ ನಮಸ್ಕಾರ ಮಾಡಿದರು. ಶಾಮರಾಯರು ಚಕಿತರಾಗಿ ಎದ್ದುನಿಂತು ದಂಪತಿಗಳಿಗೆ ತಾವೂ ನಮಸ್ಕರಿಸಿದರು.

ಮಾಧವರಾಯ ಔಪಚಾರಿಕವಾಗಿ

"ಸದ್ಯಕ್ಕೆ ಈ ಚೆಕ್ಕು ಸ್ವೀಕರಿಸಿ. ದೇವರು ಅನುಕೂಲ ಕೊಟ್ಟಾಗ ಮತ್ತಷ್ಟು ಮುಟ್ಟಿಸುತ್ತೇನೆ."

ಎಂದು ಹೇಳಿದ. ಶಾಮರಾಯರು ಕೈಗೆ ಚೆಕ್ಕುತೆಗೆದುಕೊಂಡು ನೋಡಿದರು. ಮೂರು ಸಾವಿರ ರೂಪಾಯಿಗಳನ್ನು ಮಾಧವರಾಯ ಶಾಮರಾಯರ ಹೆಸರಿಗೆ ಬರೆದಿದ್ದ. ಶಾಮರಾಯರ ಕಣ್ಣುಗಳಿಂದ ಆನಂದಾಶ್ರುಗಳುದುರಿದವು.

"ಐವತ್ತು, ನೂರಕ್ಕಿಂತ ನಾನು ಹೆಚ್ಚು ನಿರೀಕ್ಷಿಸಿರಲಿಲ್ಲ ಸ್ವಾಮಿ. ತಾವೊಂದು ನಿಧಿಯನ್ನೇ ಕೊಟ್ಟುಬಿಟ್ಟಿರಿ."

"ಕೊಡುವ ಶ್ರೀಹರಿ ಮರಳಿ ಬಂದು ಕೇಳಿದರೆ ಕೊಡಲಾಗುವುದಿಲ್ಲವೆನ್ನಲಾದೀತೇ ?"

"ಲಕ್ಷ್ಮೀನಾರಾಯಣ ಸ್ವರೂಪರಾದ ದಂಪತಿಗಳನ್ನು ನೋಡಿ ನಾನು ಕೃತಾರ್ಥನಾದೆ. ಇನ್ನು ಅಪ್ಪಣೆಯಾದರೆ...."

ಎಂದು ಶಾಮರಾಯರು ಮೇಲಕ್ಕೆದ್ದರು.

"ಇವತ್ತು ಇದ್ದು ನಾಳೆ ಪ್ರಯಾಣಮಾಡಬಹುದಲ್ಲ."

"ಇಲ್ಲ ಸ್ವಾಮಿ. ನಲವತ್ತೆರಡು ಮಕ್ಕಳು ನನ್ನ ದಾರಿ ನೋಡುತ್ತಿರುತ್ತಾರೆ. ಊರಿಗೆ ಹೋಗಿ ಮೊದಲು ಮಕ್ಕಳಿಗೆ ಅನ್ನ ಮಾಡಿಸಿ ಹಾಕಬೇಕಾಗಿದೆ. ಎಂಟುದಿನದಿಂದಲೂ ಜೋಳ ತಿನ್ನುತ್ತಿದ್ದಾರೆ."

ಎಂದು ಶಾಮರಾಯರು ಹೇಳಿದರು.

೬

ತನ್ನೊಂದಿಗೆ ಮಾತನಾಡಬೇಕು, ತನ್ನ ಸ್ನೇಹ ಬೆಳಸಬೇಕು ಎಂದು ಪದ್ಮ ಆಸೆಪಡುತ್ತಿದ್ದರೂ ಕಮಲಮ್ಮ ಅದಕ್ಕೆ ಅಡ್ಡಿಯಾಗುತ್ತಿರುವಳೆಂದರಿಯಲು ಕುಶಾಗ್ರಮತಿಯಾದ ಲೀಲಾವತಿಗೆ ಬಹಳ ಕಾಲ ಹಿಡಿಸಲಿಲ್ಲ. ಇದು ತನಗಾದ ಅವಮಾನವೆಂದು ಅವಳು ಭಾವಿಸಿಕೊಂಡು ಕಮಲಮ್ಮನಮೇಲೆ ಪ್ರತೀಕಾರ ಕೈಗೊಳ್ಳಲು ಸಮಯ ಕಾಯುತ್ತಿದ್ದಳು.

ಹಾಸ್ಟೆಲ್‌ವಾಸಿಗಳಾಗಿದ್ದ ಬೆಟ್ಸಿ, ಶಕುಂತಲ ರೂಮ್‌ಮೇಟ್ಸ್ ಆಗಿದ್ದುದಲ್ಲದೆ ಪರಮ ಗೆಳತಿಯರೂ ಆಗಿದ್ದರು. ಅವರ ಅಭಿರುಚಿಯ ಏಕರೂಪತೆ ಅವರಲ್ಲಿ ಅಪೂರ್ವ ವಿಶ್ವಾಸವನ್ನು ಬೆಸೆದಿತ್ತು.

ಶಕುಂತಲ ಸಿನೀಮಾ ಅಭಿಮಾನಿಯಾಗಿದ್ದುದು ಮಾತ್ರವಲ್ಲದೆ ಸಿನೀಮಾ ಪ್ರಪಂಚದ ಪ್ರತಿಯೊಂದು ಕಣವನ್ನೂ ಪೂಜಿಸುತ್ತಿದ್ದಳು. ಸಿನೀಮಾ ಪತ್ರಿಕೆಗಳನ್ನು ಕೊಳ್ಳುವುದಕ್ಕೆ, ನಟ ನಟಿಯರ ಜತೆ ಪತ್ರ ವ್ಯವಹಾರ ಮಾಡುವುದಕ್ಕೆ ಅವಳು ತಿಂಗಳಿಗೆ ಹದಿನೈದು ಇಪ್ಪತ್ತು ರೂಪಾಯಿಗಳನ್ನು ನಿಸ್ಸಂಕೋಚವಾಗಿ ಖರ್ಚುಮಾಡುತ್ತಿದ್ದಳು. ಅವಳ ಹಾಸಿಗೆಯ ಕೆಳಗೆಲ್ಲಾ ಸಿನೀಮಾ ಪತ್ರಿಕೆಗಳೇ – ದಿಂಬಿನ ಕೆಳಗೆಲ್ಲಾ ಸಿನೀಮಾ ನಟನಟಿಯರ ಭಾವಚಿತ್ರಗಳೇ. ಅವಳ ರೂಮಿನ ಗೋಡೆಗಳನ್ನಲಂಕರಿಸಿದ್ದವರೂ ಅಶೋಕ ಕುಮಾರ್, ನರ್ಗೀಸ್,

ರಾಜ ಕಪೂರ್, ಅಂಜಲಿದೇವಿ, ಭಾನುಮತಿ, ಪ್ರೇಮನಾಥ್, ಮೆಹತಾಬ್, ಜಯಶ್ರೀ ಅವರೇ. ಅವಳ ಪುಸ್ತಕಗಳು, ನೋಟ್ಸ್‌ಗಳ ತುಂಬೆಲ್ಲಾ ಸಿನೀಮಾ ರಾಣಿ, ರಾಜರ ಚಿತ್ರಗಳು. ಸಿನೀಮಾಸಾಗರದಲ್ಲಿ ಅವಳಷ್ಟು ಮಿಂದಿದ್ದವರು ಬೇರೆ ಯಾರೂ ದೊರಕಲು ಶಕ್ಯವಿಲ್ಲ. ಸಿನೀಮಾದ ಕಾರ್ಡ್‌ಬೋರ್ಡ್, ಫ್ಲಡ್‌ಲೈಟ್ ಪ್ರಪಂಚದಲ್ಲಿ ಕುಳಿತು ಕೊಂಡು ತಾನು ಚಂದ್ರಲೋಕದಲ್ಲಿ ವಿಹರಿಸುತ್ತಿರುವ ತಾರಿಕೆಯಂತೆ ಶಕುಂತಲ ಕನಸುಕಾಣುವಳು. ಅವಳಿಗೆ ಇಹಲೋಕ ಮಿಥ್ಯೆಯಾಗಿತ್ತು. ಸಿನೀಮಾ ಲೋಕ ಸತ್ಯವಾಗಿತ್ತು.

ಬೆಟ್ಸಿ ಅವಕ್ಕಿಂತ ಸ್ವಲ್ಪ ಮುಂದೆ ಹೋಗಿದ್ದಳು. ಅವಳು ಶಕುಂತಲೆಯ ಸಿನೀಮಾಭಿಮಾನದ ಪಾಲುಗಾತಿಯಾಗಿದ್ದುದಲ್ಲದೆ ತನ್ನ ಅಭಿಮಾನಕ್ಕೆ ಶಾಶ್ವತರೂಪ ಕೊಡಲೂ ಪ್ರಯತ್ನಿಸುತ್ತಿದ್ದಳು. ಸಿನೀಮಾ ನಟಿಯರಂತೆ ವೇಷಧರಿಸಿಕೊಂಡು ಫೋಟೋ ತೆಗೆಸಿಕೊಳ್ಳುವ ಗೀಳು ಅವಳಿಗೆ ಬಲವಾಗಿ ಹಿಡಿದಿತ್ತು. ಪಂಜಾಬಿನ ಪಾಯಿಜಾಮಾ, ಕುಡ್ತ, ದುಪ್ಪಟ್ಟ, ಸಲ್ವಾರ್, ಮದರಾಸಿನ ಅಯ್ಯರ್ ಸೀರೆ, ಮಹಾ ರಾಷ್ಟ್ರದ ಕಚ್ಚೆ ಧರಿಸಿ ಬಗೆಬಗೆಯ ಭಾವ ಭಂಗಿಯಲ್ಲಿ ನಿಂತು, ಕುಳಿತು ಫೋಟೋ ತೆಗೆಸಿಕೊಂಡು, ದೊಡ್ಡ ಚಿತ್ರಸಂಪುಟ (album) ಮಾಡಿಟ್ಟು ಕೊಂಡಿದ್ದಳು. ಅವಳ ಒಂದು ಫೋಟೋ 'ಫಿಲ್ಮ್ ಇಂಡಿಯಾ' ಪತ್ರಿಕೆಯ ಉದಿತೋದಿತ ತಾರಾ ವಿಭಾಗದಲ್ಲಿ ಪ್ರಕಟವಾಗಿದ್ದುದು ಅವಳಿಗೆ ಹೆಮ್ಮೆಯನ್ನುಂಟುಮಾಡಿತ್ತು.

ಹಾಸ್ಟೆಲ್ಲಿನ ಬಹು ಮಂದಿ ವಿದ್ಯಾರ್ಥಿನಿಯರು ಸಿನೀಮಾ ಆರಾಧಕರಾಗಿದ್ದರೂ ಬೆಟ್ಸಿ, ಶಕುಂತಲೆಯ ಅತಿಮೋಹ ಕಂಡು ಅಪ ಹಾಸ್ಯ ಮಾಡುತ್ತಿದ್ದರು. ಒಮ್ಮೊಮ್ಮೆ ಅವರ ಕೀಟಲೆ ತಡೆಯಲಾರದೆ ಶಕುಂತಲ ಮುನಿಯುತ್ತಿದ್ದರೂ ಬೆಟ್ಸಿ ಉಸಿರೆತ್ತುತ್ತಿರಲಿಲ್ಲ.

"ನಕ್ಕವರ ಹಲ್ಲೇ ಕಾಣುತ್ತದೆ. ನಮಗೇನ್ರಿ ಆಗಬೇಕು ಶಕುಂತಲ."

"ನೋಡ್ರೀ—ಲೀಲಾವತಿ ರಾಜೀವಿಗೆ ಚುಚ್ಚಿಕೊಟ್ಟು ಹಾಸ್ಯ

ಮಾಡಿಸುವುದು.”

“ಲೀಲಾವತಿಯನ್ನು ಕೆಣುಕುವುದಕ್ಕೆ ಹೋಗಬೇಡವ್ಮ್ಮ ಅದರ ಬಾಯಿ ಹುಲಿ ಬೋನು ಇದ್ದ ಹಾಗಿದೆ.”

“ನನಗೆ ಕೋಪಬಂದರೆ ಎಂದಾದರೂ ರಾಜೀವೀನ ಹಿಡಿದು ಕೊಂಡು ಚೆನ್ನಾಗಿ ಬಡಿದುಬಿಡುತ್ತೇನೆ.”

“ಹಾಸ್ಟಲ್ ಬಿಡುವ ನಿರ್ಧಾರ ಮಾಡಿಕೊಂಡೇ ಆ ಕೆಲಸ ಮಾಡಿ ಶಕುಂತಲ.”

“ಹಾಸ್ಟಲಿನಲ್ಲಿದ್ದು ಕೊಂಡು ಇವರಾಡುವ ಮಾತುಗಳನ್ನು ಕೇಳುವುದು ಹೇಗ್ರೀ. ಎಲ್ಲರೂ ನನ್ನನ್ನು ನೋಡಿ ಮುಸಿಮುಸಿ ನಗುತ್ತಾರೆ.”

“ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು ಶಕುಂತಲ.”

“ಹಾಗೆಂದರೆ.. .”

“ಪದ್ಮನ್ನ ನಮ್ಮಕಡೆ ಮಾಡಿಕೊಂಡರೆ, ರಾಜೀವಿ, ಲೀಲಾವತಿ ಹಾವಳಿ ತಪ್ಪುವುದು ನೋಡಿ.”

“ಪದ್ಮನ್ನ ಮಾತನಾಡಿಸಿದರೆ ನಮ್ಮ ಕಥೆ ಮುಗಿದೇ ಹೋಯಿತು. ಅವರಕ್ಕ ನಮ್ಮನ್ನ ನುಂಗೇಬಿಡುತ್ತಾಳೆ.”

“ಅದೇ ಸ್ವಾರಸ್ಯ ಶಕುಂತಲ. ಕಮಲಮ್ಮನಿಗೆ ಲೀಲಾವತಿ ಯನ್ನು ಕಂಡರಾಗದು; ಕಮಲಮ್ಮ ಹಳೆಯಕಾಲದವಳೆಂದು ಲೀಲಾ ವತಿ ಅವಳನ್ನು ಹಾಸ್ಯಮಾಡುತ್ತಾಳೆ. ಪದ್ಮನ್ನ ನಮ್ಮ ಕಡೆ ಸೇರಿಸಿ ಕೊಂಡರೆ ಲೀಲಾವತಿ ಏನಾದರೂ ಸಣ್ಣ ಮಾತು ಆಡೇ ಆಡುತ್ತಾಳೆ. ಪದ್ಮನ ಪಕ್ಷವಹಿಸಿ ಕಮಲಮ್ಮ ಲೀಲಾವತಿಯನ್ನು ಚೆನ್ನಾಗಿ ವಿಚಾರಿಸಿಕೊಳ್ಳುತ್ತಾರೆ.”

ಶಕುಂತಲ ಸ್ವಲ್ಪಹೊತ್ತು ಆಲೋಚಿಸಿ

“ನಿಜ ಕಣ್ರೀ–ಏನು ಬುದ್ಧೀರಿ ನಿಮ್ಮದು ಬೆಟ್ಸಿ–diabolic brainರೀ ನಿಮ್ಮದು. ನಿಮ್ಮ ಕಸಿನ್ (cousin) ಏನಾದರ್ರೀ– ಈಚೆಗೆ ಕಾಣಲೇ ಇಲ್ಲ.”

"ಬೊಂಬಾಯೊ, ಕಲ್ಕತ್ತೆಯೊ, ಡೆಲ್ಲಿಯೊ ಎಲ್ಲಿದ್ದಾನೋ? ಹಣ ಮಾಡುವ ಹವ್ಯಾಸದಲ್ಲಿ ನಮ್ಮ ಜನಕ್ಕೆ ಮನೆಮಂದಿ ಕೂಡ ಮರೆತುಹೋಗುತ್ತಾರೆ."

"ಪದ್ಮನ್ನ ನೀವೇ...."

"ಆ ವಿಷಯ ನನಗೆ ಬಿಟ್ಟುಬಿಡಿ."

ಎಂದು ಬೆಟ್ಸಿ ಸೂಚಿಸಿದಳು.

ಪದ್ಮ ಒಬ್ಬಳೇ ಇದ್ದಾಗ ಮಾತನಾಡಿಸಲು ಸಮಯ ಕಾಯುತ್ತಿದ್ದ ಬೆಟ್ಸಿಗೆ ಒಂದು ದಿನ ಕಾಲೇಜಿನಲ್ಲಿಯೇ ಅವಕಾಶ ಸಿಕ್ಕಿತು. ಲೈಬ್ರರಿಯಲ್ಲಿ ಒಬ್ಬಳೇ ಕುಳಿತು ಆಧಾರಗ್ರಂಥ ನೋಡುತ್ತಿದ್ದ ಪದ್ಮನನ್ನು ಬೆಟ್ಸಿ ಮೆಲ್ಲನೆ ಕ್ಯಾಂಟೀನಿಗೆ ಕರೆದೊಯ್ದು, ಅವಳಿಗೊಂದು ವಡೆ ಕಾಫಿ ಕೊಡಿಸಿ, ಕಾಲೇಜಿನ ಒಳ ಆವರಣದಲ್ಲಿದ್ದ ಹಸಿರು ಹಾಸಿನ ಮೇಲೆ ಕರೆದೊಯ್ದು ಕೂಡಿಸಿಕೊಂಡು,

"ನೀವು ಕಾಲೇಜಿಗೆ ಬಂದದ್ದು ನಿಸ್ಸಾರ್ಥಕ ಕಣ್ರೀ ಪದ್ಮ" ಎಂದಳು.

"ಏಕೆ ಮಿಸ್. ಬೆಟ್ಸಿ?"

"ಕಾಲೇಜಿನಲ್ಲಿರುವ ನಾಲ್ಕು ವರ್ಷ ಸಂತೋಷವಾಗಿ ಕಾಲ ಕಳೆಯದೆ ಏನೋ ತಾಪತ್ರಯ ಹಚ್ಚಿಕೊಂಡಿರುವಿರಿ. ಫನ್ (Fun) ಇಲ್ಲದ ಬಾಳು ನೀರಸವಾಗುತ್ತದೆ."

"ನಾನೇನು ಮಾಡಲಿ ಮಿಸ್. ಬೆಟ್ಸಿ...."

"ಜಯಶ್ರೀ, ಶಾಂತಾರಾಮ್ ಅಭಿನಯಿಸಿರುವ 'ಡಾ. ಕೊಟ್ನಿಸ್' ನೋಡಿರುವಿರಾ?"

"ಇಲ್ಲ."

"ಶನಿವಾರ ನಾವೆಲ್ಲಾ ಹೋಗಬೇಕೆಂದಿರುವೆವು. ಬರುವಿರೇನು? ಥಿಯೇಟರಿನವರು ಮ್ಯಾಟಿನಿ ಆಟಕ್ಕೆ ನಮಗೆ ರಿಯಾಯಿತಿ ಕೊಡುತ್ತಾರೆ."

"ಅಕ್ಕ ಒಪ್ಪಿದರೆ ಬರುತ್ತೇನೆ."

"ಹಾಸ್ಟಲ್ ಹುಡುಗಿಯರೆಲ್ಲಾ ಹೋಗುವಾಗ ನಿಮ್ಮಕ್ಕ ಒಪ್ಪದೆ ಏನು ಮಾಡುತ್ತಾರೆ. ಬೇಕಾದರೆ ಅವರೂ ಬರಲಿ."

"ಸಿನೀಮಾ ಎಂದರೆ ಅವಳು ಸಿಡಿಗುಟ್ಟುತ್ತಾಳಮ್ಮ. ಅವಳನ್ನು ಕರೆಯುವುದಕ್ಕೂ ನನಗೆ ಧೈರ್ಯವಾಗುವುದಿಲ್ಲ."

"ಏನ್ರೀ ನೀವು – ಕಾಲೇಜಿನಲ್ಲಿ ಓದುತ್ತಿದ್ದರೂ ಅಕ್ಕನಿಗೆ ಇಷ್ಟು ಹೆದರುತ್ತೀರಲ್ಲಾ!"

"ಅಕ್ಕ ನನ್ನ ತುಂಬ ಪ್ರೀತಿಸುತ್ತಾಳೆ ಮಿಸ್. ಬೆಟ್ಸಿ."

ಕಮಲಮ್ಮನ ಬಗ್ಗೆ ಕುಟೀಕೆ ಮಾಡುವುದರಿಂದ ಕೆಲಸ ಕೆಡುತ್ತ ದೆಂದು ಗ್ರಹಿಸಿದ ಬೆಟ್ಸಿ

"ನಿಜ – ಅಷ್ಟು ಪ್ರೀತಿಸುವವರ ಮನಸ್ಸು ನೋಯಿಸಬಾರದು ಪದ್ಮ ಅವರನ್ನು ಕೇಳಿಕೊಂಡೇ ಬನ್ನಿ. ಚೀಣಾಕ್ಕೆ ಹೋಗಿ ವೈದ್ಯ ಸೇವೆ ಮಾಡುತ್ತಾ ಪ್ರಾಣ ಅರ್ಪಿಸಿದ ಒಬ್ಬ ಭಾರತತ್ಯಾಗಿಯ ಕಥೆ ಅದು. ಅಂಥ ಚಿತ್ರ ನೋಡುವುದಕ್ಕೆ ಕಮಲಮ್ಮನೂ ವಿರೋಧ ಮಾಡಲಾರರು."

"ಹಾಗೇ ಆಗಲಿ. ಕೇಳಿ ನೋಡುತ್ತೇನೆ – ನಿಮ್ಮ ಹತ್ತಿರ ಒಳ್ಳೊಳ್ಳೆಯ ಆಲ್ಬಮ್‌ಗಳಿವೆಯಂತೆ. ನನಗೊಂದು ಸಲ ತೋರಿಸು ವುದಿಲ್ಲವೇನ್ರೀ?"

"ನಿಮಗೆ ಯಾರು ಹೇಳಿದರು?"

"ಎಲ್ಲರಿಗೂ ಗೊತ್ತಿರುವ ವಿಷಯ ಯಾರೇಕೆ ಹೇಳಬೇಕು."

"ಆಲ್ಬಮ್ ನೋಡುವುದಕ್ಕೆ ಯಾವಾಗ ಬರುವಿರಿ?"

"ಅಕ್ಕ ಕಾಲೇಜಿಗೆ ಹೋಗಿದ್ದಾಗ ಬರಬೇಕಮ್ಮ."

"ಹಾಗೇ ಮಾಡಿ. ನೀವು ಯಾವಾಗ ಬಂದರೂ ತೋರಿಸಲು ಸಿದ್ಧವಾಗಿದ್ದೇನೆ."

ಗೆಲುವಿನ ಸುಮ್ಮಾನ ಬೆಟ್ಸಿಯ ಮುಖದ ಮೇಲೆ ತೇಲಿತು.

ಶನಿವಾರ ಹಾಸ್ಟಲ್ ಹುಡುಗಿಯರ ಜತೆಯಲ್ಲಿ ಪದ್ಮ 'ಡಾ. ಕೊಟ್ನಿಸ್' ನೋಡುವುದಕ್ಕೆ ಹೋಗಲು ಕಮಲಮ್ಮ ಅಭ್ಯಂತರ

ಪಡಿಸಲಿಲ್ಲ. ಆದರವಳು ಹಾಸ್ಟೆಲ್ ಬಿಟ್ಟು ಹೊರಗೆ ಕಾಲಿಡಲಿಲ್ಲ.

ಮಧ್ಯಾಹ್ನ ಕಮಲಮ್ಮ ಕಾಫಿ ತೆಗೆದುಕೊಳ್ಳುವುದಕ್ಕೆ 'ಡೈನಿಂಗ್ ಹಾಲ್' (Dining Hall)ಗೆ ಹೋದಾಗ ಅವಳ ಕಣ್ಣಿಗೆ ಬಿದ್ದವಳು ಮನೋರಮಾ ಒಬ್ಬಳೇ. ಮನೋರಮಾ, ಕಮಲಾ ಇಬ್ಬರೂ ಊಟದ ಮನೆಯಲ್ಲಿ, ಹಾಸ್ಟೆಲ್ಲಿನ ಒಳ ಆವರಣದಲ್ಲಿ, ಕಾಲೇಜಿನಲ್ಲಿ ಒಬ್ಬರನ್ನೊಬ್ಬರು ಯಾವಾಗಲೂ ಸಂಧಿಸುತ್ತಿದ್ದರೂ ಪರಸ್ಪರ ಬಳಕೆಯಾಗಲಿ ಪರಿಚಯವಾಗಲಿ ಇರಲಿಲ್ಲ. ತಾನಾಗಿಯೇ ಮುಂದುವರಿದು ಇತರರ ಪರಿಚಯ ಮಾಡಿಕೊಳ್ಳುವ ಅಭ್ಯಾಸ ಮನೋರಮನಿಗೂ ಇರಲಿಲ್ಲ. ಕಮಲಮ್ಮನೇ ಮನೋರಮೆಯನ್ನು ಮಾತನಾಡಿಸಿ

"ನೀವು ಸಿನೀಮಾಕ್ಕೆ ಹೋಗಲಿಲ್ಲವೇ ಮನೋರಮಾ" ಎಂದು ಕೇಳಿದಳು.

"ನಾನು ಆ ಪಿಕ್ಚರ್ ನೋಡಿದ್ದೇನಮ್ಮ – ನೋಡಿದ್ದೇ ನೋಡುವುದೇನು ಎಂದು ಹೋಗಲಿಲ್ಲ. ನೀವು ಹೋಗಲಿಲ್ಲವೇಕೆ ?"

"ನನಗೂ ಸಿನೀಮಾಕ್ಕೂ ಸ್ವಲ್ಪ ದೂರ ಮನೋರಮಾ."

ಇಬ್ಬರೂ ಕಾಫಿ, ಉಪಾಹಾರ ಮುಗಿಸಿಕೊಂಡು ಹಾಸ್ಟೆಲ್ಲಿನ ಆವಾರದಲ್ಲಿ ಬರುತ್ತಿದ್ದಂತೆ ಮನೋರಮೆಯ ರೂಮು ಸಿಕ್ಕಿತು.

"ಒಳಗೆ ಬನ್ರೀ ಕಮಲಮ್ಮ."

"ನಾನು ನಿಮ್ಮ ಓದು ಕೆಡಿಸಿದಂತಾಗುತ್ತದೆ."

"ಚಿಂತೆಯಿಲ್ಲ. ಬನ್ನಿ."

ಎಂದು ಒಳಕ್ಕೆ ಕರೆದೊಯ್ದಳು.

ಮನೋರಮಾ ಸ್ಪಷ್ಟವಾಗಿ ತೋರಿಸಿಕೊಳ್ಳದಿದ್ದರೂ, ಕಮಲಮ್ಮ ಒಳಕ್ಕೆ ಬಂದು ಕುಳಿತುದು ಅವಳ ಮನಸ್ಸಿಗೆ ಮಿಗಿಲಾದ ಸಂತೋಷವನ್ನುಂಟುಮಾಡಿತ್ತು.

"ನಿಮ್ಮ ಪರಿಚಯಮಾಡಿಕೊಳ್ಳಬೇಕೆಂದು ಬಹಳ ದಿವಸಗಳಿಂದ ಇಚ್ಛೆ ಪಡುತ್ತಿದ್ದೆ ಕಮಲಮ್ಮ."

"ಹಾಸ್ಟಲ್ಲಿಗೆ ಬೇಕಾಗುವ ಸ್ನೇಹಪರತೆ ನನ್ನಲ್ಲಿ ಇಲ್ಲವಲ್ರೀ."

"ಅದಕ್ಕೇ ನಿಮ್ಮ ಪರಿಚಯಮಾಡಿಕೊಳ್ಳಲು ನಾನು ಆತುರಳಾಗಿದ್ದುದು."

"ನೀವೂ ನನ್ನ ಹಾಗೇ 'ಮುಟ್ಟಿದರೆ ಮುನಿ'ಯುವ ಜಾತಿಗೆ ಸೇರಿದವರು."

"ಹಾಸ್ಟೆಲ್ ವಾತಾವರಣ ನನಗೆ ಸರಿಹೋಗುವುದಿಲ್ರೀ ?"

"ಏಕೆ ಮನೋರಮಾ ?"

"ಈ ಹುಡುಗಿಯರ ಕಾಡು ಹರಟೆ-ಕುಚೇಷ್ಟೆ-ಸೀರೆ ಕುಪ್ಪಸರಿಬ್ಬನ್ ಮಾತು-ಸಿನೀಮಾ ವ್ಯಾಮೋಹ ನನಗೆ ತಲೆಬೇಸರವನ್ನುಂಟುಮಾಡಿದೆ. ನಾನೇ ಒಲಿದು ಕಾಲೇಜ್ ಸೇರಲಿಲ್ಲ-ಅವರ ಬಲವಂತಕ್ಕೆ ಸೇರಬೇಕಾಯಿತು."

"ನಿಮ್ಮ ಮಾತು ನನಗೆ ಸರಿಯಾಗಿ ಅರ್ಥವಾಗಲಿಲ್ಲ ಮನೋರಮಾ."

"ನಾನು ಇಂಟರ್ ಪಾಸುಮಾಡಿದ ಕೂಡಲೆ ನನ್ನ ಮದುವೆಯಾಯಿತು. ಅವರೂ ನಾನೂ ಒಂದು ವರ್ಷ ಸಂಸಾರವೂ ಮಾಡಿದೆವು. ಅವರಿಗೆ 'ತುಂಗಭದ್ರಾ ಪ್ರಾಜೆಕ್ಟ್' (Tungabhadra Project) ನಲ್ಲಿ ಇಂಜನೀಯರ್ ಕೆಲಸ ಸಿಕ್ಕಿತು. ಪ್ರಾಜೆಕ್ಟ್ ವರ್ಷ, ಎರಡು ವರ್ಷಗಳಲ್ಲಿ ಮುಗಿಯುವುದರಿಂದ ನಾವು ಹೊಸಪೇಟೆಗೆ ಹೋಗಿ ಸಂಸಾರ ಹೂಡುವುದು ದುಸ್ಸಾಧ್ಯವಾಯಿತು. ಅವರು ಪ್ರಾಜೆಕ್ಟಿಗೆ ಒಬ್ಬರೇ ಹೋಗುವುದೆಂದು ನಿಶ್ಚಯವಾದ ಮೇಲೆ 'ಮನೆಯಲ್ಲಿ ಒಬ್ಬಳೇ ಕುಳಿತುಕೊಂಡೇನು ಮಾಡುವೆ? ಕಾಲೇಜಾದರೂ ಸೇರಿ ಡಿಗ್ರಿ ಮುಗಿಸಿಕೋ' ಎಂದರು. ನನಗೆ ಹಾಸ್ಟೆಲ್‌ವಾಸ ಬೇಡವಾಗಿದ್ದರೂ ಅವರ ತೃಪ್ತ್ಯರ್ಥವಾಗಿ ಒಪ್ಪಿಕೊಂಡು ಇಲ್ಲಿಗೆ ಬಂದೆ."

"ಅವರು ಇಲ್ಲಿಗೆ ಬರುತ್ತಿರುತ್ತಾರೆಯೇ ?"

"ಮೂರು ನಾಲ್ಕು ತಿಂಗಳಿಗೊಮ್ಮೆ ಬರುತ್ತಾರೆ. ಅವರಿಗೆ ರಜಾ ಸಿಕ್ಕುವುದು ತುಂಬ ಕಷ್ಟ. ಎರಡು ದಿವಸ ಇಲ್ಲಿದ್ದರೆ ಹೆಚ್ಚು."

"ಇಲ್ಲಿ ಅವರ ಸಂಬಂಧಿಗಳು ಯಾರಿದ್ದಾರೆ ?"

" ಅವರ ಸೋದರಮಾವನ ಮನೆ ಇದೆ."

ಕಮಲಮ್ಮನ ಕಣ್ಣುಗಳು ರೂಮು ಸುತ್ತ ಹರಿದು, ಮನೋರಮೆಯ ಮಂಚದ ಎದುರಿದ್ದ ದೊಡ್ಡ ಫೋಟೊ ಕಡೆ ತಿರುಗಿತು.

ಕಮಲಮ್ಮ ಮನೋರಮಾನ ಕಡೆ ತಿರುಗಿದಾಗ ಅವಳು ನಸುನಾಚಿ ಕತ್ತು ತಗ್ಗಿಸಿದಳು. ಮುಖ ಕೆಂಪೇರಿತ್ತು. ಹಣೆಯ ಮೇಲೆ ಮುತ್ತಿನ ಸಾಲಿನಂತೆ ಬೆವರು ಹನಿ ಕೂಡಿಕೊಂಡಿತ್ತು.

" ಇವರೇ ನಿಮ್ಮ...."

ಮನೋರಮಾ ಕತ್ತೆತ್ತಿ 'ಹೌದೆಂದು' ತಲೆಯಲ್ಲಾಡಿಸಿ

" ಹೇಗಿದ್ದಾರ್ರೀ ?"

" ಹೇಗಿದ್ದಾರೆಂಬುದನ್ನು ನಿಮ್ಮ ಕಣ್ಣುಗಳೇ ಹೇಳುತ್ತಿವೆಯಲ್ಲ!"

" ಹೋಗಿ ಕಮಲಮ್ಮ ಹಾಸ್ಯಮಾಡುತ್ತಿರುವಿರಿ."

" ಇಲ್ಲ ತಂಗಿ–ಸಂತೋಷಪಡುತ್ತಿದ್ದೇನೆ."

" ಅವರು ತುಂಬ ಒಳ್ಳೆಯವರ್‍ರೀ ಕಮಲಮ್ಮ. ನನ್ನನ್ನು ಗಟ್ಟಿಯಾಗಿ ಕೂಡ ಮಾತನಾಡಿಸುವುದಿಲ್ಲ. ಮಗುವಿನಂಥ ಸರಳ ಸ್ವಭಾವ. ಅವರಿಗೆ ಈ ಲೋಕದಲ್ಲಿ ಕೆಟ್ಟವರೇ ಇಲ್ಲ–ಪ್ರಪಂಚವನ್ನು ಅವರ ಹಾಗೆ ಪ್ರೀತಿಯಿಂದ, ಗೌರವದಿಂದ, ಅಭಿಮಾನದಿಂದ ನೋಡುವುದೊಂದು ಹಿರಿಯ ಗುಣವಲ್ಲವೇ ?"

" ನಿಸ್ಸಂದೇಹವಾಗಿ. ಪರಿಶುದ್ಧವಾದ ಮನಸ್ಸು ಪರಿಶುದ್ಧವಾದುದನ್ನೇ, ನೋಡುತ್ತದೆ.... ನೀವೂ ಹಾಗೇ ಇದ್ದೀರಿ."

" ಬಿಡಿ ಅಕ್ಕ–ಅವರ ಯೋಗ್ಯತೆಯಲ್ಲಿ ನಾಸಿವೆಕಾಳಿನಷ್ಟು ನನ್ನಲ್ಲಿಲ್ಲ. ಎಷ್ಟೋ ಸಲ ಕಾಗದ ಬರೆಯಲಿಲ್ಲವೆಂದು ನಾನೇ ಅವರ ಮೇಲೆ ಕೋಪಮಾಡಿಕೊಂಡಿದ್ದೇನೆ. ಅವರು ನಗುತ್ತಾ 'ಮನೂ, ನಾನೊಬ್ಬ ಮಣ್ಣು ಒಡ್ಡ. ಮಣ್ಣು ಒಡ್ಡನಲ್ಲಿ ಹೆಚ್ಚಿನ ನಾಗರಿಕತೆ ಇರಬೇಕೆಂದರೆ ಹೇಗೆ ಸಾಧ್ಯ' ಎನ್ನುತ್ತಾರೆ. ಅವರು ಎದುರಿಗಿದ್ದರೆ ಜಗಳ ಕಾಯುತ್ತೇನೆ. ಅವರು ಹೊರಟು ಹೋದರೆ ನನ್ನನ್ನು ನಾನೇ ಶಪಿಸಿಕೊಂಡು ದುಃಖಪಡುತ್ತೇನೆ."

ಕಮಲಮ್ಮನಿಗೆ ತನ್ನ ಜೀವನದ ಗತ ಮಧುರ ದಿನಗಳ ನೆನಪಾಯಿತು. ಥಟ್ಟನೆ ಅವಳ ಕಣ್ಣುಗಳಲ್ಲಿ ನೀರು ಮಿಡಿಯಿತು.

"ಏಕೆ ಅಳುತ್ತಿರುವಿರಿ ಕಮಲಕ್ಕ ?"

"ಏನೋ ನೆನಪಾಗಿ ಕಣ್ಣಲ್ಲಿ ನೀರು ಬಂತು."

"ನಿಮ್ಮ ದುಃಖ ನಾನು ಬಲ್ಲೆ ಕಮಲಕ್ಕ. ಅದಕ್ಕೆ ಯಾರು ಸಮಾಧಾನ ಹೇಳಲು ಸಾಧ್ಯ?"

ಮನೋರಮಾನ ಸೌಜನ್ಯ, ಸೌಹಾರ್ದ ಕಮಲಮ್ಮನ ಹೃದಯ ಕವಾಟಗಳನ್ನು ತೆರೆಸಿದವು. ತನ್ನ ಜೀವನ ವೃತ್ತಾಂತವನ್ನು ಸಾದ್ಯಂತವಾಗಿ ಅವಳಿಗೆ ನಿರೂಪಿಸಿದಳು. ಮನೋರಮಾ ಕುತೂಹಲದಿಂದ

"ನಿಮ್ಮ ಯಾಜಮಾನರು ಫಿಲೋಮಿನಾ ಕಾಲೇಜಿನಲ್ಲಿ ಇಂಗ್ಲಿಷ್ ಲೆಕ್ಚರರ್ ಆಗಿದ್ದರೆಂದಿರಾ ?"

"ಹೌದು."

"ನಾನು ಅವರನ್ನು ನೋಡಿದ್ದೆ ಕಣ್ರೀ"

"ನೋಡಿದ್ದಿರಾ ?"

"ನಾನು ಇಂಟರ್ ಕಾಲೇಜಿನಲ್ಲಿ ಓದುತಿದ್ದಾಗ ಅವರೇನೇ ಇಂಗ್ಲಿಷ್ ಅಸೋಸಿಯೇಷನ್ನಿನ ಅತಿಥಿಗಳಾಗಿ ಬಂದು 'ಟಿ. ಯೆಸ್. ಈಲಿಯಟ್ಟರ ಕಾವ್ಯ' ದಮೇಲೆ ಸೊಗಸಾದ ಭಾಷಣಮಾಡಿದರು. ನನ್ನ ಆಟೋಗ್ರಾಫ್ (autograph) ಪುಸ್ತಕದಲ್ಲಿ ಅವರ ಸಹಿ ಕೂಡ ತೆಗೆದುಕೊಂಡಿದ್ದೇನೆ. ತೋರಿಸಲೇ ?"

"ತೋರಿಸಿ."

ಮನೋರಮಾ ತನ್ನ ಟ್ರಂಕಿನಲ್ಲಿದ್ದ ಆಟೋಗ್ರಾಫ್ ಪುಸ್ತಕ ಕೈಗೆತ್ತಿಕೊಂಡು ಅದರ ಒಂದು ಹಾಳ ತೆಗೆದು ಕಮಲಮ್ಮನ ಕೈಯಲ್ಲಿಟ್ಟಳು.

ಕಮಲಮ್ಮ ತನ್ನ ಪತಿಯ ಹಸ್ತಾಕ್ಷರವನ್ನು ಕಣ್ಣಿಗೊತ್ತಿಕೊಂಡಳು.

ಮನೋರಮೆಯ ಬಗ್ಗೆ ಕಮಲಮ್ಮನಿಗೆ ಅವರ್ಣನೀಯ ವಿಶ್ವಾಸ

ಅಂಕುರಿಸಿತು.

ಕಮಲ ತನ್ನ ರೂಮಿಗೆ ಹೊರಡಲು ಎದ್ದು ನಿಂತಾಗ ಮನೋರಮಾ ದೈನ್ಯದಿಂದ

"ಆಗಾಗ್ಗೆ ಇಲ್ಲಿಗೆ ಬರುತ್ತಿರಿ ಕಮಲಮ್ಮ. ತಮ್ಮ ಜತೆ ಮಾತನಾಡಿದರೆ ನನ್ನ ಮನಸ್ಸಿಗೆ ತೃಪ್ತಿಯಾಗುತ್ತದೆ" ಎಂದಳು.

"ನೀವೂ ನನ್ನ ರೂಮಿಗೆ ಬರುತ್ತಿರಿ ಮನೋರಮಾ."

"ನಾನು ಬಂದರೆ ತಮ್ಮ ಓದಿಗೆ ಅಡ್ಡಿಯಾಗುವುದೊ ಏನೋ ?"

"ಏನಾದರೂ ಚಿಂತೆಯಿಲ್ಲ ಬನ್ನಿ ಮನೋರಮಾ, ಈ ಹಾಸ್ಟಲ್ಲಿನಲ್ಲಿ ನನ್ನವರಾಗಿರುವವರು ನೀವೇ ಒಬ್ಬರು."

"ನಾನೂ ಕನ್ನಡದಲ್ಲಿ ಕೆಲವು ಕಥೆಗಳನ್ನು ಬರೆದಿದ್ದೇನೆ. ನಿಮಗೆ ಪುರಸತ್ತಾದಾಗ ತಂದು ಓದುತ್ತೇನೆ."

"ಕಥೆಗಳನ್ನು ಬರೆದಿರುವಿರಾ ?"

"ಒಂದು ಕಾದಂಬರಿ ಬರೆಯಲು ಪ್ರಯತ್ನಿಸುತ್ತಿದ್ದೇನೆ. ಕಥಾವಸ್ತು ಯೋಚಿಸಿದ್ದೇನೆ. ಹೇಗೆ ಆರಂಭಿಸಬೇಕೋ ತಿಳಿಯದಾಗಿದೆ. ನೀವೇ ನನಗೆ ದಾರಿ ತೋರಿಸಬೇಕು."

"ನಾನು ಹೆಚ್ಚು ಓದಿದವಳಲ್ಲ ಮನೋರಮಾ."

"ಚಿಂತೆಯಿಲ್ಲ ಕಮಲಕ್ಕ. ಹೆಚ್ಚು ಅನುಭವ ಪಡೆದಿರುವವರು ನೀವು. ದುಃಖದಲ್ಲಿ ಬೇಯುವ ಜೀವ ಪುಟವಿಟ್ಟ ಚಿನ್ನದಂತಾಗುತ್ತದಂತೆ."

"ನಾನು ಭಾಗ್ಯಶಾಲಿ ಮನೋರಮಾ."

"ಭಾಗ್ಯ ಸಿಕ್ಕಿರುವುದು ನನಗೆ ಕಮಲಕ್ಕ."

೮

ರುಕ್ಮಿಣಮ್ಮ ಸಾಧಾರಣವಾಗಿ ಕಾಹಿಲೆ ಬೀಳುತ್ತಿರಲಿಲ್ಲ. ನೆಗಡಿ, ಕೆಮ್ಮು, ಜ್ವರವೆನ್ನುವುದಂತೂ ಅವಳು ಕಾಣೇಕಾಣಳು. ಒಮ್ಮೊಮ್ಮೆ ಪರಿಹಾಸ್ಯಕ್ಕೆ 'ನನ್ನದು ದೈತ್ಯದೇಹ' ಎನ್ನುತ್ತಿದ್ದಳು. ಆದರೆ ವರ್ಷದಿಂದೀಚಿನ ಘಟನೆಗಳು, ಅವುಗಳು ಹೊರೆಸಿದ ಜವಾಬ್ದಾರಿ ಅವಳ 'ದೈತ್ಯದೇಹ' ವನ್ನೂ ಹಿಡಿದು ಅಲುಗಾಡಿಸಿದ್ದವು. ಒಳಗೇ ಕುದಿಯುತ್ತಿದ್ದ ಚಿಂತೆಯಲ್ಲದೆ, ಸೌಭಾಗ್ಯನಿಗಾಗಿ ನಿತ್ಯ ನಿದ್ದೆಕೆಡಬೇಕಾಗಿತ್ತು. ನೂರೆಂಟು ವ್ರತ, ಪೂಜೆಗಳಲ್ಲಿ ಒಪ್ಪತ್ತೂ ರುಕ್ಮಿಣಿ ಹೊತ್ತಿಗೆ ಸರಿಯಾಗಿ ಊಟ ಮಾಡುತ್ತಿರಲಿಲ್ಲ. ಊಟಕ್ಕೆ ಕೂಡಬೇಕೆಂದಿರುವುದರಲ್ಲಿ ಯಾರಾದರೂ ಅತಿಥಿಗಳು, ಕಕ್ಷಿಗಾರರು ಬರುತ್ತಿದ್ದರು. ಪುನಃ ಅಡಿಗೆಮಾಡಿ, ಅವರಿಗೆ ಬಡಿಸಿ ತರುವಾಯ ಮೂರು ಗಂಟೆಗೊ ನಾಲ್ಕು ಗಂಟೆಗೊ ಎರಡು ತುತ್ತು ತಂಗೂಳು ಉಣ್ಣುವುದು. ಆಲಸ್ಯ, ಅಂತಸ್ತಾಪಗಳೆರಡೂ ಅವಳ ದೇಹವನ್ನು ನುಚ್ಚುನೂರು ಮಾಡುತ್ತಿದ್ದವು.

ಗೋದಮ್ಮನವರಿಗೂ ರುಕ್ಮಿಣಿಯ ದೇಹಸ್ಥಿತಿ ಗೊತ್ತಾಗಲಿಲ್ಲ. ದ್ವಾದಶಿಯ ದಿನ ತಾನೇತಾನಾಗಿ ಗುಟ್ಟು ರಟ್ಟಾಯಿತು.

ಎರಡು ಏಕಾದಶಿ ಒಂದೇ ಕಾಲಕ್ಕೆ ಅವತರಿಸಿದವು. ಮೊದಲನೆಯ ದಿನದ ಉಪವಾಸವಾದಮೇಲೆ ಗೋದಮ್ಮನವರು

"ರುಕ್ಕೂ, ಎರಡನೆಯ ದಿನದ ಉಪವಾಸ ನೀನು ಮಾಡ

ಬೇಡಮ್ಮ ಪಾರಣೆ ಮಾಡಿಬಿಡು" ಎಂದರು.

"ಚಿಂತೆಯಿಲ್ಲಮ್ಮ. ಇವತ್ತು ಉಪವಾಸಮಾಡಿ ನಾಳೆ ನಿಮ್ಮ ಜತೆಯಲ್ಲೇ ಪಾರಣೆಮಾಡುತ್ತೇನೆ."

"ನಿನ್ನ ಮೈಗಾಗಲ್ಲ ಕಣೇ. ನವೆಕೊಂಡು ಹೋಗ್ತಾ ಇದ್ದೀ. ಹೊತ್ತಿಗೆ ಹೊತ್ತಿಗೆ ಊಟವಿಲ್ಲ–ನಿದ್ದೆಯಿಲ್ಲ. ಮನೆಯಲ್ಲಿ ಒಬ್ಬರು ಉಪವಾಸ ಮಾಡಿದರೆ ಸಾಲದೇ ? ನನ್ನ ಮಾತು ಕೇಳು ರುಕ್ಕೂ."

"ಎರಡು ಏಕಾದಶಿ ಬರುವುದು, ಅಪರೂಪ ಅಮ್ಮ .ದಯವಿಟ್ಟು ನನ್ನ ಪಾರಣೆ ಮಾಡು ಎಂದು ಹೇಳಬೇಡಿ. 'ಉಪವಾಸಖಂಡಿತ ಮಾಡಬೇಡ' ಎಂದು ನೀವು ಕಡ್ಡಾಯ ಮಾಡಿದರೆ ನಿಮ್ಮ ಮಾತು ತೆಗೆದು ಹಾಕಲಾರದೆ ನಾನು ಪಾರಣೆ ಮಾಡುತ್ತೇನೆ. ಆದರೆ ನನ್ನ ಮನಸ್ಸಿನಲ್ಲಿ ಅಳುಕು ನಿಂತು ಬಿಡುತ್ತದೆ."

"ಹಾಗೆ ಮಾತ್ರ ಮಾಡಬೇಡ ನನ್ನ ತಾಯಿ. ನಿನಗೆ ಹೇಗೆ ಸಂತೋಷವೋ ಹಾಗೆ ಮಾಡು. ಹೋಗಲಿ, ಊಟ ಬೇಡವಾದರೆ ಏನಾದರೂ ಫಲಹಾರವಾದರೂ ಮಾಡು."

"ಮಾಡುತ್ತೇನೆ. ದೇವರಿಗೆ ನೇವೇದ್ಯಮಾಡಿದ ಹಣ್ಣು ತಿನ್ನುತ್ತೇನೆ."

ಎಂದಳು. ಅವಳು ತಿಂದುದೆಲ್ಲಾ ಎರಡು ಕಿತ್ತಲೆತೊಳೆ.

ಮಾರನೆಯ ಬೆಳಿಗೆ ಯಥಾವಿಧಿಯಂತೆ ರುಕ್ಮಿಣಿ, ಗೋದಮ್ಮ ನಾಲ್ಕು ಗಂಟೆಗೇ ಎದ್ದು ಸ್ನಾನಮಾಡಿ ಪೂಜೆ ಮುಗಿಸಿ ದ್ವಾದಶಿ ಪಾರಣೆಗೆ ಹೋಳಿಗೆ ಪಾಯಸದ ಅಡಿಗೆ ಮಾಡಿಟ್ಟರು.

ಮಾಧವರಾಯನಿಗೂ, ಮಕ್ಕಳಿಗೂ ಏಳು ಗಂಟೆಗೇ ಊಟವೂ ಆಯಿತು.

"ನೀವೂ ಕುಳಿತುಕೊಂಡು ಬಿಡಿಯಮ್ಮ ಬಡಿಸುತ್ತೇನೆ."

ಎಂದಳು ರುಕ್ಮಿಣಿ.

"ಚೆನ್ನಾಯಿತು. ನೀನು ಹಸಿದುಕೊಂಡಿರುವಾಗ ನಾನು ಕುಳಿತುಕೊಂಡು ಗದುಗಲೇ. ಮೊದಲು ನಿನಗೆ ಬಡಿಸಿ, ನಾನು

ಕುಳಿತುಕೊಳ್ಳುತ್ತೇನೆ."

ಎಂದೆಂದು ಗೋದಮ್ಮನವರು ಅಡಿಗೆಯ ಮನೆಯಲ್ಲಿಯೇ ರುಕ್ಮಿಣಿಗೆ ಎಲೆ ಹಾಕಿದರು.

ರುಕ್ಮಿಣಿ, ಮುಸರೆಪಾತ್ರೆಯನ್ನು ಹೊರಗೆ ಹಾಕಿ ಬರಲು ಹೋದಳು. ಎಷ್ಟು ಹೊತ್ತಾದರೂ ಒಳಗೆ ಬರಲಿಲ್ಲ. ಗೋದಮ್ಮ ಗಾಬರಿಗೊಂಡು ರುಕ್ಮಿಣಿಯನ್ನರಸುತ್ತ ಹೋದರು ...

ಹಿತ್ತಲು ಬಾಗಿಲಬಳಿ ಮಲಗಿದ್ದ ರುಕ್ಮಿಣಿಯನ್ನು ಕಂಡು ಚಕಿತರಾಗಿ ಗೋದಮ್ಮ ಅವಳ ಸಮೀಪಕ್ಕೆ ಹೋಗಿ ಮುಟ್ಟಿ ನೋಡಿದರು. ರುಕ್ಮಿಣಿ ಮೆಲ್ಲನೆ ಚೇತರಿಸಿಕೊಂಡು ಎದ್ದು ಕುಳಿತಳು.

"ಏನಾಯಿತೇ ರುಕ್ಕೂ."

"ಏನೂ ಇಲ್ಲ ಅತ್ತೆ. ತಲೆತಿರುಗಿಕೊಂಡು ಬಂದಹಾಗಾಯಿತು. ಸ್ವಲ್ಪ ವಿಶ್ರಮಿಸಿಕೊಂಡು ಒಳಗೆ ಬರುತ್ತಿದ್ದೆ. ನೀವೇಕೆ ಇಷ್ಟು ಗಾಬರಿಯಾಗಿರುವಿರಿ."

ಗೋದಮ್ಮನವರ ಬಾಯಲ್ಲಿ ಉಸಿರು ಹೊರಡಲಿಲ್ಲ. ರುಕ್ಮಿಣಿಯ ಕೈ ಹಿಡಿದು ಕರೆತಂದು ಅಡಿಗೆಯ ಮನೆಯಲ್ಲಿ ಕೂಡಿಸಿ

"ಎರಡು ಉಪವಾಸ ಬೇಡವಮ್ಮಾಂದೆ–ನನ್ನ ಮಾತು ಕೇಳಲಿಲ್ಲ."

"ಸ್ವಲ್ಪ ಪಿತ್ಥಸಂಕಟವಾಗಿದೆ ಅಮ್ಮ–ಅಷ್ಟೇ–ಇನ್ನೇನೂ ಇಲ್ಲ. ಬಿಸಿನೀರಿನಲ್ಲಿ ಸ್ವಲ್ಪ ನಿಂಬೆಹಣ್ಣಿನ ಪಾನಕಮಾಡಿಕೊಡುವಿರಾ ?"

ಗೋದಮ್ಮ ಒಂದೇ ನಿಮಿಷದಲ್ಲಿ ಪಾನಕಮಾಡಿ ತಂದು ರುಕ್ಮಿಣಿಯ ಕೈಗಿತ್ತರು. ರುಕ್ಮಿಣಿ ಅದನ್ನು ಕುಡಿದು

"ನೀವು ಊಟಮಾಡಿ–ನಾನು ಸ್ವಲ್ಪ ಮಲಗಿದ್ದೆದ್ದು ಊಟ ಮಾಡುತ್ತೇನೆ" ಎಂದಳು.

ಗೋದಮ್ಮನವರ ಮುಖ ಅರಕ್ತವಾಗಿತ್ತು. ಮನಸ್ಸಿನ ಉಮ್ಮಳವನ್ನು ನಿಗ್ರಹಿಸಿಕೊಳ್ಳಲು ಅವರು ಪ್ರಯತ್ನಿಸುತ್ತಿದ್ದರು. ನಿಸ್ತೇಜಗೊಂಡಿದ್ದ ಅವರ ಮುಖನೋಡಿ ರುಕ್ಮಿಣಿಯ ಅಂತಃಕರಣ ಉಕ್ಕಿಬಂತು.

" ನಿಮ್ಮ ರುಕ್ಕೂಗೆ ಏನಾಗಿದೆಯೆಂದು ಇಷ್ಟು ಯೋಚನೆ ಮಾಡುತ್ತಿರುವಿರಿ. ಉಪವಾಸಮಾಡಿದೆ, ಸ್ವಲ್ಪ ಆಯಾಸವಾಗಿದೆ. ಇಷ್ಟಕ್ಕೇ ನೀವು ತಲೆಯಮೇಲೆ ಕೈಹೊತ್ತು ಕುಳಿತರೆ ಆಗುತ್ತದೆಯೇ ? ಏಳಿ–ನನಗೂ ಬಡಿಸಿ, ಊಟಮಾಡೋಣ."

ಗೋದಮ್ಮನವರ ದುಃಖದ ಕಟ್ಟೆ ಒಡೆದುಹೋಯಿತು.

" ರುಕ್ಕೂ–ನಮ್ಮ ಕೈ ಬಿಡಬೇಡಪ್ಪಾ " ಎಂದರು.

" ಇದೇನಮ್ಮ–ಹೀಗೆ ಸಂಕಟಪಡುತ್ತಿರುವಿರಿ."

" ನೀನು ಏನು ಅನುಭವಿಸುತ್ತಿದ್ದೀ ಎಂಬುದನ್ನು ನಾನು ಬಲ್ಲೆ ರುಕ್ಕೂ. ಭಗವಂತನ ಪಾದ ಸೇರುವ ಯೋಚನೆ ಮಾಡಬೇಡ."

" ನನ್ನ ಭಗವಂತ ನನ್ನ ಜತೆ ಇರುವಾಗ ನಾನು ಬೇರೆ ಭಗ ವಂತನ ಪಾದ ಏಕೆ ಸೇರಬೇಕಮ್ಮ. ನನ್ನ ಸ್ವಾಮಿ ಅಪ್ಪಣೆ ಪಡೆಯದೆ ನಾನು ಎಲ್ಲಿಗೂ ಹೋಗುವುದಿಲ್ಲ ಸುಮ್ಮನಿರಿ."

ಎಂದು ಸಮಾಧಾನಪಡಿಸಿದಳು.

ಅತ್ತೆಯ ಬಲವಂತಕ್ಕೆ ರುಕ್ಮಿಣಿ ಕಷಾಯ ತಾನೇ ಮಾಡಿ ಕೊಂಡು ಕುಡಿಯಬೇಕಾಯಿತು.

ರುಕ್ಮಿಣಿಯ ದೇಹಸ್ಥಿತಿಯ ವಿಷಯ ಮಗನ ಕಿವಿಯಮೇಲೆ ಹಾಕದಿದ್ದರೆ ತಪ್ಪಾಗುವುದೆಂದು ಗೋದಮ್ಮನವರು ಸೂಕ್ಷ್ಮವಾಗಿ ತಿಳಿಸಿ.

"ಗಾಬರಿ ಪಡಬೇಕಾದದ್ದಿಲ್ಲ ಮಾಧೂ–ನಿಶ್ಶಕ್ತಿಯಾಗಿದೆ ಅಷ್ಟೇ" ಎಂದಿದ್ದರು.

ಅಂದು ಊಟಕ್ಕೆ ಕುಳಿತಿದ್ದಾಗ ಮಾಧವರಾಯ

" ಈಚೆಗೆ ನೀನು ಹೇಗಾಗಿದ್ದೀಯಾ ಗೊತ್ತೇ ರುಕ್ಕೂ "

ಎಂದು ಕೇಳಿದ.

" ಏನಾಗಿದ್ದೇನೆ. ಚೆನ್ನಾಗಿಯೇ ಇದ್ದೇನೆ. "

" ನನ್ನ ದೃಷ್ಟಿಪಾಟ ಕೆಟ್ಟಿಲ್ಲ ರುಕ್ಕೂ" ನಾಳೆ ನನ್ನ ಜತೆ ಮೈಸೂರಿಗೆ ಹೊರಡಲು ನೀನು ಸಿದ್ಧವಾಗಬೇಕು. "

" ಏಕೆ ? "

" ದೊಡ್ಡ ಡಾಕ್ಟರನ್ನು ನೋಡಿಕೊಂಡು ಬರೋಣ. "

" ನಾನೇ ವೈದ್ಯಳು ಎಂಬುದನ್ನು ಮರೆತುಬಿಟ್ಟಿರಾ ? "

" ತಮ್ಮ ವೈದ್ಯ ತಾವೇ ಮಾಡಿಕೊಳ್ಳಬಾರದಂತೆ ! "

" ಡಾಕ್ಟರ ಬಳಿ ಹೋಗುವಷ್ಟು ನನಗೆ ಕಾಹಿಲೆಯಿಲ್ಲ. ಒಂದು ವೇಳೆ ನಾವು ಹೋದರೂ ಡಾಕ್ಟರುಗಳಿಂದ ನಮಗೆ ಸಿಕ್ಕುವ ಸಹಾಯವೂ ಅಷ್ಟಕ್ಕಷ್ಟೆ. ಅವರ ಮಿಕ್‌ಶ್ಚರು ಕುಡಿದು, ನಾನು ಇಂಜಕ್ಷನ್ ಚುಚ್ಚಿಸಿಕೊಳ್ಳಲಾರೆ. "

" ಡಾಕ್ಟರು ಬೇಡವಾದರೆ ನಂಜನಗೂಡಿಗೆ ಹೋಗಿ ಬಿ. ವಿ. ಪಂಡಿತರನ್ನು ಕಂಡು ಬರೋಣ. "

" ನನಗೇನೂ ಆಗಿಲ್ಲಾಂದ್ರೆ. ಎಳೆಮಗುವನ್ನು ನೋಡಿಕೊಂಡು ನಿದ್ದೆಕೆಟ್ಟಿದ್ದೀನಿ. ಇನ್ನೇನು ರಜಾ ಬರುತ್ತದೆ. ಕಮಲ ಬಂದು ತನ್ನ ಮಗು ನೋಡಿಕೊಳ್ಳುತ್ತಾಳೆ–ನನಗೆ ವಿಶ್ರಾಂತಿ ಸಿಕ್ಕುತ್ತದೆ. ನನ್ನ ಆರೋಗ್ಯ ತಾನೇ ತಾನಾಗಿ ಸುಧಾರಿಸುತ್ತದೆ. "

" ಎಲ್ಲಾದಕ್ಕೂ ನಮ್ಮ ಕೈ, ಬಾಯಿ ಎರಡೂ ಕಟ್ಟಿಬಿಡುತ್ತೀ ರುಕ್ಕೂ. "

" ಇಲ್ಲಾಂದ್ರೆ–ನನ್ನ ಮಾತು ಕೇಳಿ" ಎಂದಳು.

ಪರೀಕ್ಷೆ ಮುಗಿದು ಕಮಲ, ಪದ್ಮ, ನಾರಾಯಣಸ್ವಾಮಿ ಊರಿಗೆ ಬರುವುದನ್ನೇ ಮಾಧವರಾಯ ನಿರೀಕ್ಷಿಸಬೇಕಾಯಿತು. ರುಕ್ಮಿಣಿಯ ದೇಹಸ್ಥಿತಿಯ ವಿಷಯ ಅವನ ಹೃದಯದಲ್ಲಿ ಭೀತಿಯ ಬೆಳೆಯನ್ನು ಬಿತ್ತಿತ್ತು.

## ೬

ಪರೀಕ್ಷೆ ಸಮೀಪಿಸುತ್ತಿದ್ದುದರಿಂದ ಕಮಲನಿಗೆ ಸ್ವಲ್ಪವೂ ಪುರಸತ್ತಿಲ್ಲ. ಮನೋರಮಾ ಜತೆಯಲ್ಲಿ ಎರಡು ಮೂರು ದಿನಕ್ಕೊಮ್ಮೆ ಸ್ವಲ್ಪಕಾಲ ಕಳೆಯುವುದೇ ಅವಳಿಗೆ ಕಷ್ಟವಾಗಿತ್ತು.

ಒಂದು ದಿನ ಕಮಲ ಓದುತ್ತ ಕುಳಿತಿದ್ದಂತೆ ಅವಳಿಗೆ ಡಿಕ್ಷ್ನರಿಯ ಆವಶ್ಯಕತೆ ತೋರಿತು. ಅಕ್ಕ, ತಂಗಿ ಇಬ್ಬರೂ ಒಂದೇ ಡಿಕ್ಷ್ನರಿ ಉಪಯೋಗಿಸುತ್ತಿದ್ದರು. ಪುಸ್ತಕ ಪದ್ಮನ ಮೇಜಿನ ಮೇಲಿರಬಹುದೆಂದು ಕಮಲ ಅವಳ ಮೇಜು ತಡಕುವಾಗ, ಮೇಜಿನ ಪಕ್ಕಕ್ಕೆ ಜೋಡಿಸಿಡಲಾಗಿದ್ದ ಪುಸ್ತಕಗಳು ಕೆಳಗೆ ಬಿದ್ದವು.

ಕಮಲಮ್ಮ ನೆಲದಮೇಲೆ ಬಿದ್ದ ಪುಸ್ತಕಗಳನ್ನೆತ್ತಿಕೊಂಡು ಮಾಟವಾಗಿ ಮೇಜಿನಮೇಲೆ ಜೋಡಿಸಲಾರಂಭಿಸಿದಳು. ಪುಸ್ತಕಗಳ ಜತೆ ಕೆಳಗೆ ಹಾಳೆಗಳೂ ಬಿದ್ದು ಚಲ್ಲಾಪಿಲ್ಲಿಯಾಗಿದ್ದವು. ಅವುಗಳನ್ನು ಸಂಗ್ರಹಿಸುವಾಗ ಕಮಲಮ್ಮನ ಕೈಗೆ ಒಂದು ಫೋಟೋ ಸಿಕ್ಕಿತು.

ನೆಲದಮೇಲೆ ಹಾಗೇ ಕುಳಿತು ಫೋಟೋ ದಿಟ್ಟಿಸಿ ನೋಡಿದಳು. ಪದ್ಮ ಪಂಜಾಬಿ ಉಡುಪಿನಲ್ಲಿ ನಿಂತ ಭಂಗಿ. ಪಾಯಿಜಾಮ, ಕುಡತ, ಮೇಲೆ ದುಪ್ಪಟ್ಟ.

ಕಮಲಮ್ಮನ ದೇಹಾದ್ಯಂತವೂ ಕಂಪಿಸತೊಡಗಿತು. ಫೋಟೋ ತೆಗೆದು ತನ್ನ ಹಾಸಿಗೆಯ ಕೆಳಗಿಟ್ಟು, ಪುಸ್ತಕಗಳನ್ನೂ ಹಾಳೆಗಳನ್ನೂ

ಪದ್ಮನ ಮೇಜಿನಮೇಲೆ ಜೋಡಿಸಿಟ್ಟು ಓದಲು ಕುಳಿತಳು.

ಮನಶ್ಶಾಂತಿಗೆ ಭಂಗ ಬಂದಿತ್ತು. ಓದಿದ್ದು ತಲೆಗೆ ಹಿಡಿಯುತ್ತಿರಲಿಲ್ಲ. ನೂರೆಂಟು ಚಿಂತೆಗಳು ಹೊಟ್ಟೆಯಲ್ಲಿ ಸಂಕಟವನ್ನುಂಟುಮಾಡಿದ್ದವು.

ಸಂಜೆ ಐದು ಗಂಟೆಗೆ ಬಂದ ಪದ್ಮ ಮುಖ ತೊಳೆದುಕೊಂಡು ತಲೆ ಬಾಚಿಕೊಂಡಳು. ವಾಡಿಕೆಯಂತೆ ಅವಳು ಹೊರಗೆ ಹೊರಟಾಗ ಕಮಲಮ್ಮ

"ಸ್ವಲ್ಪ ತಡೀ ಪದ್ಮ" ಎಂದಳು.

"ಏನಕ್ಕಾ ?"

"ಎಲ್ಲಿಗೆ ಹೊರಟೆ ?"

"ಇಲ್ಲೇ–ತೋಟದಲ್ಲಿ ಹತ್ತು ನಿಮಿಷ ತಿರುಗಾಡಿಕೊಂಡು ಬಂದು ಓದುವುದಕ್ಕೆ ಕೂಡುತ್ತೇನೆ."

"ಸ್ವಲ್ಪ ಕುಳಿತುಕೊ– ನಾನು ಮಾತನಾಡಬೇಕಾಗಿದೆ."

ಅಕ್ಕನ ಧ್ವನಿಕೇಳಿಯೇ ಪದ್ಮನ ಸ್ಥೈರ್ಯ ಉಡುಗಿ ಹೋಗಿತ್ತು.

"ಬೆಟ್ಸಿ, ಶಕುಂತಲ ನಮ್ಮ ಸಹವಾಸಕ್ಕೆ ಯೋಗ್ಯರಲ್ಲವೆಂದು ನಿನಗೆ ಗೊತ್ತಿಲ್ಲವೇ ?"

"ಅವರೇನು ಮಾಡಿದರು ?"

"ಅವರು ಏನಾದರೂ ಮಾಡಿಕೊಳ್ಳಲಿ. ನಮಗೆ ಅವರ ಸಹವಾಸ ಯೋಗ್ಯವಲ್ಲ."

"ನನಗೆ ಯಾರೂ ಸ್ನೇಹಿತರು ಬೇಡವೇ ?"

"ಬೇಕು–ಆದರೆ ಕಾಲೇಜಿನಲ್ಲಿ ಹಾಸ್ಟಲ್ಲಿನಲ್ಲಿ ಬೆಟ್ಸಿ, ಶಕುಂತಲ ಬಿಟ್ಟು ಇನ್ನು ಯಾರೂ ಇಲ್ಲವೇನು ?"

"ಲೀಲಾವತಿ ರಾಜೀವಿ ಜತೆ ಮಾತನಾಡಿದರೂ ಹೀಗೆ ಅನ್ನುತ್ತೀ."

"ನೀನು ದುಷ್ಟಸಹವಾಸ ಮಾಡಿದರೆ ಅನ್ನಲೇಬೇಕಾಗುತ್ತದೆ."

"ನಿನ್ನ ಜತೆ ನಾನು ಹಾಸ್ಟಲ್ಲಿಗೆ ಬಂದದ್ದೇ ತಪ್ಪಾಯಿತು. ನಿನಗಂತೂ ಪ್ರಪಂಚವೇ ಬೇಕಾಗಿಲ್ಲ. ನನಗೂ ಹಾಗೇ ಆಗಬೇಕೆಂದು

ನಿನ್ನ ಬಯಕೆ."

" ಇಷ್ಟು ಮಾತನಾಡುವುದಕ್ಕೆ ನಿನಗೆ ಬರುತ್ತಿರಲಿಲ್ಲ ಪದ್ಮ."

" ನೀನೇ ಕಲಿಸಿಕೊಡುತ್ತಿರುವೆ."

" ನಿನ್ನ ಯೋಗಕ್ಷೇಮ ನನಗೆ ಸೇರಿದುದಲ್ಲವೇ ?"

" ಹೀಗೆ ಹಿಂಸೆ ಮಾಡುವುದು ನ್ಯಾಯವೇ ?"

" ಇದು ಹಿಂಸೆಯೇ! ಹೆಸರು ಕೆಡಿಸಿಕೊಂಡರೆ ನಿನ್ನ ಭವಿಷ್ಯವೇ ಹಾಳಾಗುವುದೆನ್ನುವುದನ್ನು ಬಲ್ಲೆಯಾ? ತಮ್ಮ ಘನತೆಯಿಂದ ಲೋಕಕ್ಕೇ ಮಾದರಿಯಾಗಿರುವ ಅಪ್ಪ ಅಮ್ಮನಿಗೆ ವಿಷಕುಡಿಯಲು ಕೊಡುವೆಯಾ? ನಿನ್ನ ಬಗ್ಗೆ ಅಪಶಬ್ದ ಕೇಳಿದ ಮರುಕ್ಷಣ ಅಮ್ಮ ಬದುಕುತ್ತಾಳೆಯೇ ? "

" ಹೆಸರು ಕೆಡಿಸಿಕೊಳ್ಳುವಂಥ ಕೆಲಸ ನಾನೇನು ಮಾಡಿದೆ? "

" ಏನು ಮಾಡಿದೆಯಾ ? "

ಎಂದು ಹಾಸಿಗೆಯ ಕೆಳಗಿದ್ದ ಫೋಟೋ ತೆಗೆದು ಪದ್ಮನ ಮುಂದೆ ಹಿಡಿದಳು. ಕ್ಷಣಕಾಲ ಅವಾಕ್ಕಾದ ಪದ್ಮ

"ಫೋಟೊ ತೆಗೆಸಿಕೊಳ್ಳುವುದು ತಪ್ಪೇ."

"ತಪ್ಪೋ ನೆಪ್ಪೋ ನನಗೆ ಗೊತ್ತಿಲ್ಲ – ನೀನು ಶಕುಂತಲ, ಬೆಟ್ಸಿಯ ಜತೆಹೋಗಿ ಫೋಟೊ ತೆಗೆಸಿಕೊಂಡೆಯೆಂದು ಅಪ್ಪನಿಗೆ ನಾಳೆ ಕಾಗದ ಬರೆದು ಫೋಟೋನೂ ಕಳಿಸಿಕೊಡುತ್ತೇನೆ. ಅವರಿಗೇ ನೀನು ಉತ್ತರಕೊಡು."

ಈ ಸಣ್ಣ ಪ್ರಕರಣ ಇಷ್ಟು ವಿಕೋಪಕ್ಕೆ ಹೋಗುವುದೆಂದು ಪದ್ಮ ಭಾವಿಸಿರಲಿಲ್ಲ. ಅಪ್ಪ ಅಮ್ಮನಿಗೆ ಕಾಗದ ಬರೆಯುವ ವಿಷಯ ಕೇಳಿದೊಡನೆಯೇ ಅವಳ ಜಂಘಾಬಲ ಉಡುಗಿ ಹೋಯಿತು.

"ಕಾಗದ ಬರೆಯಬೇಡಕ್ಕ – ನಾನು ಮಾಡಿದ್ದು ತಪ್ಪಾಯಿತು. ಇನ್ನು ಮೇಲೆ ಬೆಟ್ಸಿ, ಶಕುಂತಲ ಜತೆ ಮಾತನಾಡಿದರೆ ನಿನ್ನಾಣೆ."

"ಇವರ ಜತೆ ಯಾವಾಗ ಸ್ಟುಡಿಯೋಕ್ಕೆ ಹೋದೆ?"

"ಎಂಟು ಹತ್ತು ದಿವಸಗಳ ಕೆಳಗೆ. ಕಾಲೇಜಿನಲ್ಲಿ ಅವತ್ತು

ಸಿ. ಪಿ. ರಾಮಸ್ವಾಮಿ ಅಯ್ಯರ ಲೆಕ್ಚರಿತ್ತಲ್ಲ ಅವತ್ತು."

"ಅವರ ಜತೆ ಇನ್ನೂ ಎಲ್ಲಿಗಾದರೂ ಹೋಗಿದ್ದೆಯಾ ?"

"ನಿನ್ನಾಣೆಗೂ ಇಲ್ಲ ಅಕ್ಕ. ಬಹಳ ಬಲವಂತಮಾಡಿದರು – ಸ್ಟುಡಿಯೋಕ್ಕೆ ಹೋಗಿ ಬಂದೆ."

"ನಾನು ನಿನ್ನ ಶತ್ರುವೇನೇ ಪದ್ಮ – ನೀನು ಸಂತೋಷವಾಗಿದ್ದರೆ ನಾನು ಕರುಬುತ್ತೇನೆಯೇ ? – ನೀನು ಎಳೆಯ ಮಗುವಲ್ಲ. ಈ ವರ್ಷವೋ ಮುಂದಿನ ವರ್ಷವೋ ನಿನ್ನ ಮದುವೆಯಾಗುತ್ತದೆ. ನಿನ್ನ ಜವಾಬ್ದಾರಿ ನೀನು ತಿಳಿದುಕೊಳ್ಳಬೇಡವೆ ? – ನಮ್ಮ ಸಮಾಜ ಹೇಗಿದೆ ಕಾಣೆಯಾ. ಸ್ವಲ್ಪ ಅಪಖ್ಯಾತಿ ಬಂದರೂ ಸಾಕು, ಹೆಂಗಸಿನ ಬಾಳೇ ಮಣ್ಣುಗೂಡಿಬಿಡುತ್ತದೆ. ಅಮ್ಮ, ಅಣ್ಣ ನಮಗೆ ಯಾವದಕ್ಕೆ ಕಡಿಮೆ ಮಾಡಿದ್ದಾರೆ ಪದ್ಮ. ಫೋಟೋ ತೆಗೆಸಿಕೊಳ್ಳುವ ಆಸೆಯಿದೆಯೆಂದು ಅಣ್ಣನಿಗೆ ಒಂದು ಮಾತು ಹೇಳಿದರೆ ಅವರೇ ನಿನ್ನ ಸ್ಟುಡಿಯೋಕ್ಕೆ ಕರೆದುಕೊಂಡು ಹೋಗಿ ಒಂದು ನೂರು ಫೋಟೋ ಬೇಕಾದರೂ ತೆಗೆಸುವುದಿಲ್ಲವೇ ? – ನಾವು ಹುಟ್ಟಿರುವ ಮನೆ ದೇವತಾಗೃಹ. ನಮ್ಮ ತಂದೆ ತಾಯಿ ಆಗಿರುವವರು ಮನುಷ್ಯರಲ್ಲ, ದೇವತೆಗಳು ಪದ್ಮ. ಅವರಿಗೆ ನಾವು ಏನೂ ಸೇವೆ ಮಾಡಲು ಸಾಧ್ಯವಿಲ್ಲ. ಅವರ ಋಣ ಏಳೇಳು ಜನ್ಮಕ್ಕೂ ತೀರಿಸಲು ಸಾಧ್ಯವಿಲ್ಲ. ನಮ್ಮ ನಡತೆಯನ್ನು ಶುದ್ಧವಾಗಿಟ್ಟುಕೊಂಡು, ಅವರು ನಡೆದಿರುವ ದಾರಿಯಲ್ಲಿ ನಡೆಯುವುದಷ್ಟೇ ಅಲ್ಲವೇ ನಮ್ಮ ಕರ್ತವ್ಯ ? ಪದ್ಮ, ನಾನು ನಿನಗಿಂತ ದೊಡ್ಡವಳು. ವಯಸ್ಸಿನ ಹಿರಿಮೆಯಿಂದ ನಿನ್ನ ಮೇಲೆ ದರ್ಪಮಾಡಬೇಕೆಂದು ನಾನು ಬಯಸುವುದಿಲ್ಲ. ಊರಿನಲ್ಲಿ ನೀನಿದ್ದಿದ್ದರೆ ನಾನು ನಿನ್ನ ತಂಟೆಗೇ ಬರುತ್ತಿರಲಿಲ್ಲ. ಆದರೆ ಇಲ್ಲಿ ನಿನ್ನ ಹಿತಾಹಿತಗಳನ್ನು ಲಕ್ಷಿಸುವುದು ನನ್ನ ಕರ್ತವ್ಯವಾಗಿದೆ – ನನ್ನ ಬಾಳಂತೂ ಮಣ್ಣುಗೂಡಿಹೋಯಿತು – ನಿನ್ನ ಬಾಳಾದರೂ ಚೆನ್ನಾಗಲಿ...."

ಎಂದನ್ನುತ್ತಿರುವಂತೆ ಕಮಲಮ್ಮ ಬಿಕ್ಕಿಬಿಕ್ಕಿ ಅಳಲು ಮೊದಲು ಮಾಡಿದಳು. ಪದ್ಮ ಅಕ್ಕನನ್ನಪ್ಪಿಕೊಂಡು

" ನಿನ್ನ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ, ಕ್ಷಮಿಸು ಅಕ್ಕ. ಬುದ್ಧಿಯಿಲ್ಲದೆ ಒರಟು ಮಾತಾಡಿದೆ.– ಇನ್ನು ಎಂದೆಂದಿಗೂ ನಿನ್ನ ಮನಸ್ಸು ನೋಯಿಸುವುದಿಲ್ಲ– ದುಷ್ಟಸಹವಾಸ ಮಾಡುವುದಿಲ್ಲ "

ಎಂದು ಮೊರೆಯಿಟ್ಟಳು. ಅಕ್ಕನ ಪ್ರೇಮಬಾಹುಗಳು ತಂಗಿಯನ್ನು ಬಳಸಿದವು.

## ೧೦

"ತಾಯಿನಾಡು" ಪತ್ರಿಕೆ ಓದುತ್ತ ಕುಳಿತಿದ್ದ ನಾರಾಯಣ ಸ್ವಾಮಿಯ ಮುಖ ಕೋಪದಿಂದ ಕೆಂಪೇರಿತು. ಉದ್ವೇಗದಿಂದ ಹಾಸ್ಟಲ್ಲಿನ ಫೀಸ್ಟ್ (Feast) ಕೂಡ ಕರಗಿ ನೀರಾಯಿತು. ಚಿನ್ನ ಸ್ವಾಮಿಗೆ ಪತ್ರಿಕೆ ತೋರಿಸಿ

"ನೋಡಿದೆಯೇನಪ್ಪಾ" ಎಂದು ಕೇಳಿದ.

"ನೋಡಿದೆ."

"'ಊರ ದನ ಕಾಯ್ದು ದೊಡ್ಡ ಬೋರೇಗೌಡ ಎನಿಸಿಕೊಂಡ' ಎಂದು ಕನ್ನಡದಲ್ಲಿ ಒಂದು ಹಳೆಯ ಗಾದೆ ಇದೆ ಚಿನ್ನಸ್ವಾಮಿ. ಅಣ್ಣ ಮಾಡುವ ಕೆಲಸವೆಲ್ಲಾ ಇಂಥಾವ್ದೇ!"

"ವಿದ್ಯಾರ್ಥಿನಿಲಯಕ್ಕೆ ಅವರು ಹಣ ಕೊಡಬಾರದಾಗಿತ್ತೇ?"

"ಐವತ್ತೋ ನೂರೋ ಕೈಗೆ ಹಾಕುವುದು ಬಿಟ್ಟು ಮೂರು ಸಾವಿರ ಸುರಿಯುವುದೆಂದರೆ ಏನರ್ಥ?"

"ನಿಮ್ಮ ತಂದೆ ಪೂರ್ವಾಪರ ಜ್ಞಾನವುಳ್ಳವರು."

"ಅಣ್ಣನದು ಬಹಳ ಮೃದು ಸ್ವಭಾವ. ಮೊಸಳೆ ಕಣ್ಣೀರು ಹಾಕಿದರೂ ಅದಕ್ಕೂ 'ಅಯ್ಯೋ' ಎನ್ನುತ್ತಾರೆ."

"ಶಾಮರಾಯರು ನಿಸ್ವಾರ್ಥ ಸೇವೆ ಮಾಡುತ್ತಿದ್ದಾರೆ ನಾರಾಯಣಸ್ವಾಮಿ."

" ನಿಸ್ವಾರ್ಥ ಸೇವೆ ಮಾಡುವವರು ಹೆಚ್ಚಿಕೊಂಡೇ ಈ ದೇಶದ ಬಡತನ ನೂರ್ಮಡಿಯಾಯಿತು. ನಾವು ಕೇಳಿದರೆ ಹತ್ತು ಇಪ್ಪತ್ತಕ್ಕೆಲ್ಲಾ ಅಣ್ಣ ಜುಗ್ಗಾಡುತ್ತಾರೆ. ಭಿಕ್ಷಕ್ಕೆ ಬಂದವರ ಜೋಳಿಗೆ ತುಂಬಿ ಕಳಿಸುತ್ತಾರೆ."

" ನಿನಗೇನು ಅವರು ಕಡಿಮೆ ಮಾಡಿಲ್ಲವಲ್ಲ! ನೀನು ಕೇಳಿದಷ್ಟು ಹಣ ಕಳುಹಿಸುತ್ತಿದ್ದಾರೆ."

" ನನ್ನ ಕಷ್ಟ ನೀನೇನು ಬಲ್ಲೆ ಚಿನ್ನಸ್ವಾಮಿ ನೂರು ಬೇಕಾದರೆ ಇನ್ನೂರಕ್ಕೆ ಬರೆಯುತ್ತೇನೆ – ಅಣ್ಣ ಐವತ್ತು ಕಳಿಸುತ್ತಾರೆ."

" ಬೊಂಬಾಯಿಗೆ ಹೋಗುವುದನ್ನು ನಿರ್ಧರಿಸಿರುವೆಯಾ ? "

" ನಾನೇನೋ ನಿರ್ಧರಿಸಿದ್ದೇನೆ – ಅಣ್ಣ ಏನು ಹೇಳುವರೋ ?"

" ನಿನ್ನ ಅಭ್ಯುದಯಕ್ಕೆ ಅವರೆಂದಿಗೂ ಅಡ್ಡಿಯಾಗುವುದಿಲ್ಲ. ಆದರೆ ಬೊಂಬಾಯಿಗೆ ಹೋಗುವುದರಿಂದ ನಿನಗೆ ಪ್ರಯೋಜನವಾಗುತ್ತದೆಯೋ – ಖರ್ಚೋ ವಿಪರೀತವಾಗುತ್ತದೆ."

" ಬೊಂಬಾಯಿ ದೊಡ್ಡ ಸ್ಥಳ. ಅಲ್ಲಿ ಅವಕಾಶಗಳು ಹೆಚ್ಚು. ಬಿ. ಎ. ಪಾಸುಮಾಡಿಕೊಂಡು ಸ್ಕೂಲ್ ಮೇಷ್ಟ್ರಾಗುವುದಕ್ಕೋ, ಬಿ. ಎಲ್. ಮಾಡಿಕೊಂಡು ಲಾಯರಾಗುವುದಕ್ಕೋ ನನಗೆ ಸ್ವಲ್ಪವೂ ಇಷ್ಟವಿಲ್ಲ. ಅಣ್ಣ ನಿನ್ನ ಒಂದು ಮಾತು ಕೇಳಿದರೆ ಸ್ವಲ್ಪ ಶಿಫಾರಸು ಮಾಡಿಬಿಡಪ್ಪಾ."

" ನಿನಗೆ ಏನು ಹೇಳುವುದೂ ಕಷ್ಟ. ಕೂಡಲೇ ತಪ್ಪು ತಿಳಿದು ಕೊಂಡು ಕೋಪ ಮಾಡಿಕೊಂಡು ಬಿಡುತ್ತೀ ! "

" ನಿನ್ನ ಮೇಲೆ ಯಾವದಕ್ಕೆ ಕೋಪಮಾಡಿಕೊಂಡಿದ್ದೀನಯ್ಯಾ?"

" ನನ್ನ ವಿಷಯ ಹಾಗಿರಲಿ – ನಿನ್ನ ತೀರ್ಥರೂಪರ ಜವಾಬ್ದಾರಿ ಹೆಚ್ಚಿದೆ – ಹೆಣ್ಣು ಮಕ್ಕಳನ್ನೂ ಕಾಲೇಜಿನಲ್ಲಿ ಓದಿಸುತ್ತಿದ್ದಾರೆ – ನಿನ್ನ ತಾಯಿಯೂ ಜೀವ ತೇಮುತೇದು ಕೃಶವಾಗುತ್ತಿದ್ದಾರೆ. ನೀನು ತಂದೆಯ ಜತೆಯಲ್ಲಿದ್ದುಕೊಂಡು ಅವರಿಗೆ ನೆರವಾಗುವುದು ನನಗೆ ಸೂಕ್ತವಾಗಿ ಕಾಣುತ್ತದಪ್ಪಾ. "

"ನನ್ನೂ ಮುಫ್ಯೂಸಲ್ ಲಾಯರಾಗು (Moffusil Lawyer) ಎಂತಾ ಹೇಳುತ್ತಿದ್ದೀ."

"ನಾನು ಯಾವ ಸಲಹೆಯನ್ನೂ ಕೊಡುತ್ತಿಲ್ಲ ನಾಣಿ. ಇರುವ ವಿಷಯ ಬಿಡಿಸಿ ನಿನ್ನ ಮುಂದಿಟ್ಟಿದ್ದೇನೆ. ನಿನಗೆ ಸೂಕ್ತ ಕಂಡಂತೆ ಮಾಡಬಹುದು."

"ಯಾವ ಪಟ್ಟಿಗೂ ಸಿಕ್ಕದಂತೆ ಮಾತನಾಡುತ್ತಿರುವೆಯಲ್ಲ ಚಿನ್ನಸ್ವಾಮಿ.... ನಾನು ಬೊಂಬಾಯಿಗೆ ಹೋಗುವುದಕ್ಕೆ ಶಿಫಾರಸು ಮಾಡುವೆ ತಾನೆ?"

"ಆ ವಿಷಯ ನಿರ್ಧರಿಸಿಬಿಟ್ಟಿದ್ದೀ."

"ಸ್ಕೂಲ್ ಆಫ್ ಸೋಷಿಯಾಲಜೀಗೆ ಈಗಲೇ ಅಪ್ಲಿಕೇಷನ್ನು ಹಾಕಿದ್ದೇನೆ."

"ರಿಸಲ್ಟು ಬರಬೇಡವೇನಯ್ಯ?"

"ಬರತ್ತೆ – ಪಾಸಾಗುವುದರಲ್ಲಿ ಸಂದೇಹವಿಲ್ಲ."

"ಕಮಲಮ್ಮನವರನ್ನು ನೋಡಿಕೊಂಡು ಬರುವುದಿಲ್ಲವೇ?"

"ನೋಡುವುದೇನಿದೆ. ಅವಳಿಗೂ ಪರೀಕ್ಷೆ ಗಲಾಟೆ."

"ಅಕ್ಕ ತಮ್ಮ ಒಂದೇ ಊರಿನಲ್ಲಿದ್ದುಕೊಂಡೂ ನೋಡದಿದ್ದರೆ ನಿಮ್ಮ ತಂದೆ ಬೇಸರಪಟ್ಟುಕೊಳ್ಳುವರು."

"ಹೆಂಗಸರ ಬಾಲ ಕಟ್ಟಿಕೊಂಡು ನಾನು ಓಡಿಯಾಡುವುದಕ್ಕಾಗುತ್ತದೇನಯ್ಯ?"

"ಇದೇನು ಮಾತು ನಾರಾಯಣಸ್ವಾಮಿ. ನಿನ್ನ ಅಕ್ಕ – ತಂಗಿ ಯೋಗಕ್ಷೇಮ ವಿಚಾರಿಸಿಕೊಳ್ಳುವುದೂ ಅಗೌರವವಾದುದೇ?"

"ನಿನಗೆ ನಿಜ ಹೇಳಬೇಕೆಂದರೆ ಕಮಲನ್ನ ಕಾಲೇಜ್ ಸೇರಿಸಿದ್ದೇ ನನಗೆ ಇಷ್ಟವಿಲ್ಲ."

"ಏಕೆ?"

"ಕೈಲಾಸಂ ನಾಟಕಗಳನ್ನು ಓದಿರುವೆಯಷ್ಟೆ?"

"ಓದಿದ್ದೇನೆ."

"ಕಾಲೇಜ್ ಸೇರಿದ ಹೆಂಗಸರು ಸಾತುಗಳಾಗುತ್ತಾರೆಂದು ಅವರು ಹೇಳಲಿಲ್ಲವೇ ? "

" ಕಾಲೇಜ್ ಸೇರಿದವರೆಲ್ಲಾ ಸಾತುಗಳಾಗುತ್ತಾರೇನು ? "

" ಅಲ್ಲಿಯ ವಾತಾವರಣವೇ ಹಾಗಿರುವಾಗ ಅವರೇನು ಮಾಡು ತ್ತಾರೆ. ಲೋಕ ಕಂಡ ಕೈಲಾಸಂ ಸುಳ್ಳು ಹೇಳಲಿಲ್ಲವಲ್ಲಾ ? "

" ಸುಳ್ಳು ಹೇಳಿಲ್ಲ – ಆದರೆ ಅವರು ಪ್ರಕೃತ ಪರಿಸ್ಥಿತಿಯ ಒಂದೇ ಮುಖವನ್ನು ಕಂಡಿರುವುದು. ಕಾಲೇಜಿನಲ್ಲಿ ಓದಿದ ಎಷ್ಟೋ ವಿದ್ಯಾರ್ಥಿನಿಯರು ಉತ್ತಮ ಗೃಹಿಣಿಯರಾಗಿ ಬಾಳ್ವೆ ಮಾಡುತ್ತಿಲ್ಲವೇ ? ಕೈಲಾಸಂ ಹಳೆಯ ಸಂಪ್ರದಾಯದಲ್ಲಿ ಬೆಳೆದವರು. ಅವರಿಗೆ ಹಳೆಯದೆಲ್ಲಾ ಹೊನ್ನು – ಹೊಸದೆಲ್ಲಾ ವಿಷ. ಹಳೆಯ ಕಾಲದ ಹೊನ್ನು ಹೊಸಕಾಲಕ್ಕೆ ಸರಿಹೋಗುವುದೇ ? ಕಮಲಮ್ಮನಂಥ ಹೆಣ್ಣು ಮಕ್ಕಳ ಪರಿಸ್ಥಿತಿಯನ್ನು ಕೈಲಾಸಂ ಯೋಚಿಸಲಿಲ್ಲ. ಹೆಣ್ಣುಮಕ್ಕಳು ವಿದ್ಯಾವತಿಯರಾದರೆ ಕೆಟ್ಟು ಹೋಗುತ್ತಾರೆಂದು ವಾದಮಾಡುವುದೇ ಸರಿಯಲ್ಲ. ವಿದ್ಯಾವತಿಯರಾಗದ ಹೆಣ್ಣುಮಕ್ಕಳೆಲ್ಲಾ ಶೀಲವತಿ ಯರಾಗಿರುವರೇ ? ಶೀಲ ಆತ್ಮ ಸಂಸ್ಕಾರಕ್ಕೆ ಸಂಬಂಧಪಟ್ಟದು. ವಿದ್ಯೆಯ 'ಗುರಿಯೂ' ಆತ್ಮ ಸಂಸ್ಕಾರ ಮಾಡುವುದೇ ಅಲ್ಲವೇ ? ನಿಮ್ಮ ತಾಯಿಯವರ ಪ್ರಭಾವದಲ್ಲಿ ಬೆಳೆದಿರುವ ಕಮಲಮ್ಮ ಆದರ್ಶ ವಿದ್ಯಾವತಿಯಾಗುವುದರಲ್ಲಿ ನನಗೇನೂ ಸಂದೇಹವಿಲ್ಲ."

" ನಮ್ಮ ಮನೆ ವಿಷಯದಲ್ಲಿ ನನಗಿರುವ ಮಮತೆಗಿಂತ ನಿನಗೇ ಹೆಚ್ಚಾಗಿದೆ ಚಿನ್ನಸ್ವಾಮಿ."

" ನಿಮ್ಮ ಮನೆಯ ಪರಿಚಯವುಳ್ಳವರಲ್ಲೆಲ್ಲಾ ಆ ಮಮತೆ ತಾನೇ ತಾನಾಗಿ ಬೆಳೆಯುತ್ತದೆ. ರುಕ್ಮಿಣಿಯಮ್ಮನವರು, ಮಾಧವರಾಯರ ಮಗನಾಗಿ ಹುಟ್ಟಿರುವುದೇ ದೊಡ್ಡ ಪುಣ್ಯವೆಂದು ನೀನು ಭಾವಿಸಬೇಕು. ಇತರರು ದೇವರನ್ನು ಹುಡುಕಿಕೊಂಡು ಊರೂರು ಅಲೆಯಬೇಕಾಗು ತ್ತದೆ. ದೇವರು ನಿಮ್ಮ ಮನೆಯಲ್ಲಿಯೇ ನೆಲಸಿದ್ದಾನೆ – ನೀನು ತಂದೆತಾಯಿಗಳಿಗೆ ಮನೋವ್ಯಥೆಯಾಗದಂತೆ ನಡೆದುಕೊಂಡರೆ ಅದೇ

ಆರಾಧನೆ – ಅದೇ ದೇವರ ಸೇವೆ."

"ಅವರಿಗೆ ನಾನೇನು ಮನೋವ್ಯಥೆಯನ್ನು ಉಂಟುಮಾಡುತ್ತಿದ್ದೇನೆ ?"

"ನಿನ್ನ ಮನೆ ವ್ಯವಹಾರಕ್ಕೆ ಕೈಹಾಕುವ ಅಧಿಕಾರ ನನಗಿಲ್ಲ ನಾರಾಯಣಸ್ವಾಮಿ. ಆದರೆ ನಿನ್ನ – ನಿನ್ನ ಅಕ್ಕ ತಂಗಿಯರನ್ನು ಮೈಸೂರಿನಲ್ಲಿ ಹಾಸ್ಟಲಿನಲ್ಲಿಟ್ಟು ಓದಿಸುವುದು ನಿಮ್ಮ ತಂದೆಗೆ ಒಂದು ಹೊರೆಯೇ ಆಗಿದೆ."

"ನನ್ನ ಹೊರೆ ಬೇಗ ಇಳಿಸಿಕೊಂಡು ಬಿಡುತ್ತೇನೆ ಚಿನ್ನಸ್ವಾಮಿ. ಬೊಂಬಾಯಿಯಲ್ಲಿ ಒಂದು ವರ್ಷವಿದ್ದರೆ ಸಾಕು – ಕೆಲಸ ಕಾರ್ಯ ಸಿಕ್ಕುತ್ತದೆ. ತಂದೆಯವರಿಂದ ಚಿಕ್ಕಾಸೂ ತೆಗೆದುಕೊಳ್ಳುವುದಿಲ್ಲ."

"ಕೋಪಿಸಿಕೊಳ್ಳಬೇಡ – ನಿನ್ನ ತಂದೆಯ ಹಣ ನೀನು ತೆಗೆದುಕೊಳ್ಳುವುದಕ್ಕೆ ನಾನು ಅಡ್ಡಿ ಪಡಿಸುತ್ತಿಲ್ಲ. ಆದರೆ ಆ ಹಣದ ಒಂದೊಂದು ಕಾಸೂ ರಕ್ತ ಬಸಿದು ನ್ಯಾಯವಾದ ಮಾರ್ಗದಲ್ಲಿ ಸಂಪಾದಿಸಿದ್ದು. ನ್ಯಾಯಮಾರ್ಗದಲ್ಲಿ ದೊರೆತ ಹಣ ನ್ಯಾಯ ಮಾರ್ಗದಲ್ಲಿ ವಿನಿಯೋಗವಾದರೆ ಅವರಿಗೆ ತೃಪ್ತಿ."

"ನಾನು ದುಂದು ವೆಚ್ಚ ಮಾಡುತ್ತೇನೆಂದು ನೀನು ಸೂಚಿಸುತ್ತಿರುವೆ."

"ಸ್ವಲ್ಪ ಹಣ ಅನವಶ್ಯಕ ಖರ್ಚುಗಳಿಗೆ ಹಾಕುತ್ತಿರುವೆ ಎಂದು ಹೇಳದಿರಲಾರೆ."

ನಾರಾಯಣಸ್ವಾಮಿಗೆ ಕೋಪ ನೆತ್ತಿಗೇರಿತು. ಚಿನ್ನಸ್ವಾಮಿಯ ಆರೋಪಗಳನ್ನು ಖಂಡಿಸಿ ಅವನಿಗೆ ಚೆನ್ನಾಗಿ ಛೀಮಾರಿ ಮಾಡಬೇಕೆಂದು ಮನಸ್ಸು ತವಕಪಟ್ಟಿತು. ಆದರೆ ಚಿನ್ನಸ್ವಾಮಿಯ ಆರೋಪಗಳನ್ನು ಸುಲಭವಾಗಿ ಖಂಡಿಸುವಂತಿರಲಿಲ್ಲ. ಸತ್ಯದ ಪ್ರಖರ ಕಾಂತಿ ನಾರಾಯಣಸ್ವಾಮಿಯನ್ನು ಅರೆಮೂಕನನ್ನಾಗಿ ಮಾಡಿತು.

ನಾರಾಯಣಸ್ವಾಮಿ ಸೋಲನ್ನೊಪ್ಪಿಕೊಂಡ. ಆದರೆ ಅವನ ಮನಸ್ಸಿನ ಕಿನಿಸು ಮಾಯವಾಗಲಿಲ್ಲ. ಚಿನ್ನಸ್ವಾಮಿಯಂಥ ದರಿದ್ರ

ನಿಂದ ತನಗೆ ಅವಮಾನವಾಯಿತಲ್ಲಾ ಎಂದು ತಳಮಳಿಸಿದ. ಚಿನ್ನಸ್ವಾಮಿ ಗೆಳೆಯನ ಮನ ಮೆಚ್ಚಿಸುವ ಪ್ರಯತ್ನ ಮಾಡಲಿಲ್ಲ. ಪರೀಕ್ಷೆಯೂ ಸಮೀಪಸುತ್ತಿದ್ದುದರಿಂದ ನಿರರ್ಥಕವಾಗಿ ಕಾಲಕಳೆಯಲು ಅವನಿಗೆ ಅವಕಾಶವೂ ಇರಲಿಲ್ಲ. ಆದರೆ ಅವರಿಬ್ಬರ ಮನಸ್ಸಿನ ಮಧ್ಯೆ ಹಗುರವಾದ ತೆರೆಯೊಂದು ಬಿದ್ದಿತ್ತು.

೧೧

ಕಮಲ, ಪದ್ಮ ಪರೀಕ್ಷೆ ಮುಗಿದೊಡನೆಯೇ ಊರಿಗೆ ಬಂದರು. ಗೋಪಾಲಿ, ಸೌಭಾಗ್ಯ ತಾಯಿಯ ತೋಳತೆಕ್ಕೆಗೆ ಹಾರಿದರು. ಕಮಲ ತನ್ನ ಮಕ್ಕಳನ್ನಪ್ಪಿ ಮುದ್ದಿಸುತ್ತಿದ್ದುದನ್ನು ಕಂಡು ರುಕ್ಮಿಣಿ, ಗೋದಮ್ಮ ಕಣ್ಣೀರು ಹಾಕಿದರು.

ಕಮಲ ತಾಯಿಯ ಕಡೆ ತಿರುಗಿ

"ಮಕ್ಕಳು ತುಂಬ ತೊಂದರೆ ಕೊಡುತ್ತಿದ್ದವೇ" ಎಂದು ಕೇಳಿದಳು.

ಗದ್ಗದ ಕಂಠಳಾಗಿದ್ದ ರುಕ್ಮಿಣಿ ಉತ್ತರ ಕೊಡಲಾಗಲಿಲ್ಲ. ಗೋದಮ್ಮನವರು

"ಅವು ದೇವರ ಮಕ್ಕಳು ಕಮಲಾ, ಎತ್ತಿದವರ ಕೈ ಕೂಸಿನ ಹಾಗೆ ಆಡಿಕೊಂಡಿದ್ದವು. – ನಿನ್ನ ಮಗ ಅಸಾಧ್ಯನಮ್ಮ. ಬೆರಳು ತೋರಿಸಿದರೆ ಹಸ್ತ ನುಂಗುತ್ತಾನೆ."

"ಏನು ಮಾಡಿದ ಅಜ್ಜೀ ?"

"ಅವನನ್ನೇ ಕೂರಿಸಿಕೊಂಡು ನಿಧಾನವಾಗಿ ಕೇಳು. ನನಗೆ ಬರುವ ಕಥೆಗಳನ್ನೆಲ್ಲಾ ಕಲಿತುಕೊಂಡುಬಿಟ್ಟಿದ್ದಾನೆ. ಹೊಸ ಕಥೆ ಹೇಳು ಎಂದು ಪೀಡಿಸುತ್ತಾನೆ – ನನ್ನ ಬಂಡವಾಳ ಮುಗಿದುಹೋಗಿದೆ, ನಾನವನಿಗೆ ಏನು ಹೇಳಲೇ ತಾಯಿ."

" ಇಲ್ಲಾಮ್ಮ – ಅಜ್ಜೀಗೆ ಇನ್ನೂ ತುಂಬ ಕಥೆ ಬರತ್ತೆ – ನಂಗೆ ಹೇಳೊಂದ್ರೆ ಅವಳು ಹೇಳೋದೇ ಇಲ್ಲ. "

ಎಂದು ಗೋಪಾಲಿ ತನ್ನ ಬಾಲಭಾಷೆಯಲ್ಲಿ ನುಡಿದ. ಗೋದಮ್ಮ ನವರು ಮೊಮ್ಮಗನ ಮಾತನ್ನು ಮೃದುವಾಗಿ ಪ್ರತಿಭಟಿಸುತ್ತಾ

" ಇಲ್ಲ – ನನ್ರಾಜಾ – ನಿನ್ನಜ್ಜಿ ಓದು ಬರಾವು ಬರದ ಮುಕ್ಕ. ಅದಕ್ಕೆ ಬರೋ ವಿದ್ಯೆಯೆಲ್ಲ ಮುಗಿದು ಹೋಯಿತಪ್ಪಾ. ಅಮ್ಮ, ಕಾಲೇಜಿನಲ್ಲಿ ಓದಿಕೊಂಡು ಬಂದಿದ್ದಾಳೆ. ಅವಳನ್ನು ಕೇಳು, ಹೊಸ ಹೊಸ ಕಥೆಗಳನ್ನು ಹೇಳುತ್ತಾಳೆ. "

" ಅಯ್ಯೋ – ನನ್ನ ಕಥೆಯೇ ದೊಡ್ಡ ಕಥೆಯಾಗಿರುವಾಗ ನಾನೇನು ಹೇಳಲಿ ಅಜ್ಜಿ "

ಎಂದು ಕಮಲ ಉದ್ಗಾರ ತೆಗೆದಳು.

ಅಕ್ಕ, ತಂಗಿ ಊರು ಸೇರಿದ ನಾಲ್ಕು ದಿನಗಳ ಮೇಲೆ ನಾರಾಯಣಸ್ವಾಮಿ ಬಂದ. ಊರಿಗೆ ಬಂದ ಮಾರನೆಯ ದಿವಸವೇ ತಾನು ಮುಂಬಯಿಗೆ ಹೋಗಬೇಕೆಂದಿರುವ ವಿಷಯ ತಾಯಿಯಲ್ಲಿ ಪ್ರಸ್ತಾಪಿಸಿ, ತಂದೆಯನ್ನೊಪ್ಪಿಸಬೇಕೆಂದು ಸೂಚಿಸಿದ.

ಮಗನ ಮನಸ್ಸು ಮನೆಯಲ್ಲಿಯೂ ಇರಲಿಲ್ಲ, ಮಂಡ್ಯದಲ್ಲಿಯೂ ಇರಲಿಲ್ಲ, ಮುಂಬಯಿನಲ್ಲಿ ಇತ್ತೆಂದು ರುಕ್ಮಿಣಮ್ಮ ಚೆನ್ನಾಗಿ ಅರ್ಥ ಮಾಡಿಕೊಂಡಳು. ಮಗನ ಅನಾಸಕ್ತಿ ಅವಳ ಮನಸ್ಸಿಗೆ ಅತುಲ ವೇದನೆಯನ್ನುಂಟುಮಾಡಿದರೂ ಅದನ್ನು ಹೊರಗೆ ತೋರಿಸಿಕೊಳ್ಳಲಿಲ್ಲ.

ಮಕ್ಕಳೆಲ್ಲಾ ಮನೆಗೆ ಬಂದುದು ಮಾಧವರಾಯನಿಗೂ ತುಂಬ ಸಂತೋಷವನ್ನುಂಟುಮಾಡಿತ್ತು.

" ಶ್ರೀದೇವಿ, ರಾಮೂನೂ ಬಂದರೆ ಎಷ್ಟು ಚೆನ್ನಾಗಿರುತ್ತದೆ. ರಜಾ ಸಿಕ್ಕುವ ಹಾಗಿದ್ದರೆ ನಾಲ್ಕು ದಿವಸಕ್ಕಾದರೂ ಬಂದು ಹೋಗೆಂದು ರಾಮೂಗೆ ಕಾಗದ ಬರಿ "

ಎಂದು ಮಾಧವರಾಯ ರುಕ್ಮಿಣಿಗೆ ಹೇಳಿದ.

ನಾರಾಯಣಸ್ವಾಮಿ ಕ್ಲಬ್ಬಿನಲ್ಲಿ ಹೊತ್ತುಗಳೆಯುತ್ತಿದ್ದ. ಪದ್ಮ

ನೆರೆಹೊರೆಯ ಗೆಳತಿಯರ ಮನೆಗೆ ಹೋಗಿ ಪಗಡೆ, ಚೌಕಾಭಾರ ಆಡುವುದಕ್ಕೆ ಕೂಡುತ್ತಿದ್ದಳು.

ಪಕ್ಕದ ಮನೆ ಪಂಕಜಮ್ಮನವರ ಮಗಳು ನಳಿನೀಗೂ ಪದ್ಮನಿಗೂ 'ಗಳಸ್ಯ ಕಂಠಸ್ಯ' ವಾಗಿತ್ತು. ಸಮವಯಸ್ಸು, ಸಮಾನವಾದ ಆಸೆ ಆಕಾಂಕ್ಷೆ ಅಭಿರುಚಿ ಅವರ ಸ್ನೇಹದ ಕಟ್ಟಿಗೆ ನೀರೆರೆದಿದ್ದವು. ನಳಿನಿ ಪದ್ಮನನ್ನು ನೋಡಿ ಅಭಿಮಾನದಿಂದ ಪಂಕಜಮ್ಮನವರು 'ಅವಳಿ ಜವಳಿ ಮಕ್ಕಳಿದ್ದ ಹಾಗಿದ್ದಾರೆ' ಎಂದುಕೊಳ್ಳುವರು.

ಎರಡು ವರ್ಷಗಳ ಕೆಳಗೆ ಪಂಕಜಮ್ಮ ನಳಿನಿಮೇಲಣ ಆಸೆಯನ್ನೇ ಬಿಟ್ಟುಬಿಟ್ಟಿದ್ದರು. ಸುಖವಾಗಿ ಆಡಿಕೊಂಡಿದ್ದ ಹುಡುಗಿ ಇದ್ದಕ್ಕಿದ್ದಂತೆ ಕಾಹಿಲೆ ಮಲಗಿತು. ನಿತ್ಯ ಸಣ್ಣ ಜ್ವರ ಕಾಣಿಸಿಕೊಳ್ಳುತ್ತಿತ್ತು. ಮುಖ ಬಿಳಿಚಿಕೊಂಡು ಮೈ ಕೈ ಒಣಗಲಾರಂಭಿಸಿತು. ಒಂದೇ ವಾರದಲ್ಲಿ ನಳಿನಿಯ ಗುರುತು ಸಿಕ್ಕುವುದೇ ದುಸ್ಸಾಧ್ಯವಾಯಿತು. ಎಲ್ಲಕ್ಕೂ ಮಿಗಿಲಾಗಿ ನಳಿನಿಯ ತುಂಬು ತಲೆಗೂದಲು ನರೆಯಲಾರಂಭಿಸಿ, ತೆಕ್ಕೆ ತೆಕ್ಕೆ ಕಿತ್ತು ಬರುತ್ತಿತ್ತು. ಪಂಕಜಮ್ಮನವರ ಗಂಡ ರಮಣಯ್ಯ ಡಾಕ್ಟರುಗಳ ಹಿಂಡು ಬಳಗವನ್ನೇ ಕರೆತಂದು ಚಿಕಿತ್ಸೆ ಮಾಡಿಸಿದರು. ಕ್ಯಾಲ್ಸಿಯಂ, ವಿಟಾಮಿನ್ ಬಿ ಇಂಜಕ್ಷನ್ನುಗಳ ಘಾತದಿಂದ ಮಗು ಮತ್ತಷ್ಟು ಬಳಲಿತು. ಮದ್ದು ಮಾಟವಾಗಿರಬಹುದೆಂದು ಊರಿನ ಮಾರಿ, ಕಾಳಿ, ದುರ್ಗಿಯರಿಗೆಲ್ಲಾ ಪಂಕಜಮ್ಮ ಹರಕೆ ಹೊತ್ತರು. ನಳಿನಿಯ ಪರಿಸ್ಥಿತಿ ಮತ್ತಷ್ಟು ಕೆಡುತ್ತಾ ಬಂದಿತೇ ವಿನಾ ಸುಧಾರಿಸಲಿಲ್ಲ.

ಕೊನೆಗೆ ನಿರುಪಾಯರಾಗಿ ಪಂಕಜಮ್ಮ ರುಕ್ಮಿಣಮ್ಮನ ಮರೆ ಹೊಕ್ಕರು. ರುಕ್ಮಿಣಿ ಧೈರ್ಯವಾಗಿ ಚಿಕಿತ್ಸೆ ಕೈಗೊಂಡಳು. ನಲವತ್ತು ದಿವಸಗಳ ಅನುಪಾನದಲ್ಲಿ ಜ್ವರ ನಿಂತಿತು. ಕೂದಲು ಹಿರಿಯುವುದೂ ಕಡಿಮೆಯಾಗುತ್ತ ಬಂತು. ಆರು ತಿಂಗಳ ಸತತ ಚಿಕಿತ್ಸೆಯಿಂದ ನಳಿನಿ ಪೂರ್ಣ ಗುಣಹೊಂದಿದ್ದಲ್ಲದೆ ಪುಟವಿಟ್ಟ ಚಿನ್ನದಂತಾದಳು. ಪಂಕಜಮ್ಮನವರು ನಳಿನಿಯನ್ನು ರುಕ್ಮಿಣಿಯ ಕಾಲುಗಳ ಮೇಲೆ ಹಾಕಿ

"ರುಕ್ಮಿಣಮ್ಮ, ನನ್ನ ಮಗಳು ಎಂದೋ ನನ್ನ ಕೈ ಬಿಟ್ಟು

ಹೋಗಿದ್ದಳು. ಇವಳು ನಿಮ್ಮ ಮಗಳು. ನೀವು ಇವಳಿಗೆ ಪ್ರಾಣವಿತ್ತು ಬದುಕಿಸಿದಿರಿ"

ಎಂದು ಕೃತಜ್ಞತೆ ಸೂಚಿಸಿದ್ದರು.

ಕಮಲ ಮಾತ್ರ ತಾಯಿಯನ್ನು ಬಿಟ್ಟು ಅಲುಗಾಡುತ್ತಿರಲಿಲ್ಲ. ಅಡಿಗೆಯ ಮನೆ, ದೇವರಮನೆ ಕೆಲಸ ಕಮಲ ಮಾಡುವಂತಿರಲಿಲ್ಲ. ಹೊರಗಿನ ಕೆಲಸಗಳನ್ನು ನಿರ್ವಹಿಸಿಕೊಂಡು, ಮಕ್ಕಳ ಆರೈಕೆ ನೋಡಿಕೊಂಡು ಅವಳು ಕಾಲ ತಳ್ಳುತ್ತಿದ್ದಳು. ಹಳೆಯ ನೆನಪುಗಳು ಬಂದು ಕಾಡಿದಾಗ ಯಾರಿಗೂ ಕಾಣಿಸಿಕೊಳ್ಳದೆ ಕಾಂಪೌಂಡಿನ ಮೂಲೆಯಲ್ಲಿದ್ದ ಪಾರಿಜಾತ ಗಿಡದ ಕೆಳಗೆ ಕುಳಿತು ಕಣ್ಣೀರ್ಗರೆದು ಬರುತ್ತಿದ್ದಳು. ಒಮ್ಮೊಮ್ಮೆ ಕಮಲ ಕಣ್ಣಿಗೆ ಬೀಳದಿದ್ದರೆ ಗೋಪಮ್ಮನವರು

"ರುಕ್ಕೂ, ಕಮಲ ಎಲ್ಲಿ ನೋಡು" ಎಂದು ಹೇಳುತ್ತಿದ್ದರು.

"ಅವಳು ನಿತ್ಯಪೂಜೆ ಮಾಡುತ್ತಿದ್ದಾಳೆ ಅತ್ತೆ."

"ನಿತ್ಯ ಪೂಜೆ!"

"ಹೌದು – ಕಣ್ಣೀರಿನ ಅಭಿಷೇಕ."

"ಅರೀದ ಮಗುವಿಗೆ ಎಂಥಾ ಕಷ್ಟ ಬಂತಮ್ಮ!"

"ಹೆತ್ತ ತಾಯಿಯಾದ ನಾನೂ ಅವಳ ಕಷ್ಟ ನಿವಾರಿಸಲು ಸಾಧ್ಯವಿಲ್ಲವಲ್ಲಾ ಅಮ್ಮಾ."

"ಮನುಷ್ಯ ಒಂದೊಂದು ಭಾರವನ್ನು ಏಕಾಂಗಿಯಾಗಿ ಹೊರಬೇಕಮ್ಮ. ಯಾರೂ ಆ ಭಾರ ಕಡಿಮೆ ಮಾಡಲು ಸಾಧ್ಯವಿಲ್ಲ."

ಕಮಲ ಪ್ರಸನ್ನಳಾಗಿದ್ದ ದಿನ ತಾಯಿಗೆ ಹಾಸ್ಟೆಲ್ಲಿನ ವಿದ್ಯಮಾನಗಳನ್ನೆಲ್ಲಾ ಬಣ್ಣಿಸುವಳು. ಮನೋರಮಾ ವಿಷಯ ಎಷ್ಟು ಹೇಳಿದರೂ ಅವಳಿಗೆ ತೃಪ್ತಿಯಿಲ್ಲ – ಮನೋರಮೆಯನ್ನು ಎಷ್ಟು ಕೊಂಡಾಡಿದರೂ ಅವಳಿಗೆ ಸಾಲದು.

ಒಂದು ದಿನ ಮಾತಿಗೆ ಮಾತು ಬೆಳೆದು ಕಮಲ ತಾಯಿಯನ್ನು ಕೇಳಿದಳು

"ಪದ್ಮನ ವಿಷಯ ನೀನೂ ಅಣ್ಣಾ ಏನು ಯೋಚನೆ

ಆನಂದಕ್ಕಾಗಿ. ಅವರು ಹೋದ ದಾರಿಯಲ್ಲಿ ಲೋಕಕ್ಕೆ ಶಾಂತಿ ದೊರೆಯುವುದಿಲ್ಲ. ಅವರೂ ನಿಷ್ಫಲರಾಗಿ ಮೃತ್ಯುವಶರಾದುದನ್ನು ನಾವು ಕಂಡಿದ್ದೇವೆ. ಆನಂದ ಸಾಧನೆಯಿಂದ ಲೋಕಕಲ್ಯಾಣವೂ ಆಗಬೇಕು; ವ್ಯಕ್ತಿಯ ಆತ್ಮೋತ್ಕ್ರಾಂತಿಯೂ ಆಗಬೇಕು."

"ಆತ್ಮೋತ್ಕ್ರಾಂತಿ ಸಾಧಿಸುವ ಆನಂದ ದೊರಕಿಸುವುದು ಹೇಗೆ?"

"ಋಜು ಬಾಳ್ವೆಯಿಂದ. ಈ ಲೋಕ ನನ್ನದು ಎನ್ನುವ ಭಾವನೆ ಬಿಟ್ಟು ನಾನು ಈ ಲೋಕದವನು ಎಂಬ ಭಾವನೆಯಿಂದ. ಹುಟ್ಟಿನ ಜತೆಯಲ್ಲಿಯೇ ಜೀವನ ಕೆಲವು ಜವಾಬ್ದಾರಿಗಳನ್ನು ಹೊರಿಸಿರುತ್ತದೆ. ಅವುಗಳನ್ನರ್ಥ ಮಾಡಿಕೊಂಡು, ಧೈರ್ಯವಾಗಿ ನಿರ್ವಹಿಸುತ್ತ ಹೋಗಬೇಕು. ಹಾಗೆ ಋಜುಮಾರ್ಗದಲ್ಲಿ ನಡೆಯುವವನ ಬಾಳ್ವೆ ಲೋಕಕ್ಕೆ ಮಾದರಿಯಾಗಿ, ಲೋಕದ ಕತ್ತಲೆಯನ್ನು ಕಳೆಯುತ್ತದೆ."

"ಎಲ್ಲರ ಮನಸ್ಸಿನ ಕತ್ತಲೆ ಕಳೆಯುವುದು ಸಾಧ್ಯವೇ ?"

"ಏಕೆ ಸಾಧ್ಯವಿಲ್ಲ. ಸೂರ್ಯ ಒಂದು ದೇಶ ಒಂದು ಜನಾಂಗ ಒಂದು ಮತಕ್ಕೆ ಮಾತ್ರ ಬೆಳಕು ನೀಡಲೆಂದು ಭಗವಂತ ವಿಧಾಯಕ ಮಾಡಿರುವನೇ? ಎಲ್ಲರ ಹೃದಯಾಂತರಾಳದಲ್ಲಿ ಭಗವಂತನ ಶಕ್ತಿ, ಕರುಣೆ, ಪ್ರಭೆ ಹುದುಗಿರುತ್ತದೆ. ಮಾಯೆಯ ತೆರೆಗಳು ಅದರ ಮೇಲೆ ವ್ಯಾಪಿಸಿ ಅದರ ಕಾಂತಿಯನ್ನು ಕುಂದಿಸಿರುತ್ತದೆ. ಈ ತೆರೆಗಳನ್ನು ನಿವಾರಿಸಿದರೆ ಬೆಳಕು ತಾನೇ ತಾನಾಗಿ ಪ್ರಜ್ವಲಿಸುತ್ತದೆ."

"ಹುಟ್ಟಾ ದೈತ್ಯರಾಗಿರುವವರ ಗತಿಯೇನು ?"

"ಯಾರೂ ಹುಟ್ಟಾ ದೈತ್ಯರಲ್ಲ. ಯಾರನ್ನು ನಾವು ದೈತ್ಯರೆನ್ನುತ್ತೇವೋ ಅವರ ಆತ್ಮನ ಮೇಲೆ ಮಾಯೆಯ ತೆರೆಗಳು ದಟ್ಟವಾಗಿ ಹಬ್ಬಿರುತ್ತವೆ. ಆ ತೆರೆಗಳನ್ನು ನಿವಾರಿಸಿದರೆ ಅವರೂ ಮನುಷ್ಯರೆಂಬುದು ವ್ಯಕ್ತವಾಗುತ್ತದೆ."

ಕಮಲನ ಮನಸ್ಸು ಆಳವಾದ ಚಿಂತೆಗೊಳಗಾಯಿತು. ತಾಯಿಯ ದಿವ್ಯನುಡಿ ಅವಳ ಹಲವಾರು ಅಭಿಪ್ರಾಯಗಳ ಬುಡವನ್ನೇ

ಅಲುಗಾಡಿಸಿತ್ತು. ‘ಲೀಲಾವತಿ, ಬೆಟ್ಸಿಯವರನ್ನು ತೀರ ಕೀಳೆಂದು ನಾನು ಭಾವಿಸಿದುದು ತಪ್ಪೇ!’ ಎಂದು ತನ್ನನ್ನೇ ಪ್ರಶ್ನಿಸಿಕೊಂಡಳು.

ರುಕ್ಮಿಣಮ್ಮನೂ ಯೋಚನಾಕ್ರಾಂತಳಾಗಿದ್ದಳು. ಮಗಳು ವಿವರಿಸಿದ ಹಾಸ್ಟೆಲ್ ಜೀವನ ಅವಳ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸಿತ್ತು.

ಮೌನದ ನರದಿ ಕಳೆದ ಮೇಲೆ ರುಕ್ಮಿಣಮ್ಮ

“ಒಳ್ಳೆಯ ಕಾಕತಾಳನ್ಯಾಯವಾಗಿದೆ ಕಮಲಾ” ಎಂದಳು.

“ಏನಾಯಿತಮ್ಮ.”

“ಮೊನ್ನೆ ಶ್ರೀದೇವಿಯಿಂದ ಕಾಗದ ಬಂತು. ಅವಳೂ ಪದ್ಮನ ಮದುವೆಯ ವಿಷಯ ಪ್ರಸ್ತಾಪಿಸಿದ್ದಾಳೆ. ಅವಳಿಗೂ ರಾಮೂಗೂ ತಿಳಿದಂತೆ ಅಣಿಯಾದ ಗಂಡಿದೆಯಂತೆ – ನಾವು ಒಪ್ಪಿದರೆ ಸುಲಭವಾಗಿ ಇತ್ಯರ್ಥವಾಗುತ್ತದೆಂದು ಬರೆದಿದ್ದಾಳೆ.”

“ಅವರು ಯಾರಂತೆ?”

“ಇಲ್ಲಿಗೆ ಬರಹೇಳಿ ಶ್ರೀದೇವಿಗೆ ಕಾಗದ ಬರಿ. ಅವಳಿಂದಲೇ ಎಲ್ಲಾ ವಿವರಗಳನ್ನೂ ತಿಳಿದುಕೊಂಡರಾಯಿತು.”

ಕಮಲನ ಕಾಗದ ಕೈಸೇರಿದೊಡನೆಯೇ ಶ್ರೀದೇವಿ ಮಂಡ್ಯಕ್ಕೆ ಹೊರಡಲನುವಾದಳು. ರಾಮೂಗೆ ರಜಾ ಸಿಕ್ಕುವ ಸಂಭವವಿರಲಿಲ್ಲ. ಶ್ರೀದೇವಿಯೊಬ್ಬಳೇ ಪ್ರಯಾಣ ಮಾಡಬೇಕಾಯಿತು.

ತಾನು ತಂದಿದ್ದ ಸುದ್ದಿಯನ್ನು ಶ್ರೀದೇವಿ ಅತ್ಯುತ್ಸಾಹದಿಂದ ರುಕ್ಮಿಣಮ್ಮನಿಗೆ ನಿವೇದಿಸಿದಳು.

“ನಮ್ಮ ಮನೆಯ ಪಕ್ಕದಲ್ಲಿಯೇ ಇದ್ದಾರೆ. ಸ್ವಂತ ಮನೆಯಿದೆ. ಮನೆಯಲ್ಲಿ ತಾಯಿ, ತಂದೆ, ಒಬ್ಬನೇ ಮಗ.”

“ತಂದೆ ಯಾವ ಕೆಲಸದಲ್ಲಿದ್ದರು?”

“ಯಾವುದೋ ಹೈಸ್ಕೂಲಿನಲ್ಲಿ ಹೆಡ್‌ಮಾಸ್ಟರಾಗಿದ್ದರಂತೆ. ಈಗ ರಿಟೈರ್ ಆಗಿದ್ದಾರೆ. ಮಗ ಏರ್ ಪೈಲಟ್ (Air Pilot) ಆಗಿದ್ದಾನೆ. ಜನ ತುಂಬ ಒಳ್ಳೆಯವರು. ಹುಡುಗನಿಗೂ ನಮ್ಮ ಯಜಮಾನರಿಗೂ

ತುಂಬ ಪರಿಚಯ."

"ಹುಡುಗನ ಹೆಸರೇನು ?"

"ಸರ್ವೋತ್ತಮ. ಈ ವರ್ಷ ಅವನಿಗೆ ಮದುವೆ ಮಾಡೇ ಬಿಡಬೇಕೆಂದು ತಾಯಿತಂದೆ ನಿರ್ಧರಿಸಿದ್ದಾರೆ. ಒಳ್ಳೆಯ ಕಡೆ ಹೆಣ್ಣಿದ್ದರೆ ತಿಳಿಸಬೇಕೆಂದು ನಾಗೇಶರಾಯರೇ ಅವರ ಹತ್ತಿರ ಹೇಳಿದ್ದಾರೆ. ನೀವು ಒಪ್ಪಿದರೆ ಕೆಲಸ ಸುಸೂತ್ರವಾಗಿ ಆಗಿಹೋಗುತ್ತದೆ."

"ಎಲ್ಲಾ ಸರಿ ಶ್ರೀದೇವಿ. ಹುಡುಗ ಏರ್‌ಪೈಲೆಟ್ ಎಂದು ಹೇಳುತ್ತಿರುವೆಯಲ್ಲ!"

"ಅದಕ್ಕೇನಮ್ಮ. ಸೊಗಸಾದ ಕೆಲಸ. ಕೈತುಂಬ ಸಂಬಳ ಬರುತ್ತಿದೆ.

"ಅದು ಸರಿ ಶ್ರೀದೇವಿ. ನಿತ್ಯ ಪತ್ರಿಕೆಗಳಲ್ಲಿ ವಿಮಾನ ಅಪಘಾತದ ಸುದ್ದಿಗಳು ಬರುತ್ತಿರುತ್ತವೆ. ಅದಕ್ಕಾಗಿ ಅಮ್ಮ ಯೋಚಿಸುತ್ತಿದ್ದಾಳೆ."

"ಬ್ರಹ್ಮ ಬರೆದ ಆಯುಷ್ಯ ಯಾರೂ ಕಿತ್ತುಕೊಳ್ಳಲು ಸಾಧ್ಯವಿಲ್ಲ. ಇಲ್ಲದ ಆಯುಷ್ಯ ಯಾರೂ ಕೊಡುವುದೂ ಸಾಧ್ಯವಿಲ್ಲ. ಜಾತಕಾನು ಕೂಲವಾದರೆ ಈ ಸಂಬಂಧ ಮಾಡುವುದು ಒಳ್ಳೆಯದಮ್ಮ. ಎಲ್ಲಾ ರೀತಿಯಲ್ಲಿಯೂ ಇದು ಅನುಕೂಲವಾದ ಸ್ಥಳ. ಪದ್ಮ, ನಾನೂ ಜತೆಯಲ್ಲಿಯೇ ಇದ್ದ ಹಾಗಾಗುತ್ತದೆ. ಪರಸ್ಪರ ಕಷ್ಟಸುಖ ವಿಚಾರಿಸಿ ಕೊಳ್ಳುವುದಕ್ಕೂ ಅನುಕೂಲವಾಗುತ್ತದೆ."

"ಆಗಲಿ ಶ್ರೀದೇವಿ. ನಿನ್ನ ಅಣ್ಣಂದಿರಿಗೆ ನೀನೇ ಹೇಳು. ಅವರು ಏನು ಹೇಳುತ್ತಾರೋ ನೋಡೋಣ."

ಶ್ರೀದೇವಿ ಅಂದೇ ಅಣ್ಣನಿಗೆ ವರನ ವಿಷಯ ವಿವರಿಸಿ ಯಾವ ಕಾರಣಕ್ಕೂ ಆ ಸಂಬಂಧ ಬಿಡಬಾರದೆಂದು ತಿಳಿಸಿದಳು. ಮಾಧವರಾಯ ಯೋಚನೆಮಾಡಿ ತಿಳಿಸುವುದಾಗಿ ಶ್ರೀದೇವಿಗೆ ಹೇಳಿದ.

ಮಾರನೆಯ ದಿನ ಮಾಧವರಾಯ ಜವರೇಗೌಡರನ್ನೂ, ಷರೀಫ್ ಸಾಹೇಬರನ್ನೂ ಬರಮಾಡಿಕೊಂಡು ಪದ್ಮನ ಲಗ್ನದ ವಿಷಯ ಪ್ರಸ್ತಾಪಿಸಿದ. ಗೌಡರು

" ನಾನೇ ಈ ಮಾತೆತ್ತಬೇಕೆಂದಿದ್ದೆ ಸ್ವಾಮಿ. ಪದ್ಮಮ್ಮನಿಗೆ ಲಗ್ನ ಮಾಡಿಬಿಡುವುದೊಳ್ಳೆಯದು. ನಿಮ್ಮ ತಂಗಿ ಕುದುರಿಸಿರುವ ಸಂಬಂಧ ಸರ್ವೋತ್ಕೃಷ್ಟವಾಗಿದೆಯಲ್ಲಾ ! "

" ಎಲ್ಲಾ ಚೆನ್ನಾಗಿದೆ ಗೌಡರೇ. ಹುಡುಗ ಏರ್ ಪೈಲಟ್ ಆಗಿರುವುದೊಂದೇ ನನ್ನನ್ನು ಬಾಧಿಸುತ್ತಿದೆ. ಕಮಲನ ಬಾಳು ಮಣ್ಣು ಗೂಡಿ ಹೋಯಿತು. ಪದ್ಮನ ಬಾಳು. .. . . "

" ಕೆಟ್ಟಯೋಚನೆ ಏಕೆ ಮಾಡುವಿರಿ ? ಆಯುಸ್ಸು ಯಾರಧೀನ ? ವಿಧಿಲಿಖಿತ ಪೂರೈಸಿದ್ದರೆ ವಿಮಾನ ಅಪಘಾತವೇ ಆಗಬೇಕೇನು– ಬೈಸಿಕಲ್ಲಿಂದ ಬಿದ್ದರೂ ಸಾಕು. ಸರಿಯಾದವರ ಕೈಯಲ್ಲಿ ಜಾತಕ ತೋರಿಸಿ, ಜಾತಕಾನುಕೂಲವಾದರೆ ಮನಸ್ಸು ವ್ಯಥೆ ಮಾಡಿಬಿಡಿ ಸ್ವಾಮಿ. "

" ಗೌಡರು ಹೇಳುವುದು ನಿಜ ಸ್ವಾಮಿ. ಈ ವಿಷಯದಲ್ಲಿ ದೇವರ ಮೇಲೆ ಭಾರ ಹಾಕಿ ಧೈರ್ಯವಾಗಿ ಮುಂದುವರಿಯುವುದೇ ಒಳ್ಳೆಯದು. ಕಮಲಮ್ಮನ ವಿಷಯ ಹೆಚ್ಚುಕಡಮೆಯಾಯಿತೆಂದು ಎಲ್ಲವೂ ಹಾಗೇ ಆಗುತ್ತದೆಂದು ತಿಳಿಯುವುದು ನ್ಯಾಯವಲ್ಲ. "

ಎಂದು ಷರೀಫ್ ಸಾಹೇಬರು ಸ್ಪಷ್ಟವಾಗಿ ನುಡಿದರು.

ತನಗೂ ತನ್ನ ಗೆಳೆಯರಿಗೂ ನಡೆದ ಸಂಭಾಷಣೆಯನ್ನು ಮಾಧವರಾಯ ಮನೆಯಲ್ಲಿ ತಿಳಿಸಿದ.

ಶ್ರೀದೇವಿ ಪದ್ಮನ ಜಾತಕ ತೆಗೆದುಕೊಂಡು ಬೆಂಗಳೂರಿಗೆ ಪ್ರಯಾಣ ಬೆಳಸಿದಳು.

೧೨

ಮನೆಯಲ್ಲಿ ನಾರಾಯಣಸ್ವಾಮಿ ವರಾತ ಸಹಿಸಲಸಾಧ್ಯ ವಾಯಿತು. ಮನೆಯ ಕಷ್ಟ ನಿಷ್ಠೂರಗಳಾಗಲಿ, ತಾಯಿತಂದೆಯ ನೂರೆಂಟು ಹೊಣೆಗಾರಿಕೆಯೇ ಆಗಲಿ ಅವನ ಮನಸ್ಸಿನ ಮೇಲೆ ಕಿಂಚಿತ್ತಾದ ಪರಿಣಾಮವನ್ನೂ ಉಂಟುಮಾಡಿರಲಿಲ್ಲ.

'ಕಮಲನ ಜೀವನ ಮಣ್ಣುಗೂಡಿಹೋಗಿದೆ. ಅವಳಿಗೊಂದು ದಾರಿಯಾಗಬೇಕು. ಏನೂ ಅರಿಯದ ಎರಡು ಮಕ್ಕಳು ಬೇರೆ ಅವಳ ಬೆನ್ನು ಬಿದ್ದಿದ್ದಾರೆ.'

ನಾರಾಯಣಸ್ವಾಮಿ ಒಂದೇ ಉತ್ತರ ಹೇಳುತ್ತಿದ್ದ.

'ನನಗೆ ಸಿಕ್ಕಿರುವ ಅವಕಾಶ ಕಳೆದುಕೊಂಡರೆ ಮುಂದೆ ನನ್ನ ಗತಿಯೇನು?'

'ಇಲ್ಲೇ ಓದು. ಎಂ.ಎ. ಪಾಸುಮಾಡು, ಲಾ ಪರೀಕ್ಷೆಗೆ ಓದು.'

'ನನಗೆ ಅವುಗಳಲ್ಲಿ ಇಷ್ಟವಿಲ್ಲ.'

'ಪದ್ಮನ ಮದುವೆಯ ಪ್ರಯತ್ನ ನಡೆಯುತ್ತಿದೆ ನಾರಾಯಣ ಸ್ವಾಮಿ.'

'ಮದುವೆ ಮುಂಜಿಗಳ ಗಲಾಟೆಯಲ್ಲಿ ನನ್ನ ಭವಿಷ್ಯ ಹಾಳಾಗ ಬೇಕೇನು?'

'ನಿನ್ನ ಭವಿಷ್ಯ ನಿನಗೆಷ್ಟು ಮುಖ್ಯವೋ ಅಷ್ಟೇ ನಿನ್ನ ತಾಯಿ

ತಂದೆಗೆ ಮುಖ್ಯವಲ್ಲವೇ ? '

'ಹೆಣ್ಣುಮಕ್ಕಳ ಹಿತಸಂರಕ್ಷಣೆಯಲ್ಲಿ ಅವರು ನನ್ನನ್ನು ಅಲಕ್ಷ್ಯ ಮಾಡುತ್ತಿದ್ದಾರೆ.'

'ಹುಚ್ಚ – ನೀನು ಬೇರೆ, ಹೆಣ್ಣುಮಕ್ಕಳು ಬೇರೆ ಎಂದವರು ಭಾವಿಸಿದ್ದಾರೆಯೇ ? ದುಃಖದಿಂದ ತಪ್ತರಾಗಿರುವ ಅವರನ್ನು ಸಂತೈಸ ಬೇಕಾದುದು ಗಂಡುಮಗ, ನಿನ್ನ ಕರ್ತವ್ಯವಲ್ಲವೇ ? '

'ಹೌದು. ನಾನು ಮುಂಬಯಿಗೆ ಹೋಗಿ ಉಚ್ಚ ಶಿಕ್ಷಣ ಪಡೆದು, ಒಳ್ಳೆಯ ಕೆಲಸ ದೊರಕಿಸಿಕೊಂಡರೆ ಅದರಿಂದ ನನ್ನ ತಾಯಿ ತಂದೆಗೆ ಪ್ರಯೋಜನವಾಗೇ ಆಗುತ್ತದೆ. ಅವರ ಜವಾಬ್ದಾರಿಯ ಸ್ವಲ್ಪ ಭಾಗವನ್ನಾದರೂ ಹೊರಲು ನಾನು ಸಮರ್ಥನಾಗುತ್ತೇನೆ.'

'ಅವರ ಜವಾಬ್ದಾರಿ ಹೊರಲು ಅವರು ಸಮರ್ಥರಾಗುತ್ತಾರೆ. ನಿನ್ನ ಜವಾಬ್ದಾರಿ ನೀನು ನೋಡಿಕೋ."

ನಾರಾಯಣಸ್ವಾಮಿಯ ಮನಸ್ಸು ಮುಖವಾಡ ಕಟ್ಟಿಕೊಂಡ ಕುದುರೆಯಂತೆ ಓಡುತ್ತಿತ್ತು. ತನ್ನ ಅಭ್ಯುದಯದ ಕನಸಿನ ಸಾಮ್ರಾಜ್ಯ ದಲ್ಲಿ ವಿಹರಿಸುತ್ತಿದ್ದ ಅವನಿಗೆ ಉಳಿದವರ ಕಷ್ಟಸುಖ ಬೇಡವಾಗಿತ್ತು.

ನಾರಾಯಣಸ್ವಾಮಿಯ ಹಟಮಾರಿತನ ಕಂಡು ಗೋದಮ್ಮ ನವರೂ ಬೇಸರಗೊಂಡರು. ರುಕ್ಮಿಣಿಯ ಮಾತನ್ನು ಅವನು ಕಡೆಗಾಣಿಸಿದುದನ್ನು ಕಂಡು ಕನಲಿದ ಗೋದಮ್ಮನವರು

"ಏನೇ ಆಗಲಿ. ಅವನನ್ನು ಬೊಂಬಾಯಿಗೆ ಕಳಿಸಬೇಡ ರುಕ್ಕೂ. ಶುದ್ಧ ಪಾಳೆಯಗಾರನಂತೆ ಆಡಲು ಮೊದಲುಮಾಡಿದ್ದಾನೆ. ವಯಸ್ಸು ಚಿಕ್ಕದು – ಇವತ್ತಲ್ಲ ನಾಳೆ ಬುದ್ಧಿ ಬರುತ್ತದೆ ಎಂದು ನಾವು ಸುಮ್ಮನಿದ್ದರೆ ಇವನ ಪಟಾಟೋಪವೇ ಬೆಳೆಯುತ್ತಿದೆ. ತಾಯಿ ತಂದೆಯ ಮಾತು ಇವನಿಗೆ ಸ್ವಲ್ಪವೂ ನಡ್ಡೆಯಿಲ್ಲ."

"ಕೋಪಮಾಡಿಕೊಳ್ಳಬೇಡಿ ಅಮ್ಮ. ನಾಣಿ ನೀವು ಸಾಕಿದ ಕಂದ. ನೀವೇ ಅವನಮೇಲೆ ಕೋಪಮಾಡಿಕೊಂಡರೆ ಅವನ ಪಕ್ಷ ವಹಿಸುವವರು ಯಾರು ? ತಾಯಿತಂದೆಗೆ ಮಕ್ಕಳು ಸೋತರೆ, ಮಕ್ಕಳಿಗೆ

ತಾಯಿತಂದೆ ಸೋತರೆ ಅದರಲ್ಲಿ ಅವಮಾನವೇನು ಬಂತು?—ನಾವು ಹಳೆಯಕಾಲದವರು. ಯಾವ ಪರೀಕ್ಷೆ, ಎಲ್ಲಿ ಪಾಸು ಮಾಡಿದರೆ ಈಗ ಒಳ್ಳೆಯ ಕೆಲಸ ಸಿಕ್ಕುತ್ತದೆ ಎನ್ನುವುದನ್ನು ನಾವೇನು ಬಲ್ಲೆವು. ಮುಂಬಯಿಗೆ ಹೋಗುವುದರಿಂದ ನಾಣಿಯ ಭವಿಷ್ಯ ಸುಗಮವಾಗುವ ಹಾಗಿದ್ದರೆ ಅದನ್ನು ವಿರೋಧಿಸುವುದು ನ್ಯಾಯವಲ್ಲ ಎಂದು ನನಗೆ ತೋರುತ್ತದೆ."

"ಸರಿ ರುಕ್ಕೂ – ನೀನುಂಟು ನಿನ್ನ ಮಗ ಉಂಟು. ನಿಮಗೆ ಹೇಗೆ ಸಂತೋಷವೋ ಹಾಗೆ ಮಾಡಿ. ಮಾಧೂ ನನ್ನೇನಾದರೂ ಒಂದು ಮಾತು ಕೇಳಿದರೆ ನಾಣೀನ ಬೊಂಬಾಯಿಗೆ ಕಳಿಸುವುದು ನನಗೆ ಸ್ವಲ್ಪವೂ ಇಷ್ಟವಿಲ್ಲ ಎಂದು ಹೇಳಿಬಿಡುತ್ತೇನೆ."

ಗೋದಮ್ಮನವರು ಆ ಮಾತು ಹೇಳಿಬಿಡುವುದಾದರೆ ನಾಣಿಯ ಪ್ರಯತ್ನ ನಿಷ್ಫಲವಾಗುತ್ತದೆಂದು ರುಕ್ಮಿಣಿ ಚೆನ್ನಾಗಿ ಬಲ್ಲಳು. ತಾಯಿಯ ಮಾತನ್ನು ವೇದವಾಕ್ಯವೆಂದು ಭಾವಿಸಿದ್ದ ಮಾಧವರಾಯ ಎಂದಿಗೂ ಅದನ್ನ ಅತಿಕ್ರಮಿಸುವುದಿಲ್ಲವೆಂಬುದನ್ನು ರುಕ್ಮಿಣಿ ತಿಳಿದಿದ್ದಳು.

ರುಕ್ಮಿಣಿಯ ಮನಸ್ಸಿಗೆ ಕಳವಳವಾಯಿತು. ನಾಣಿ ಜಾಣತನದಿಂದ ಗೋದಮ್ಮನವರ ಜತೆ ರಾಜಿಮಾಡಿಕೊಂಡು, ಅವರ ಮನಸ್ಸು ಒಲಿಸಿಕೊಳ್ಳದಿದ್ದರೆ ಕೆಲಸ ಕೆಡುವುದೆಂದು ತಿಳಿದು, ನಾಣಿಯನ್ನೇ ಆ ಕೆಲಸಕ್ಕೆ ಉದ್ಯೋಗಿಸಿದಳು.

ಗೋದಮ್ಮನವರನ್ನು ನಿರ್ಲಕ್ಷಿಸುತ್ತಿದ್ದ ನಾಣಿ ಒಮ್ಮೆಲೇ ಅವರನ್ನು ಆಶ್ರಯಿಸುವುದು ದುಸ್ಸಾಧ್ಯವಾಗಿತ್ತು. ಗತ್ಯಂತರ ಕಾಣದೆ ನಾಣಿ ಅಜ್ಜಿಯನ್ನು ಒಲಿಸಿಕೊಳ್ಳಲೆತ್ನಿಸಿದ. ಮೂರು ನಾಲ್ಕು ದಿನ ಅಜ್ಜಿಯ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಿದ್ದು ಆಗಾಗ್ಗೆ ತನ್ನ ಪಾಠ ಪ್ರವಚನಗಳ ಬಗ್ಗೆ ಅಜ್ಜಿಗೆ ವರದಿ ಒಪ್ಪಿಸುತ್ತಿದ್ದ.

ಮೊಮ್ಮಗನಲ್ಲಿ ಆಗಿದ್ದ ಮಾರ್ಪಾಟನ್ನು ಗೋದಮ್ಮನವರು ಗಮನಿಸದಿರಲಿಲ್ಲ. ಒಂದು ದಿನ ರುಕ್ಮಿಣಿಗೆ

" ನಾಣೀಗೆ ಇದ್ದಕ್ಕಿದ್ದಂತೆ ಬುದ್ಧಿ ಬಂದು ಬಿಟ್ಟಿದೆ ರುಕ್ಕೂ" ಎಂದರು.

" ಏಕೆ ? ಏನಾಯಿತು ಅಮ್ಮ."

" ನನ್ನ ಯೋಗಕ್ಷೇಮ ಬಹಳ ವಿಚಾರಿಸಿಕೊಳ್ಳುತ್ತಿದ್ದಾನಮ್ಮ."

" ಅವನ ಮನಸ್ಸು ಒಳ್ಳೆಯದಮ್ಮ. ಸ್ವಲ್ಪ ಹುಡುಗು - ತಿಳಿವಳಿಕೆ ನಾಲದು. ಅವನನ್ನು ಸಾಕಿ ಸಲಹಿದವರೇ ನೀವು - ನಿಮ್ಮ ಮೇಲೆ ಅವನಿಗೆ ವಾತ್ಸಲ್ಯವಿರುವುದು ಸ್ವಾಭಾವಿಕವಾಗಿಯೇ ಇದೆ."

" ಇದೇನು ಅವನ ವಾತ್ಸಲ್ಯದ ಫಲವೋ ನಿನ್ನ ಉಪದೇಶದ ಫಲವೋ ಕಾಣೆ."

" ಇದೆಲ್ಲಾ ಹೇಳಿಕೊಟ್ಟರೆ ಬರುತ್ತದೆಯೇನಮ್ಮ. ಗೌರವ, ದಯೆ, ವಿಶ್ವಾಸಾದಿ ಗುಣಗಳು ಸ್ವಭಾವಜನ್ಯವಾಗಿ ಬರಬೇಕು."

ನಾಣಿಯ ಸಂಧಾನಕ್ಕೆ ಗೋದಮ್ಮನವರು ತುತ್ತಾಗಲು ತಡವಾಗ ಲಿಲ್ಲ. ನಾಲ್ಕಾರು ದಿನಗಳಲ್ಲಿ ಅವರು ನಾಣಿಯ ಗುಣವರ್ಣನೆ ಮಾಡಿದ್ದೇ ಮಾಡಿದ್ದು.

" ನಾಣಿ ದೊಡ್ಡವನಾಗಿ, ದೊಡ್ಡ ಕೆಲಸ ಸಂಪಾದಿಸಿಕೊಂಡ ಮೇಲೆ ಎಲ್ಲರನ್ನೂ ಸಾಕುತ್ತಾನಮ್ಮ. ತಂದೆ ತಾಯಿ ಹೆಸರು ಉಳಿಸಿ ಈ ಮನೆಗೆ ಆಚಂದ್ರಾರ್ಕವಾದ ಕೀರ್ತಿ ತರುತ್ತಾನೆ"

ಎಂದು ಸಾರಲಾರಂಭಿಸಿದರು.

ಪರೀಕ್ಷೆಯ ಫಲಿತಾಂಶ ಹೊರಬೀಳುವವರೆಗೂ ನಾಣಿ ಉಸಿರೆತ್ತಲಿಲ್ಲ.

ಫಲಿತಾಂಶವೂ ಹೊರಬಿತ್ತು. ನಾಣಿ ಎರಡನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದ್ದ. ಚಿನ್ನಸ್ವಾಮಿಯೂ ತೇರ್ಗಡೆ ಹೊಂದಿದ್ದ. ಚಿನ್ನಸ್ವಾಮಿಯ ತಂತೀ ವರ್ತಮಾನ ತೆಗೆದುಕೊಂಡು ನಾಣಿ ತಾಯಿಗೆ ಸುದ್ದಿ ತಿಳಿಸಿ, ಅದನ್ನು ಅಜ್ಜಿಯ ಮುಂದಿಟ್ಟು ಸಾಷ್ಟಾಂಗ ನಮಸ್ಕಾರ ಹಾಕಿದ.

ಗೋದಮ್ಮನವರ ಕಣ್ಣುಗಳಿಂದ ಆನಂದಭಾಷ್ಪಗಳುದುರಿದವು.

ತಾವು ಮಡಿಯಲ್ಲಿದ್ದುದನ್ನೂ ಲಕ್ಷಿಸದೆ ಮೊಮ್ಮಗನ ತಲೆ ನೇವರಿಸಿ, ಕೆನ್ನೆ ಮುಟ್ಟಿ, ಬಾಯಿ ತುಂಬ ಹರಸಿದರು.

ಒಂದೆರಡು ದಿನಗಳ ತರುವಾಯ ಗೋದಮ್ಮನವರೇ ಮೊಮ್ಮಗನನ್ನು ಕೇಳಿದರು.

"ಮುಂದೆ ಏನು ಮಾಡುತ್ತೀ ನಾಣಿ."

"ಅಣ್ಣ ಲಾಗೆ ಓದು ಎಂದು ಹೇಳುತ್ತಿದ್ದಾರೆ ಅಜ್ಜಿ."

"ಅವನು ಹೇಳಿದಹಾಗೆ ಮಾಡಪ್ಪಾ."

"ಕಾನೂನು ಕಾಯಿದೆಯೆಂದರೆ ನನಗೆ ತಲೆನೋವು ಬರುತ್ತದೆ."

"ಹೋಗಲಿ. ಇನ್ನು ಯಾವದಕ್ಕಾದರೂ ಓದು."

"ಸೋಷಿಯಾಲಜೀಗೆ ಓದಬೇಕೆಂದಿದ್ದೇನೆ."

"ಹಾಗೆಂದರೆ....?"

"ಸಮಾಜಶಾಸ್ತ್ರ. ಜಾತಿಗಳು, ಧರ್ಮಗಳು ಹೇಗೆ ಹುಟ್ಟಿಕೊಂಡವು - ಜನಾಂಗಗಳು ಹೇಗೆ ರೂಪಗೊಂಡವು - ಪ್ರಕೃತಿ, ಹವಾಮಾನ ಮನುಷ್ಯನ ಬೆಳವಳಿಗೆಯ ಮೇಲೆ ಎಂಥ ಪ್ರಭಾವವನ್ನುಂಟುಮಾಡುತ್ತವೆ ಮೊದಲಾದವುಗಳನ್ನೆಲ್ಲಾ ಕಲಿಸಿಕೊಡುತ್ತಾರೆ."

"ಸ್ಕೂಲಿನಲ್ಲಿ ಅವುಗಳನ್ನೆಲ್ಲಾ ಕಲಿಸಿಕೊಡುತ್ತಾರೇನೋ ನಾಣಿ."

"ಹೌದಜ್ಜಿ. ಅದಕ್ಕಾಗಿಯೇ ದೊಡ್ಡ ಕಾಲೇಜು ತೆಗೆದಿದ್ದಾರೆ."

"ಪರವಾಯಿಲ್ಲ. ಧರ್ಮಗಳ ವಿಷಯವೂ ಹೇಳುತ್ತಾರೆಯೇ?"

"ವಿಶ್ವವಿದ್ಯಾನಿಲಯಗಳಲ್ಲಿ 'ತುಲನಾತ್ಮಕ ಧರ್ಮ ವಿವೇಚನೆ' (Comparative Philosophy) ಒಂದು ಮುಖ್ಯ ವಿಷಯ. ಅದರಲ್ಲಿ ಚೆನ್ನಾಗಿ ಪಾರಂಗತನಾದವನಿಗೆ 'ಪಂಡಿತಪ್ರಶಸ್ತಿ' (Doctorate) ಕೊಡುತ್ತಾರೆ."

"ಮ್ಲೇಚ್ಛಭಾಷೆ ಕಲಿತವರೆಲ್ಲಾ ನಾಸ್ತಿಕರಾಗುತ್ತಾರೆ ಎಂದಿದ್ದ ನಲ್ಲೋ ನಾಣಿ."

"ಅದೆಲ್ಲಾ ತಪ್ಪು ಅಭಿಪ್ರಾಯ ಅಜ್ಜಿ. ಸಂಸ್ಕೃತಭಾಷೆಯಲ್ಲಿರುವ ಜ್ಞಾನ ಉಳಿಯುವುದಕ್ಕೆ ನಮ್ಮವರಿಗಿಂತ ಹೆಚ್ಚಾಗಿ

ವಿದೇಶೀಯರು ಪ್ರಯತ್ನಪಟ್ಟಿದ್ದಾರೆ. ಮ್ಯಾಕ್ಸ್ ಮುಲ್ಲರ್, ವಿಲ್ಸನ್, ಮೋನಿಯರ್ ವಿಲಿಯಮ್ಸ್, ಪಾಲ್ ಡಾಯ್‌ಸನ್ ಮೊದಲಾದ ವಿಲಾಯಿತಿ ವಿದ್ವಾಂಸರು ಸಂಸ್ಕೃತ ಭಾಷೆ ಚೆನ್ನಾಗಿ ಕಲಿತು ನಮ್ಮ ವೇದಗಳು, ಉಪನಿಷತ್ತುಗಳು, ಪುರಾಣಗಳು, ಧರ್ಮಶಾಸ್ತ್ರಗಳು, ಕಾವ್ಯ, ನಾಟಕಗಳನ್ನು ಅಮೋಘವಾಗಿ ವಿದೇಶೀಯ ಭಾಷೆಗಳಿಗೆ ಅನುವಾದ ಮಾಡಿದ್ದಾರೆ. ಅವರೂ ಎಷ್ಟು ಆಸ್ತಿಕರು ಎನ್ನುವುದಕ್ಕೆ ಒಂದು ಕಥೆ ಹೇಳುತ್ತೇನೆ ಕೇಳು ಅಜ್ಜಿ."

"ಹೇಳಪ್ಪಾ ಹೇಳು."

"ಮೋನಿಯರ್ ವಿಲಿಯಮ್ಸ್ ಘನ ವಿದ್ವಾಂಸ. ಅವನಿಗೆ ನಮ್ಮ ದೇಶದ ಸಂಸ್ಕೃತಿ, ವಿದ್ಯೆಯೆಂದರೆ ಪಂಚಪ್ರಾಣ. ಸಂಸ್ಕೃತವನ್ನು ಶಾಸ್ತ್ರೋಕ್ತವಾಗಿ ಗುರುಮುಖೇನ ಅಭ್ಯಾಸಮಾಡಿ ಸಂಸ್ಕೃತ ಗ್ರಂಥಗಳನ್ನು ಇಂಗ್ಲೀಷಿಗೆ ಅನುವಾದ ಮಾಡಲು ಅವನು ನಮ್ಮ ದೇಶಕ್ಕೆ ಬಂದು ಸಂಸ್ಕೃತ ವಿದ್ಯೆಯ ರಾಜಧಾನಿಯಾಗಿದ್ದ ಕಾಶಿಯಲ್ಲಿ ನೆಲಸಿದ. ವಿಲಿಯಮ್ಸ್ ಎಷ್ಟು ಪ್ರಯತ್ನಿಸಿದರೂ ಯಾರೂ ಅವನಿಗೆ ಸಂಸ್ಕೃತ ಪಾಠ ಹೇಳಲು ಒಪ್ಪಲಿಲ್ಲ. 'ನೀನು ಮ್ಲೇಚ್ಛ. ಅಭಕ್ಷ್ಯಭೋಜನ ಮಾಡುತ್ತೀ – ಅಪೇಯಪಾನ ಮಾಡುತ್ತೀ. ನಿನ್ನಂಥವನಿಗೆ ದೇವಭಾಷೆ, ಕಲಿಸಿದರೆ ನಾವೂ ನಮ್ಮ ವಂಶದವರೂ ರೌರವ ನರಕಕ್ಕೆ ಹೋಗುತ್ತೇವೆ' ಎಂದು ಪಂಡಿತರು ನಿರಾಕರಿಸಿದರು. ವಿಲಿಯಮ್ಸ್ ನಿರಾಶೆಗೊಳ್ಳಲಿಲ್ಲ. ತನ್ನ ಪ್ರಯತ್ನ ಮುಂದುವರಿಸಿ ಒಬ್ಬ ಬಡ ವಿದ್ವಾಂಸನನ್ನು ಪತ್ತೆ ಹಚ್ಚಿ, ಅವನನ್ನು ಒಪ್ಪಿಸಿದ. ಈ ಬಡ ವಿದ್ವಾಂಸ ವಿಧಿಸಿದ ಕರಾರಿಗೆ ವಿಲಿಯಮ್ಸ್ ಒಪ್ಪಿಕೊಂಡು, ಅದಕ್ಕೆ ಚಾಚೂ ಲೋಪಬರದಂತೆ ನಡೆದುಕೊಂಡ. ಈ ಕರಾರೂ ಸ್ವಾರಸ್ಯವಾಗಿದೆ. ವಿಲಿಯಮ್ಸ್ ಮಾಂಸಾಹಾರ ಮಾತಕೂಡದು, ಶಾಕಾಹಾರಿಯಾಗಿಯೇ ಇರಬೇಕು; ಅಪೇಯಪಾನ ಮಾಡಕೂಡದು. ದಿನವೂ ಬೆಳಗ್ಗೆ ನಾಲ್ಕು ಗಂಟೆಗೇ ಎದ್ದು ಗಂಗಾನದಿಯಲ್ಲಿ ಮಿಂದು, ಒದ್ದೆ ವಸ್ತ್ರದಲ್ಲಿಯೇ ಮನೆ ಸೇರಬೇಕು. ಮನೆಯನ್ನು ಗಂಗಾಜಲದಿಂದ ಪರಿಶುದ್ಧಿಗೊಳಿಸಿ

ಪಾಠ ಹೇಳಿಸಿಕೊಳ್ಳಬೇಕು."

"ಆ ಪರಂಗಿಯವನು ಇದಕ್ಕೆಲ್ಲಾ ಒಪ್ಪಿದನೇ ?"

"ಒಪ್ಪಿದ್ದು ಮಾತ್ರವೇ ಅಲ್ಲ ಅಜ್ಜಿ, ಅನೇಕ ವರ್ಷಗಳು ಈ ವ್ರತ ಪಾಲಿಸಿಕೊಂಡು ಘನ ವಿದ್ವಾಂಸನಾಗಿ, ನಮ್ಮ ಧರ್ಮಗ್ರಂಥಗಳ ಮೇಲೆ ವ್ಯಾಖ್ಯಾನ ಬರೆದಿದ್ದಾನೆ."

"ಏನು ಮಹಾನುಭಾವನಪ್ಪಾ ಅವನು. ನಮ್ಮ ಬ್ರಾಂಬರು ಕೂಡ ಇಷ್ಟು ನೇಮನಿಷ್ಠೆಯಿಂದ ಇರುವುದಿಲ್ಲವಲ್ಲೋ ನಾಣಿ."

"ನಮ್ಮಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಮ್ಲೇಚ್ಛರಿರು ವಂತೆ ವಿಲಾಯಿತಿಯಲ್ಲೂ ಇದ್ದಾರೆ ಅಜ್ಜಿ. ವಿಲಿಯಮ್ಸ್, ಮ್ಯಾಕ್ಸ ಮುಲ್ಲರ್, ಡಾಯ್‌ಸನ್ ಇವರೆಲ್ಲಾ ಬ್ರಾಹ್ಮಣವರ್ಗಕ್ಕೆ ಸೇರಿದವರು. ನಮ್ಮ ಋಷಿಗಳೇ ಅಲ್ಲಿ ಅವತರಿಸಿದರೋ ಏನೋ ?"

"ಏಕಾಗಬಾರದು. ಋಷಿಯಂಶವಿಲ್ಲದಿದ್ದರೆ ಇಂಥ ಕೆಲಸ ಮಾಡುವುದಕ್ಕಾಗುತ್ತದೆಯೇ ?"

"ಇಷ್ಟು ಒಳ್ಳೆಯವರಿರುವ ವಿಲಾಯಿತಿಯಲ್ಲಿ ಜನ ಮಾಂಸ ತಿನ್ನುತ್ತಾರಂತೆ – ಹೆಂಡ ಕುಡಿಯುತ್ತಾರಂತೆ. ಹಾಗೇಕೆ ಮಾಡು ತ್ತಾರೋ ನಾಣಿ."

"ನೋಡು ಅಜ್ಜಿ. ನಮ್ಮದು ಉಷ್ಣದೇಶ – ಅವರದು ಶೀತ ಪ್ರದೇಶ. ಚಳಿಗಾಲದಲ್ಲಿ ಬೆಂಗಳೂರಿನಲ್ಲಿ ಹವಾಮಾನ ೯೫° – ೯೪° ಡಿಗ್ರಿ ಮುಟ್ಟಿದರೇ ಜನ ಚಳಿ ಸಹಿಸಲಾರರು. ಸ್ವೆಟ್ಟರು, ಮಫ್ಲರ್, ರಗ್ಗುಗಳು, ಟ್ವೀಡ್ ಕೋಟುಗಳು ಎಲ್ಲಾ ಹೊರಗೆ ಬಂದು ಬಿಡುತ್ತವೆ. ರಾತ್ರಿ ಮೆಣಸಿನಸಾರು, ಹುರುಳಿ ಕಟ್ಟಿನ ಸಾರು ಮಾಡಿಸಿ ಜನ ಊಟಮಾಡುತ್ತಾರೆ. ವಿಲಾಯಿತಿಯಲ್ಲಿ ಹವಾಮಾನ ೨೫° – ೨೦° ಡಿಗ್ರಿಗಳಷ್ಟು ಇಳಿದುಬಿಡುತ್ತದೆ. ಮೈರಕ್ತ ಹೆಪ್ಪುಗಟ್ಟುತ್ತದೆ. ಸಮುದ್ರವೆಲ್ಲಾ ಮಂಜಿನ ಗೆಡ್ಡೆಯಾಗುತ್ತದೆ. ಕೈ ಕಾಲುಗಳು ಸೆಟೆದು ಹೋಗುತ್ತವೆ. ಚಳಿ ಸಹಿಸುವುದಕ್ಕೆ ಅಲ್ಲಿಯ ಜನ ಮಾಂಸಾಹಾರ, ಮದ್ಯಪಾನ ಮಾಡುತ್ತಾರೆ. ಅಂಥ ಚಳಿಯಲ್ಲಿಯೂ ಕೇವಲ ಶಾಕಾ

ಹಾರಿಗಳಾಗಿರುವ ಜನರೂ ತುಂಬ ಇದ್ದಾರೆ."

"ಹೋಗಲಿ. ಅವರಿಗಂತೂ ಅದು ದೇಶಾಚಾರ. ಇಲ್ಲಿಂದ ವಿಲಾಯಿತಿಗೆ ಹೋಗುವ ನಮ್ಮವರೇಕೆ ಜಾತಿ ಕೆಟ್ಟು ಬರುತ್ತಾರೆ. ದೇವರು ಕೊಟ್ಟ ಹಾಗೆ ಹಣ್ಣು, ತರಕಾರಿ ಇರುವಾಗ ಕುರಿ ಕೋಳಿ ಏಕೆ ತಿನ್ನುತ್ತಾರೆ?"

"ಅದೆಲ್ಲಾ ಕೆಟ್ಟ ಚಟಗಳು ಅಜ್ಜಿ. ನವಿಲು ನೋಡಿ ಕೆಂಬೂತ ಪುಕ್ಕ ತೆರೆದುಕೊಂಡು ಕುಣಿದ ಹಾಗೆ. ಆದರೆ ವಿಲಾಯಿತಿಗೆ ಹೋಗುವ ನಮ್ಮವರೂ ಎಷ್ಟೋ ಮಂದಿ ಮಡಿಯಾಗಿಯೇ ಇದ್ದು ಬಂದಿದ್ದಾರೆ. ನಮ್ಮ ಹಿಸ್ಟ್ರಿ ಪ್ರೊಫೆಸರು (History Professor) ಡಾ. ಎಂ. ಎಚ್. ಕೃಷ್ಣ ಎಂತ ಇದ್ದಾರೆ. ಅವರು ಶ್ರೀವೈಷ್ಣವರು. ಅವರೂ ಇಂಗ್ಲೆಂಡಿಗೆ ಹೋಗಿ ಬಂದಿದ್ದಾರೆ. ಅಲ್ಲಿದ್ದಾಗಲೂ ಅವರು ತಮ್ಮ ಪಿಳ್ಳಜುಟ್ಟು ಬೋಳಿಸಲಿಲ್ಲ – ಕ್ರಾಪು ಬಿಡಲಿಲ್ಲ. ತ್ರಿಕಾಲ ಸಂಧ್ಯಾವಂದನೆ ಮಾಡುತ್ತಿದ್ದರಂತೆ. ಸ್ವಯಂಪಾಕ ಮಾಡಿಕೊಳ್ಳುತ್ತಿದ್ದರಂತೆ. ಇವತ್ತಿಗೂ ಹಾಗೇ ಇದ್ದಾರೆ. ವಿಲಾಯಿತಿಗೆ ಹೋದವರೆಲ್ಲಾ ಜಾತಿ ಕೆಟ್ಟು ಬರುವುದಿಲ್ಲ ಅಜ್ಜಿ. ಇಲ್ಲೇ ಇರುವ ಎಷ್ಟು ಜನ ಮಾಂಸಾಹಾರ ಮಾಡುವುದಿಲ್ಲ. ಕದ್ದು ಕೆಟ್ಟು ತಿನ್ನುವವರ ಸಂಖ್ಯೆ ನಮ್ಮಲ್ಲಿ ಕಡಿಮೆಯಾಗಿದೆಯೇ?"

"ಇಲ್ಲಪ್ಪಾ ಇಲ್ಲ – 'ಕಲಿಯುಗದ ಮಹಿಮೆ ಕಾಣಬಂತೀಗ' ಎಂದು ದಾಸರಾಯರು ಹಾಡಿದ್ದು ಜ್ಞಾಪಕಕ್ಕೆ ಬರುತ್ತದೆ. ಧರ್ಮ ಕ್ಷಯವಾದರೆ ಲೋಕನಾಶವಾಗುತ್ತದೆ ನಾಣಿ. ಮನೆಗೆ ಕಲ್ಲು ಹೇಗೆ ಅಸ್ತಿಭಾರವೋ ಹಾಗೆ ಲೋಕಕ್ಕೆ ಧರ್ಮ ಅಸ್ತಿಭಾರ. ಜನ ರೆಂಬೆಯ ಮೇಲೆ ನಿಂತುಕೊಂಡು ಬುಡ ಕಡಿದರೆ ಉಳಿಯುತ್ತಾರೆಯೇ? ಧರ್ಮವನ್ನು ನಾವು ರಕ್ಷಿಸಿಕೊಂಡು ಬಂದರೆ, ನಮ್ಮನ್ನು ಧರ್ಮ ರಕ್ಷಿಸುತ್ತದೆ."

"ಧರ್ಮ ಎಂದರೇನಜ್ಜಿ?"

"ನನಗೇನು ಗೊತ್ತೋ ಮಗು. ನಾನೇನು ಓದಿದವಳೇ –

ಕಲಿತವಳೇ? ನಿಮ್ಮಮ್ಮನ್ನ ಕೇಳು, ಅವಳು ಧರ್ಮಸೂಕ್ಷ್ಮ ತಿಳಿದ ವಳು – ನಿನಗೆ ಅರ್ಥವಾಗುವ ಹಾಗೆ ಹೇಳುತ್ತಾಳೆ."

ಎಂದು ಕ್ಷಣಕಾಲ ಆಲೋಚಿಸಿ

"ಅವಳನ್ನ ಕೇಳಬೇಕಾದ ಅವಶ್ಯಕವೇ ಇಲ್ಲ ನಾಣಿ. ಅವಳ ಜೀವನ ನೋಡು. ಅದೇ ಧರ್ಮ. ಸಾವಿರ ಪುಸ್ತಕ ಓದಿ ನಾವು ತಿಳಿಯಲಾಗದ ಸತ್ಯವನ್ನು ರುಕ್ಕೂ ಒಂದು ಕೃತಿ ತಿಳಿಸಿಕೊಡುತ್ತದೆ. ಅದಕ್ಕೇಪ್ಪ ನಿನಗೆ ನಾನು ನಾರಿ ಸಾರಿ ಹೇಳುವುದು. ಯಾವ ಕಾರಣಕ್ಕೂ ರುಕ್ಕೂ ಮನಸ್ಸಿಗೆ ವ್ಯಥೆಯುಂಟುಮಾಡಬೇಡ ಎಂದು."

"ಅಮ್ಮನ ಮನಸ್ಸಿಗೆ ನಾನು ವ್ಯಥೆಯನ್ನುಂಟುಮಾಡುತ್ತೀ ನೆಯೇ ಅಜ್ಜಿ."

"ಇಲ್ಲಾನ್ನು. ಒಂದೊಂದು ಸಲ ಕೆಟ್ಟ ಹಟಮಾಡುತ್ತೀಯಪ್ಪ. ತಪ್ಪು ನಿನ್ನದಲ್ಲ – ನೀನು ಮಗುವಾಗಿದ್ದಾಗ ಅತಿಮುದ್ದು ಮಾಡಿ ಕೆಡಿಸಿದವಳು ನಾನು. ನೀನು ತಪ್ಪುಮಾಡಿದರೆ ಶಿಕ್ಷೆ ನನಗಾಗಬೇಕು."

"ನಾನು ತಪ್ಪೂ ಮಾಡುವುದಿಲ್ಲ – ನೀನು ಶಿಕ್ಷೆಯೂ ಅನುಭವಿಸ ಬೇಡ."

"ಅಯ್ಯೋ ನನ್ನ ಕಂದ"

ಎಂದು ಗೋದಮ್ಮನವರು ನಾಣಿಯ ಕೆನ್ನೆ ಮುಟ್ಟಿ ದೃಷ್ಟಿ ತೆಗೆದರು. ಅಜ್ಜಿ ಪ್ರಸನ್ನವಾಗಿದ್ದುದನ್ನು ಕಂಡು, ತನ್ನ ನಿವೇದನೆಯ ನ್ನರ್ಪಿಸಲು ಇದೇ ತಕ್ಕ ಸಮಯವೆಂದು ನಾಣಿ ಗ್ರಹಿಸಿ

"ಅಣ್ಣ ಹೇಳಿದ ಹಾಗೇ ಮಾಡಲೇನಜ್ಜಿ."

"ನಿನಗಿಷ್ಟವಿಲ್ಲವೆಂದು ಹೇಳಿದೆಯಲ್ಲ."

"ಚಿಂತೆಯಿಲ್ಲ – ನಿಮ್ಮ ಮನಸ್ಸಿಗೆ ಬೇಸರವಾಗದಿದ್ದರೆ ಸಾಕು."

"ನಾಣಿ – ನಿನ್ನ ಸುಖ – ನಿನ್ನ ಅಭ್ಯುದಯ ಬಿಟ್ಟು ನಮಗೇನಿದೆ ಹೇಳು. ನಿನ್ನ ಮನಸ್ಸಿಗೆ ಬೇಸರಮಾಡಿ ನಾವು ಏನು ಸಾಧಿಸ ಬೇಕಾಗಿದೆ. ಲಾ ಪರೀಕ್ಷೆ ಬೇಡವಾದರೆ ಇನ್ನೇನು ಓದುತ್ತೀ ಹೇಳು."

"ಸೋಷಿಯಾಲಜಿ ಓದಬೇಕೊಂತಿದ್ದೀನಜ್ಜಿ – ಅದಕ್ಕೆ

ಬೊಂಬಾಯಿಗೆ ಹೋಗಬೇಕು."

" ಮೈಸೂರಿನಲ್ಲಿಯೇ ಓದುವುದಕ್ಕಾಗುವುದಿಲ್ಲವೇ ? "

" ಸಾಧ್ಯವಿಲ್ಲ. ಬೊಂಬಾಯಿಯಲ್ಲಿ ಅದಕ್ಕಾಗಿಯೇ ಬೇರೆ ಕಾಲೇಜು ಸ್ಥಾಪಿಸಿದ್ದಾರೆ. ಅಲ್ಲಿ ಓದು ಮುಗಿಸಿದ ಕೂಡಲೆ ದೊಡ್ಡ ಕೆಲಸವೂ ಸಿಕ್ಕುತ್ತದೆ."

" ಆಗಲಿ ಯೋಚನೆ ಮಾಡೋಣ "

ಎಂದು ಗೋದಮ್ಮ ಹೇಳಿದರು.

ತನ್ನ ಸಂಧಾನ ಅರ್ಧ ಸಫಲವಾದುದಕ್ಕೆ ನಾಣಿ ಹರ್ಷಗೊಂಡ.

ಶ್ರೀದೇವಿ ಸ್ವಲ್ಪವೂ ಉತ್ಪ್ರೇಕ್ಷೆ ಮಾಡಿರಲಿಲ್ಲ.

ನಾಗೇಶರಾಯರ ಮನೆಯಲ್ಲಿ ಶ್ರೀದೇವಿ ಓಡಿಯಾಡುತ್ತಿದ್ದುದನ್ನು ನೋಡಿದವರು ಅವಳೇ ಮನೆಯ ಮಗಳು ಎಂದು ಭಾವಿಸುತ್ತಿದ್ದರು.

ಶ್ರೀದೇವಿ ತನ್ನ ಸರಸ ಸೌಜನ್ಯದಿಂದ ಸೋನಾಬಾಯಿಯ ಹೃದಯ ಗೆದ್ದಿದ್ದುದಲ್ಲದೆ ಅವರಿಗೆ ಹಲವು ಬಗೆಯಲ್ಲಿ ನೆರವಾಗಿದ್ದಳು. ರಾಮು ಊಟ ಮಾಡಿಕೊಂಡು ಕಛೇರಿಗೆ ಹೊರಟು ಹೋದ ಮೇಲೆ ಶ್ರೀದೇವಿ ಬಂದು ಸೋನಮ್ಮನವರ ಮನೆಯಲ್ಲಿ ಕೂಡುವುದು ವಾಡಿಕೆಯಾಗಿತ್ತು. ಅವರಿಬ್ಬರ ಪರಿಚಯ ಬೆಳೆದು ಗಾಢವಾದ ಸ್ನೇಹ, ವಿಶ್ವಾಸಗಳಿಗೆ ಎಡೆ ಮಾಡಿ ಕೊಟ್ಟಿತ್ತು. ಸೋನಾಬಾಯಿಯವರ ಮನೆಗೆಲಸಗಳಲ್ಲಿಯೂ ಶ್ರೀದೇವಿ ಸಹಾಯ ಹಸ್ತ ನೀಡುತ್ತಿದ್ದಳು. ಸಂಜೆಗೆ ಮಗನನ್ನು ನಿರೀಕ್ಷಿಸುವುದು ಸೋನಮ್ಮನವರ ವಾಡಿಕೆಯಾಗಿತ್ತು. ಸರ್ವೋತ್ತಮ ಮನೆಗೆ ಬರುವುದರೊಳಗಾಗಿ ಶ್ರೀದೇವಿಯೇ ತಿಂಡಿ ಕಾಫಿ ಮಾಡಿಟ್ಟು ತನ್ನ ಮನೆಗೆ ಹಿಂದಿರುಗುತ್ತಿದ್ದಳು.

ಶ್ರೀದೇವಿಯನ್ನು ಸೋನಾಬಾಯಿ ಪ್ರೀತಿಸುವುದಕ್ಕೆ ಒಂದು ಪ್ರಬಲವಾದ ಕಾರಣವಿತ್ತು. ಸೋನಾಬಾಯಿಗೆ ಆದುದು ಹತ್ತು ಮಕ್ಕಳು. ಮಕ್ಕಳು ಬೆಳೆದು ಬೆಳೆದು ಮೃತ್ಯುವಶರಾಗಿದ್ದರು. ಹೆತ್ತ ಮಕ್ಕಳನ್ನೆಲ್ಲಾ ಚಿತೆಯ ಮೇಲಿಟ್ಟಿದ್ದ ತಾಯಿಯ ಕರುಳು ಬೆಂದು

ಹೋಗಿತ್ತು. ಗುರುತು ಕಂಡ – ಗುರುತು ಕಾಣದ ದೇವರುಗಳಿಗೆಲ್ಲಾ ಹರಕೆ ಹೊತ್ತು ಸೋನಾಬಾಯಿ ಮಗ ಸರ್ವೋತ್ತಮನನ್ನು ಬದುಕಿಸಿ ಕೊಂಡಿದ್ದರು. ಮನೆಯಲ್ಲಿ ಹೆಣ್ಣು ಮಕ್ಕಳಿಲ್ಲವಲ್ಲ ಎಂಬ ಕೊರಗು ಸೋನಾಬಾಯಿಯನ್ನು ಸದಾ ಕಾಡುತ್ತಿತ್ತು. ಹತ್ತು ಮಕ್ಕಳಲ್ಲಿ ನಾಲ್ಕು ಜನ ಹೆಣ್ಣು ಮಕ್ಕಳನ್ನು ಮಣ್ಣುಪಾಲು ಮಾಡಿದುದನ್ನು ಅವರು ಮರೆಯಲು ಸಾಧ್ಯವಾಗಿರಲಿಲ್ಲ. ಸೋನಾಬಾಯಿ ಅಣಗದ ನೋವು – ತೀರದ ದುಃಖದಲ್ಲಿ ಕೊರಗುತ್ತಿದ್ದಾಗ ರಾಮು ಅವರ ಮನೆಯ ಪಕ್ಕಕ್ಕೆ ಬಾಡಿಗೆಗೆ ಬಂದ. ಸೋನಾಬಾಯಿಗೂ ಶ್ರೀದೇವಿಗೂ ಪರಿಚಯವಾಯಿತು. ಕಾಲ ಕ್ರಮೇಣ .ಸೋನಾಬಾಯಿ ಶ್ರೀದೇವಿ ಯನ್ನು ಪರಕೀಯಳಂತೆ ಕಾಣದೆ ಸ್ವಂತ ಮಗಳೆಂದು ಭಾವಿಸ ತೊಡಗಿದರು.

ಸರ್ವೋತ್ತಮನೇ ಸೋನಾಬಾಯಿಯವರ ಸರ್ವಸ್ವ. ಅವರ ದುರಂತ ಬಾಳಿನ ಅಮೃತಬಳ್ಳಿ.

ಒಬ್ಬನೇ ಮಗನಾಗಿದ್ದರೂ ಸರ್ವೋತ್ತಮ ಸದಾ ತಾಯಿಯ ಮುಂದೆ ಕೂಡುವಂತಿರಲಿಲ್ಲ. ಅವನು ಕಾಲೇಜ್ ಶಿಕ್ಷಣ ಮುಗಿಸಿ ದೊಡನೆಯೇ ಏರ್ ಸೆಲೆಕ್ಷನ್ ಆಯಿತು. ಟ್ರೈನಿಂಗ್ ಅವಧಿ ಮುಗಿ ದೊಡನೆಯೇ ಪೈಲಟ್ ಲೈಸೆನ್ಸ್ ಸಿಕ್ಕಿತು.

ಸಂಜೆಗೆ ವಿಮಾನದಿಂದಿಳಿದೊಡನೆಯೇ ಸರ್ವೋತ್ತಮ ನೇರವಾಗಿ ಮನೆಗೆ ಬಂದು, ಬಟ್ಟೆ ಬದಲಾಯಿಸಿಕೊಂಡು ಗಾಳಿವಿಹಾರಕ್ಕೋ ಸಿನೀಮಾಕ್ಕೋ ಹೋಗುತ್ತಿದ್ದ. ಮನೆ ಬಿಟ್ಟು ಹೋದ ಮಗ ಮನೆಗೆ ಬಂದು ಮುಖ ತೋರಿಸುವವರೆಗೆ ಸೋನಾಬಾಯಿಯವರ ಎದೆ ಡವ ಗುಟ್ಟುತ್ತಲೇ ಇರುತ್ತಿತ್ತು.

ರಾಮೂಗೂ ಸರ್ವೋತ್ತಮನಿಗೂ ಸ್ನೇಹ ಬೆಳೆಯಲು ತಡ ವಾಗಲಿಲ್ಲ. ಆಫೀಸ್ ಮುಗಿದೊಡನೆಯೇ ರಾಮುವೂ ನೇರವಾಗಿ ಮನೆಗೆ ಬರುತ್ತಿದ್ದ. ಸರ್ವೋತ್ತಮ ಅವನನ್ನು ಹುಡುಕಿಕೊಂಡು ಬಂದು ಜತೆಯಲ್ಲಿ ಕರೆದುಕೊಂಡು ಹೋಗುವನು.

ಒಂದು ದಿನ ಸರ್ವೋತ್ತಮನನ್ನು ರಾಮು ಕೇಳಿದ.

"ಎಲ್ಲಾ ಸರಿ, ಸರ್ವೋತ್ತಮರಾವ್. ಈ ಏರ್ ಸರ್ವಿಸ್ ಏಕೆ ಸೇರಿದಿರಿ. ನಿಮ್ಮ ತಾಯಿಯವರ ಸ್ಥಿತಿ ನೋಡಿದರೆ ಕಲ್ಲುಗಳು ಕೂಡ ಕರಗುತ್ತವಪ್ಪ. ನೀವು ಮನೆಗೆ ಬರುವವರೆಗೆ ಅವರ ಪಾಡು ಬೇಡ."

"ಅಕ್ಕ ಶ್ರೀದೇವಿ ಇರುವುದು ನನಗೆಷ್ಟೋ ನೆಮ್ಮದಿ ರಾಮು ರಾಯರೇ. ಅವರ ಸಹವಾಸದಿಂದ ನಮ್ಮ ತಾಯಿಯವರ ಆತಂಕ ಕಡಿಮೆಯಾಗಿದೆ."

"ನೀವು ಕೆಲಸಕ್ಕೆ ಸೇರಬೇಕಾದ ಅಗತ್ಯವೇ ಇರಲಿಲ್ಲಪ್ಪ. ತಂದೆ ಸಾಕಷ್ಟು ಗಳಿಸಿದ್ದಾರೆ. ಸುಖವಾಗಿ ಊಟ ಮಾಡಿಕೊಂಡಿರಬಹು ದಾಗಿತ್ತು."

"ಕೂತು ತಿನ್ನುವವನಿಗೆ ಕುಡಿಕೆ ಹಣ ನಾಲುತ್ತದೆಯೇ ರಾಮುರಾಯರೇ. ಕಲಿಯುವ ವಯಸ್ಸಿನಲ್ಲಿ ಕಲಿಯಬೇಕು – ಸಂಪಾ ದಿಸುವ ವಯಸ್ಸಿನಲ್ಲಿ ಸಂಪಾದಿಸಬೇಕು. ನಾನು ಕಾಲೇಜಿನಲ್ಲಿ ಓದು ತ್ತಿರುವಾಗಲೇ ಏರ್ ಪೈಲಿಟ್ ಆಗಬೇಕೆಂದು ನಿರ್ಧರಿಸಿಕೊಂಡೆ. ಇಂದೆಂಥ ವಿಲಕ್ಷಣ ಆಸೆ ಎಂದು ನೀವು ಆಶ್ಚರ್ಯಪಡಬಹುದು. ಅದಕ್ಕೆ ಕಾರಣವಿದೆ. ಇಂದಲ್ಲ ನಾಳೆ ನಮ್ಮ ದೇಶ ಸ್ವತಂತ್ರವಾಗುತ್ತದೆ. ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾದರೆ ನಮ್ಮವರು ಬಹಳ ಕಷ್ಟ ಪಡಬೇಕು. ನಮ್ಮನ್ನು ಬಿಟ್ಟು ಹೋಗುವ ಬ್ರಿಟಿಷರು ದೇಶವನ್ನು ಅನಾಯಕಮಾಡಿ ಹೋಗುವುದರಲ್ಲಿ ಸಂದೇಹವಿಲ್ಲ. ದೇಶದ ಒಳ ಶತ್ರುಗಳು, ಹೊರ ಶತ್ರುಗಳನ್ನು ನಾವು ಎದುರಿಸಿ ಈ ಸ್ವಾತಂತ್ರ್ಯ ರಕ್ಷಿಸಿಕೊಳ್ಳಬೇಕು. ಬ್ರಿಟಿಷರ ಕೈಹಿಡಿತ ತಪ್ಪಿದ ಭಾರತದ ಮೇಲೆ ಅಮೆರಿಕಾ, ರಷ್ಯಾ ಎರಡೂ ತಮ್ಮ ಬಾಹು ಚಾಚಲು ಹವಣಿಸುತ್ತವೆ. ಆತ್ಮರಕ್ಷಣೆಗಾಗಿ ಭಾರತ ದೊಡ್ಡ ಸೈನ್ಯ ಕಟ್ಟುವುದು ಅನಿವಾರ್ಯ ವಾಗುತ್ತದೆ. ನಾಳಿನ ಯುದ್ಧ ಭೂಮಿಯ ಯುದ್ಧವೂ ಅಲ್ಲ – ಜಲ ಯುದ್ಧವೂ ಅಲ್ಲ. ಅದು ಆಕಾಶದಲ್ಲಿ ನಡೆಯುವ ಯುದ್ಧವಾಗುತ್ತದೆ. ಸ್ವತಂತ್ರ ಭಾರತಕ್ಕೆ ದಕ್ಷರಾದ ತಂತ್ರಜ್ಞರ ಅವಶ್ಯಕತೆ ಎಷ್ಟಿದೆಯೆಂದು

ಹೇಳಬೇಕಾಗಿಲ್ಲ. ಏರ್ ಪೈಲಟ್‌ಗಳ ಅಗತ್ಯವೂ ಮಿಗಿಲಾಗಿದೆ. ಬ್ರಿಟಿಷರು ಅನಾಯಾಸವಾಗಿ ನಮಗೆ ಶಿಕ್ಷಣ ಕೊಡುವಾಗ ನಾವೇಕೆ ಈ ಅವಕಾಶದ ಸದುಪಯೋಗ ಪಡೆಯಬಾರದು. ಯುದ್ಧ ಸಂಭವಿಸಿದರೆ ಮಾತೃಭೂಮಿಯ ರಕ್ಷಣೆ ನಮ್ಮ ಪಾಲಿಗೆ ಸೇರುತ್ತದೆ; ಶಾಂತಿ ಕಾಲದಲ್ಲಿ ಸಿವಿಲ್ ಏವಿಯೇಷನ್ ಇದ್ದೇ ಇದೆ."

"ನಿಮ್ಮ ತಾಯಿ ಹತ್ತು ಮಕ್ಕಳನ್ನು ಕಳೆದು ಕೊಂಡಿದ್ದಾರೆ ಸರ್ವೋತ್ತಮ."

"ನನ್ನನ್ನೂ ಹಾಗೆ ಕಳೆದುಕೊಳ್ಳುವ ಸಂಭವವಿಲ್ಲ ರಾಮರಾವ್. ನಾನು ಸತ್ತರೆ ಯುದ್ಧರಂಗದಲ್ಲಿ ಸಾಯುತ್ತೇನೆ – ಸಾಯುವ ಮುನ್ನ ಸಾವಿರಾರು ಶತ್ರುಗಳನ್ನು ಆಹುತಿ ತೆಗೆದುಕೊಂಡೇ ಸಾಯುತ್ತೇನೆ."

"ನಮ್ಮದು ಗಾಂಧೀ ನಾಡು–ಶಾಂತಿಯೇ ನಮ್ಮ ಬೀಜಮಂತ್ರ. ಭಾರತ ಎಂದಿಗೂ ಯಾರ ಮೇಲೂ ಯುದ್ಧ ಹೂಡುವ ಸಂಭವ ವಿಲ್ಲವಲ್ಲ !"

"ನಿಜ. ಆದರೆ ಇತರರೂ ಹಾಗೇ ಇರಬೇಕಲ್ಲ. ಭಾರತವನ್ನು ಕಬಳಿಸಲು ಎಷ್ಟೋ ಜನ ಆತುರರಾಗಿದ್ದಾರೆ. ಯುದ್ಧಾಸಕ್ತಿ ನಮಗಿಲ್ಲದಿದ್ದರೂ ನಾವು ಅಜಾಗರೂಕರಾಗಿರಬಾರದು. ನಮ್ಮ ರಕ್ಷಣೆಯ ಸಿದ್ಧತೆ ಮಾಡಿಕೊಂಡಿರಬೇಕು."

"ನೀವು ಬರೇ ಪೈಲಟ್ ಅಲ್ಲ ಸರ್ವೋತ್ತಮ್ – ಪೇಟ್ರಿಯಟ್ ಪೈಲಟ್ (Patriot Pilot)"

"ನಾನೊಬ್ಬನೇ ಹೀಗಿಲ್ಲ ರಾಮರಾಯರೇ. ನಮ್ಮ ಸೈನ್ಯ, ನೌಕಾದಳ, ವಿಮಾನದಳವೆಲ್ಲಾ ಇದೇ ಭಾವನೆ ತಳೆದಿದೆ. ಭಾರತ ಸ್ವತಂತ್ರವಾಗಬೇಕೆಂಬ ಆಕಾಂಕ್ಷೆ ಸೈನ್ಯ, ನೌಕಾದಳ, ವಿಮಾನದಳದಲ್ಲಿ ಎಷ್ಟು ಉತ್ಕಟವಾಗಿದೆಯೆಂಬುದನ್ನು ನಾನು ವರ್ಣಿಸಲಾರೆ."

"ರಾಜಕಾರಣಿಗಳಂತೆ ಮಾತನಾಡುತ್ತಿರುವಿರಲ್ಲಾ !"

"ದೇಶದ ಹಿತ ಕುರಿತು ಯೋಚಿಸುವುದು ರಾಜಕಾರಣಿಯ ವಿಶಿಷ್ಟ ಹಕ್ಕೇನು ? ವಿದ್ಯಾರ್ಥಿ, ವಕೀಲ, ಡಾಕ್ಟರು, ಸರ್ಕಾರಿ

ನೌಕರರು, ವ್ಯಾಪಾರಿಗಳು, ಕಲಾವಿದರು, ಸಾಹಿತಿಗಳು ಸರ್ವರಿಗೂ ಸೇರಿದ ವಿಷಯವಲ್ಲವೇ ಇದು."

"ಒಳ್ಳೆಯದಪ್ಪ. ದೇಶದ ದೊಡ್ಡ ವಿಷಯ ಬಿಟ್ಟು ನಮ್ಮ ನಮ್ಮ ವಿಷಯಕ್ಕೆ ಬರೋಣ. ನಿಮ್ಮ ತಾಯಿ ಏನಾದರೂ ಹೇಳಿದರೇ?"

"ಯಾವ ವಿಷಯ?"

"ನಿಮ್ಮ ಲಗ್ನದ ವಿಷಯ."

"ಕುಳಿತರೆ ನಿಂತರೆ ಅಮ್ಮನಿಗೆ ಅದೇ ಧ್ಯಾನವಾಗಿದೆ. ನಿತ್ಯವೂ ಆ ವಿಷಯ ಮಾತನಾಡುತ್ತಾಳೆ."

"ಮೊನ್ನೆ ನನ್ನ ಹೆಂಡತಿ ಮಂಡ್ಯಕ್ಕೆ ಹೋಗಿ ಬಂದಳು."

"ನಾನು ಬಲ್ಲೆ."

"ನಮ್ಮ ಅಕ್ಕನ ಮಗಳು ಒಂದು ಹುಡುಗಿ ಇದೆ. ಕಾಲೇಜಿನಲ್ಲಿ ಓದುತ್ತಿದೆ. ಈ ಸಂಬಂಧ ಕೂಡಿಸಬೇಕೆಂದು ನನ್ನ ಹೆಂಡತಿ ತುಂಬ ಉತ್ಸುಕಳಾಗಿದ್ದಾಳೆ."

"ಅತ್ತ ತಾಯಿ ಮಾತು – ಇತ್ತ ಸ್ನೇಹಿತರ ಮಾತು, ಎರಡೂ ಮೀರುವ ಧೈರ್ಯ ನನಗಿಲ್ಲ ರಾಮರಾಯರೇ. ಚಂದ್ರಮಂಡಲದವರೆಗೆ ಬೇಕಾದರೆ ವಿಮಾನ ತೆಗೆದುಕೊಂಡು ಹೋಗಬಲ್ಲೆ – ಆದರೆ ತಾಯಿ ಯೆದುರಿಗೆ ದಿಟ್ಟತನದಿಂದ ಮಾತನಾಡುವ ಧೈರ್ಯವಾಗಲೊಲ್ಲದು."

"ಇದೇ ನಿಜವಾದ ಸಂಸ್ಕೃತಿ ಸರ್ವೋತ್ತಮರಾವ್....ನೀವು ಒಂದೆರಡು ದಿನ ರಜಾ ತೆಗೆದುಕೊಂಡು, ನನ್ನ ಜತೆ ಮಂಡ್ಯದವರೆಗೆ ಬರುವುದಕ್ಕೆ ಸಿದ್ಧವಾಗಬೇಕು."

"ಏಕೆ?"

"ಹೆಣ್ಣು ನೋಡುವುದಕ್ಕೆ."

"ಈ ಶಾಸ್ತ್ರವಿಧಿಗಳೇತಕ್ಕೆ ರಾಮರಾಯರೇ. ಅಮ್ಮನ್ನ ಕರೆದು ಕೊಂಡು ಹೋಗಿ. ಅವಳು ಒಪ್ಪಿದರಾಯಿತು. ಅವಳು ಒಂದು ಗುಂಡುಕಲ್ಲು ಒಪ್ಪಿದರೂ ನಾನು ಲಗ್ನವಾಗುವುದಕ್ಕೆ ಸಿದ್ಧವಾಗಿದ್ದೇನೆ."

"ಹಾಗಲ್ಲ – ನೀವೂ ನೋಡಿರಬೇಕು. ನನ್ನ ಅಕ್ಕ – ಭಾವ

ನಿಮ್ಮನ್ನೂ ನೋಡಬೇಕು. ಪರಸ್ಪರ ಮುಖ ಪರಿಚಯವೇ ಇಲ್ಲದೆ ಮದುವೆ ಕುದುರಿಸುವುದು ನ್ಯಾಯವಲ್ಲ."

"ವರಪರೀಕ್ಷೆ ಆಗಬೇಕೂನ್ನಿ."

"ಹಾಗಲ್ಲಪ್ಪ. ನನ್ನ ಅಕ್ಕ ದೊಡ್ಡ ಜೀವ. ಅನಾಥನಾಗಿದ್ದ ನನ್ನ ಕೈಹಿಡಿದು ಕಾಪಾಡಿದವಳು ಎಂದು ನಾನವಳ ಪ್ರಶಂಸೆಮಾಡುತ್ತಿಲ್ಲ. ನೂರಾರು ಮನೆಗಳು ಅವಳ ಹೆಸರು ಹೇಳಿ ದೀಪ ಹಚ್ಚುತ್ತಿವೆ. ಅವಳ ಚರಿತ್ರೆ ನಾನು ಹೇಳಿದರೆ ಕಟ್ಟುಕಥೆ ಹೇಳಿದ ಹಾಗಾಗುತ್ತದೆ. ಲೋಕ ದಲ್ಲಿ ಇಂಥ ಒಂದು ವ್ಯಕ್ತಿ ಇದೆಯೆಂದು ನಂಬುವುದೂ ಕಷ್ಟವಾಗುತ್ತದೆ. ಅವಳ ಇಬ್ಬರು ಹೆಣ್ಣುಮಕ್ಕಳಲ್ಲಿ ಕಮಲನ ಜೀವನ ದುರಂತದಲ್ಲಿ ಪರಿಣಾಮವಾಯಿತು. ಎರಡನೆಯ ಮಗಳು ಪದ್ಮ ಸರಿಯಾದ ಕಡೆ ಸೇರಿ, ನೆಮ್ಮದಿಯಾಗಿದ್ದರೆ ನಾಕು ಎಂದು ಅಕ್ಕ ಬಯಸುತ್ತಿದ್ದಾಳೆ."

"ನಿಮ್ಮ ಅಕ್ಕಾವರ ವಿಷಯ ಅಮ್ಮ ಬಹಳ ಹೇಳಿದ್ದಾಳೆ ರಾಮರಾಯರೇ. ಅಂಥವರ ಮಗಳು ನಮ್ಮ ಮನೆ ಸೊಸೆಯಾಗಿ ಬರುವುದು ನಮ್ಮ ಪುಣ್ಯವೆಂದು ಅಮ್ಮ ಭಾವಿಸಿದ್ದಾಳೆ."

"ದೈವಾನುಕೂಲ ಒದಗಿದ ಹಾಗೆ ಕಾಣುತ್ತದೆ. ನೀವು ದೊಡ್ಡ ಮನಸ್ಸು ಮಾಡಿ ಎರಡುಮೂರು ದಿನ ರಜಾ ತೆಗೆದುಕೊಂಡರೆ ಲಗ್ನ ಪತ್ರಿಕೆ ಮುಗಿಸಿಕೊಂಡೇ ಬರಬಹುದು."

"ಹಾಗೇ ಆಗಲಿ. ಅಮ್ಮ ಎಂದು ಹೇಳಿದರೆ ಅಂದು ಹೊರಡಲು ನಾನು ಸಿದ್ಧನಾಗುತ್ತೇನೆ. ನಮ್ಮ ಆಫೀಸರ್ ಕಾರಿದೆ. ಅದನ್ನು ತರುತ್ತೇನೆ. ಎಲ್ಲರೂ ಕಾರಿನಲ್ಲೇ ಹೋಗಿಬರೋಣ."

"ಸಂತೋಷ – ಹಾಗೆಯೇ ಆಗಲಿ."

ಎಂದು ರಾಮರಾಯ ಸಮ್ಮತಿಸಿದ.

೧೪

ಕೊನೆಗೂ ನಾರಾಯಣಸ್ವಾಮಿಯೇ ಗೆದ್ದ.

ರುಕ್ಮಿಣಿ ಮಗನಿಗೆ ವಿರೋಧವಾಗಲಿಲ್ಲ. ಗೋದಮ್ಮನವರು ಮೊಮ್ಮಗನ ಪರ ವಕೀಲಿ ವಹಿಸಿ ಮಾಧವರಾಯನನ್ನು ಒಪ್ಪಿಸಿದರು.

"ರಾಮು, ಶ್ರೀದೇವಿ ನಿನ್ನ ಭಾವನಾಗುವವರನ್ನು ಕರೆದು ಕೊಂಡು ಬರುತ್ತಾರಲ್ಲಯ್ಯಾ"

ಎಂದು ಮಾಧವರಾಯ ಮಗನಿಗೆ ಸೂಚಿಸಿದ.

"ಬರಲಿ. ಅವರು ಬಂದು ಹೋದ ಮೇಲೇ ನಾನು ಮುಂಬಯಿಗೆ ಪ್ರಯಾಣಮಾಡುತ್ತೇನೆ."

ಎಂದು ನಾರಾಯಣಸ್ವಾಮಿ ಒಪ್ಪಿಗೆಯನ್ನಿತ್ತ.

ಮಾಧವರಾಯನಿಗೂ ರುಕ್ಮಿಣಿಗೂ ಒಂದೇ ಸಮನೆ ಗುಂಡಾ ಚಾರ್ಯರ ನೆನಪು ಬರತೊಡಗಿತು.

"ಆಚಾರ್ರು ಏನಾದರೋ ಗೊತ್ತಾಗಲಿಲ್ಲ. ಬಹಳ ದಿವಸಗಳಿಂದ ಅವರ ಭೇಟಿಯೇ ಇಲ್ಲ."

"ಅವರಿಗೇನು ಇದ್ದಲ್ಲಿಯೇ ಊರು – ನಿಂತಲ್ಲಿಯೇ ಮನೆ."

"ಈ ಸಮಯದಲ್ಲಿ ಅವರಿದ್ದರೆ ಚೆನ್ನಾಗಿತ್ತು. ಲಗ್ನ ನಿಶ್ಚಯಿ ಸುವುದಕ್ಕೆ. ನಾಳೆ ಲಗ್ನಪತ್ರಿಕೆ ಮಾಡಿಸುವುದಕ್ಕೆ ಅವರಿದ್ದಿದ್ದರೆ ಮನೆ ಯವರು ಇದ್ದಹಾಗೆ ಇರುತ್ತಿತ್ತು."

"ಪುಣ್ಯಾತ್ಮ ತ್ರಿಲೋಕ ಸಂಚಾರಿ. ಕಾಶಿಯಲ್ಲಿದ್ದಾರೆಯೋ ರಾಮೇಶ್ವರದಲ್ಲಿದ್ದಾರೆಯೋ? ಸದ್ಯಕ್ಕೆ ಇನ್ನು ಯಾರನ್ನಾದರೂ ಕರೆದು ಕೆಲಸ ಮುಗಿಸಬೇಕು. ರಾಮಣ್ಣಾಚಾರ್ಯರಿಗೆ ನೀವು ಒಂದು ಕಾಗದ ಬರೆದರೆ ಬಂದುಬಿಡುತ್ತಾರೆ."

"ಅವರು ಬರುವುದು ನನಗೆ ಅನುಮಾನ ರುಕ್ಮಿಣಿ."

"ಏಕೆ?"

"ಕಮಲೂ ಮದುವೆ ಅವರೇ ಮಾಡಿಸಿದವರು."

"ನಮ್ಮ ಹಣೆಯ ಬರಹಕ್ಕೆ ಅವರು ಹೊಣೆಯೇ?"

"ಇಲ್ಲ – ಸರಿ. ಆದರೆ ಅವರು ಒಪ್ಪಿಕೊಳ್ಳಬೇಕಲ್ಲ!"

"ನೀವು ಮೈಸೂರಿಗೆ ಹೋಗಿ ಅವರನ್ನು ಕಂಡುಬಂದಿದ್ದರಾಗಿತ್ತು."

"ಅಗತ್ಯವಾಗಿ ಹೋಗಿ ಬರುತ್ತೇನೆ. ಪಟ್ಟಣಕ್ಕೂ ಹೋಗಬೇಕಾಗಿದೆ. ಎರಡು ಕೆಲಸವೂ ಒಟ್ಟಿಗೆ ಆಗುತ್ತದೆ."

ಮನೆಯ ವ್ಯವಸ್ಥೆ ನೋಡಿಕೊಳ್ಳುವುದಾಗಿ ರುಕ್ಮಿಣಿ ಭರವಸೆಯಿತ್ತಳು. ಮಾಧವರಾಯ ರಾಮಣ್ಣಾಚಾರ್ಯರನ್ನು ಕಾಣಲು ಮೈಸೂರಿಗೆ ಪ್ರಯಾಣ ಬೆಳಸಿದ.

ಆಚಾರ್ಯರು 'ಸುಧಾ' ಗ್ರಂಥ ಓದುತ್ತಾ ಕುಳಿತಿದ್ದರು. ಮಾಧವರಾಯನನ್ನು ಆದರದಿಂದ ಸ್ವಾಗತಿಸಿ ಕುಶಲಪ್ರಶ್ನೆ ಮಾಡಿದರು. ಮಾಧವರಾಯ ತಾನು ಬಂದಿದ್ದ ಉದ್ದೇಶವನ್ನು ನಿರೂಪಿಸಲು ಆಚಾರ್ಯರ ಮುಖ ಕಪ್ಪಿಟ್ಟಿತು.

"ಶುಭ ಕೆಲಸಕ್ಕೆ ಕೈಹಾಕಿದ್ದೀರಿ ರಾಯರೇ. ಶ್ರೀರಾಮದೇವರು ಎಲ್ಲಾ ಜಯಪ್ರದ ಮಾಡುತ್ತಾನೆ. ಯೋಚನೆ ಮಾಡಬೇಡಿ."

"ನಿಮ್ಮನ್ನು ಕರೆದುಕೊಂಡು ಹೋಗುವುದಕ್ಕೆ ಬಂದೆ ಆಚಾರ್ಯರೇ. ಯಜಮಾನಿಕೆ ನೀವೇ ವಹಿಸಿಕೊಂಡು ಎಲ್ಲಾ ಕೆಲಸ ಕಾರ್ಯಗಳನ್ನೂ ಸಾಂಗವಾಗಿ ಆಗುಮಾಡಿಕೊಡಬೇಕು. ರುಕ್ಮಿಣಿಯ ಅಭಿಲಾಷೆಯೂ ಅದೇ ಆಗಿದೆ."

"ತಮ್ಮ ಮನೆಗೆ ನಾನು ಕರೆಸಿಕೊಂಡು ಬರಬೇಕೇ ರಾಯರೇ. ತೌರುಮನೆಗೆ ಮಗಳು ಹೋಗಬೇಕಾದರೆ ಆಹ್ವಾನಬೇಕೇ? ಆದರೆ ಈ ಸಂದರ್ಭದಲ್ಲಿ ನಾನು ಬರದಿರುವುದೇ ಒಳ್ಳೆಯದು. ಹಳೆಯ ನೆನಪುಗಳು ನನ್ನ ಮನಸ್ಸಿಗೂ ವ್ಯಸನವನ್ನುಂಟುಮಾಡುತ್ತವೆ – ತಮ್ಮ ಮನಸ್ಸಿಗೂ ವ್ಯಸನವನ್ನುಂಟುಮಾಡುತ್ತವೆ. ಎಲ್ಲಕ್ಕೂ ಹೆಚ್ಚಾಗಿ ಕಮಲಮ್ಮನ ಪರಿಸ್ಥಿತಿಯನ್ನು ನಾವು ಗಮನಿಸಬೇಕು."

"ನಿಮ್ಮ ಸ್ಥಾನದಲ್ಲಿ ನಾವು ಬೇರೆ ಯಾರನ್ನೂ ಯೋಚಿಸುವುದಕ್ಕೇ ಸಾಧ್ಯವಿಲ್ಲವಾಗಿದೆ ಆಚಾರ್ಯರೇ."

"ಚಿಂತಿಸಬೇಡಿ. ಸರಿಯಾದವರನ್ನು ನಾನು ಗೊತ್ತುಮಾಡಿ ಕೊಡುತ್ತೇನೆ. ನರಸಿಂಹಮೂರ್ತ್ಯಾಚಾರ್ಯರಿದ್ದರೆ ನಾನು ಇದ್ದಂತೆ ಎಂದು ಭಾವಿಸಬಹುದು. ಅವರೂ ದೊಡ್ಡ ವಿದ್ವಾಂಸರು, ಸದಾಚಾರ ಸಂಪನ್ನರು, ತುಂಬಿದ ಸಂಸಾರವಂದಿಗರು. ನಿಮ್ಮಂಥವರ ಆಶ್ರಯ ಅವರಿಗೂ ಬೇಕಾಗಿದೆ. ಮನುಷ್ಯ ಎಲ್ಲಾ ಸರಿ – ಆದರೆ ಸ್ವಲ್ಪ ಆಸೆಬುರುಕ. ಅವರು ನಿರೀಕ್ಷಿಸುವುದಕ್ಕಿಂತಲೂ ಹೆಚ್ಚಾಗಿ ನೀವೇ ಕೊಡುವುದರಿಂದ ಯಾವ ಭಿನ್ನಾಭಿಪ್ರಾಯಕ್ಕೂ ಅವಕಾಶವಿರುವುದಿಲ್ಲ."

"ತಮ್ಮ ಚಿತ್ತ. ನಾನು ಇನ್ನೇನು ಹೇಳಲು ಸಾಧ್ಯ. ವಧು ವೀಕ್ಷಣಕ್ಕೆ ಶನಿವಾರ ಬೀಗರ ಕಡೆಯವರು ಬರುತ್ತಾರಂತೆ. ಅಂದೇ ದಿನ ಚೆನ್ನಾಗಿದ್ದರೆ ಲಗ್ನಪತ್ರಿಕೆ ಮುಗಿಸಿಬಿಡಬೇಕೆಂದಿದ್ದೇನೆ."

"ಅಗತ್ಯವಾಗಿ ಆಗಬಹುದು. ದಿನ ದಿವ್ಯವಾಗಿದೆ."

"ಲಗ್ನ ಶ್ರಾವಣ, ಭಾದ್ರಪದದಲ್ಲಿ ಇಟ್ಟುಕೊಳ್ಳಬಹುದಷ್ಟೆ."

"ವಧೂವರರ ಜಾತಕಗಳು ತಂದಿರುವಿರಾ?"

ಮಾಧವರಾಯ ಜಾತಕಗಳನ್ನು ಆಚಾರ್ಯರ ಕೈಯಲ್ಲಿಟ್ಟ. ಆಚಾರ್ಯರು ಗುಣಿಸಿ ನೋಡಿ

"ಆಶ್ವಯುಜ ಮಾಸದಲ್ಲಿ ಲಗ್ನಗಳು ಚೆನ್ನಾಗಿವೆ. ವಧೂವರರ ಜಾತಕಗಳಿಗೆ ಹೊಂದುವ ಲಗ್ನಗಳು ಆಶ್ವಯುಜ ಮಾಸದಲ್ಲಿಯೇ ಸಿಕ್ಕುವುದು."

"ತಾವೇ ಲಗ್ನ ಇಟ್ಟುಕೊಡಿ."

ರಾಮಣ್ಣಾಚಾರ್ಯರು ಆಶ್ವಯುಜ ಶುದ್ಧದಲ್ಲಿ ಒಂದು ಲಗ್ನ ನಿಶ್ಚಯಿಸಿಕೊಟ್ಟರು. ಮಾಧವರಾಯ ವಿಚಾರಮಾಡುತ್ತಾ

"ಆಚಾರ್ಯರೇ, ವರನ ಜಾತಕ ಹೇಗಿದೆ ?" ಎಂದು ಕೇಳಿದ.

"ಘನವಾಗಿದೆ ಸ್ವಾಮಿ. ಈತ ಒಳ್ಳೆಯ ಅದೃಷ್ಟಶಾಲಿ. ಲಗ್ನವಾದಮೇಲೆ ಈ ಜಾತಕದ ಪೂರ್ಣಕಳೆ ಕಂಡುಬರುವುದು. ನಿಮ್ಮ ಮಗಳದ್ದೂ ಪ್ರಬಲವಾದ ಜಾತಕ. ಹೆಂಡತಿಯ ಜನ್ಮಾಂತರ ಪುಣ್ಯ ಬಲದಿಂದ ಗಂಡನಿಗೆ ತುಂಬ ಯಶಸ್ಸುಂಟಾಗುತ್ತದೆ."

ಮಾಧವರಾಯ ಅನುಮಾನಿಸುತ್ತಲೇ

"ಇನ್ನೂ ಒಂದು ವಿಷಯ ಕೇಳಬೇಕಾಗಿದೆ ಆಚಾರ್ಯರೇ."

"ಕೇಳಿ ಸ್ವಾಮಿ. ನನಗೆ ತಿಳಿದುದನ್ನು ನಿಸ್ಸಂಕೋಚವಾಗಿ ಅರಿಕೆ ಮಾಡಿಕೊಳ್ಳುತ್ತೇನೆ."

"ವರನ ಆಯುರ್ಬಲ ಹೇಗಿದೆ ನೋಡಿ."

ರಾಮಣ್ಣಾಚಾರ್ಯರು ಕೂಡಲೇ ಉತ್ತರ ಕೊಡಲಿಲ್ಲ. ಹಳೆಯ ಪಂಚಾಂಗಗಳ ಕಟ್ಟನ್ನು ಮುಂದಿಟ್ಟುಕೊಂಡು ಸಾವಕಾಶವಾಗಿ ಗುಣಿಸಿ

"ದೀರ್ಘಾಯು ಯೋಗವಿದೆ ಸ್ವಾಮಿ. ವಧು ಸುಮಂಗಲಿಯಾಗಿಯೇ........"

ಮಾಧವರಾಯನ ಮನಸ್ಸು ಹಗುರವಾಯಿತು.

"ಅಪ್ಪಣೆಯಾದರೆ ಬರುತ್ತೇನೆ. ನರಸಿಂಹಮೂರ್ತ್ಯಾಚಾರ್ಯರನ್ನು ಯಾವಾಗ ಕಳುಹಿಸುವಿರಿ ?"

"ನೀವು ಯಾವಾಗ ಕಳಿಸೆಂದರೆ ಆಗ ಕಳಿಸುತ್ತೇನೆ."

"ನಾಳೆಯೇ ಕಳಿಸಿಕೊಡಿ. ಮನೆಯಲ್ಲಿ ಚೆನ್ನಾಗಿ ದೇವರ ಪೂಜೆ ನಡೆಯಲಿ."

ಎಂದು ಹೇಳಿ ಆಚಾರ್ಯರಿಂದ ಬೀಳ್ಕೊಂಡು ಸಂಜೆಗೆ ಪಟ್ಟಣ ಸೇರಿದ.

ಗೌಡರು, ಡಾಕ್ಟರು, ಶೇಷಪ್ಪ ಎಷ್ಟು ಬಲವಂತ ಮಾಡಿದರೂ ಮಾಧವರಾಯ ಪಟ್ಟಣದಲ್ಲಿ ಬಹಳ ಹೊತ್ತು ನಿಲ್ಲಲಾಗಲಿಲ್ಲ. ತನ್ನ ಹಿತೈಷಿಗಳಿಗೆಲ್ಲಾ ಸುದ್ದಿ ತಿಳಿಸಿ, ಎಲ್ಲರನ್ನೂ ಶನಿವಾರದ ಮಹೋತ್ಸವಕ್ಕೆ ಆಹ್ವಾನಿಸಿ ಅದೇ ರಾತ್ರಿ ಪ್ಯಾಸೆಂಜರ್ ಗಾಡಿಯಲ್ಲಿ ಹೊರಟು ಮಂಡ್ಯ ಸೇರಿದ.

ಮಾರನೆಯ ದಿನದಿಂದಲೇ ಮನೆಯಲ್ಲಿ ಸಡಗರ ಆರಂಭವಾಯಿತು. ನರಸಿಂಹಮೂರ್ತ್ಯಾಚಾರ್ಯರು ದೇವರ ಪೆಟ್ಟಿಗೆ ತೆಗೆದುಕೊಂಡು ಬಂದಿಳಿದರು. ಗೌಡರ ಕಡೆಯ ಆಳುಗಳು ಬಾಳೆಯೆಲೆ, ವೀಳೆಯದೆಲೆ, ತರಕಾರಿ, ಬಾಳೆಯಹಣ್ಣು ತಂದು ಹಾಕಲಾರಂಭಿಸಿದರು. ಊರಿನಲ್ಲಿಯೂ ಸುದ್ದಿ ಹರಡಿತು. ಸುನಂದಮ್ಮ ಮಾಧವರಾಯನ ಮನೆಗೆಲಸಕ್ಕೆ ತಮ್ಮ ಮನೆಯ ಆಳನ್ನು ಕಳಿಸಿಕೊಟ್ಟು, ತಾವೂ ಮೇಲಿಂದ ಮೇಲೆ ಬಂದು ವಿಚಾರಿಸಿಕೊಳ್ಳುತ್ತಿದ್ದರು. ಸುತ್ತುಗೆಲಸ ಮಾಡಿಕೊಡುವುದಕ್ಕೆ ಪಂಕಜಮ್ಮ ಟೊಂಕಕಟ್ಟಿ ನಿಂತರು. ನಳಿನಿ ಪದ್ಮನ ಎಡೆಬಿಡಲಿಲ್ಲ. ಪದ್ಮನನ್ನು ಎಷ್ಟು ಕೆಣಕಿ ಗೋಳುಹುಯಿದುಕೊಂಡರೂ ಅವಳಿಗೆ ತೃಪ್ತಿಯಿಲ್ಲ.

ಶನಿವಾರ ಬೆಳಿಗ್ಗೆ ರಾಮು ಎಲ್ಲರನ್ನೂ ಪ್ರಯಾಣ ಹೊರಡಿಸಿದ. ಸರ್ವೋತ್ತಮನೇ ಕಾರು ನಡೆಸಲು ಕುಳಿತ. ಅವನ ಪಕ್ಕದಲ್ಲಿ ರಾಮು ಕುಳಿತ. ಹಿಂದುಗಡೆಯ ಸೀಟಿನಲ್ಲಿ ನಾಗೇಶರಾಯರು, ಸೋನಾಬಾಯಿ, ಶ್ರೀದೇವಿ ಕುಳಿತರು. ಬೆಳಿಗ್ಗೆ ಎಂಟು ಗಂಟೆಗೆ ಬೆಂಗಳೂರು ಬಿಟ್ಟ ಕಾರು ಹತ್ತು ಗಂಟೆಗೆ ಮಂಡ್ಯ ಸೇರಿತು.

ಮಾಧವರಾಯ, ರುಕ್ಮಿಣಮ್ಮ, ನಾರಾಯಣಸ್ವಾಮಿ, ನರಸಿಂಹಮೂರ್ತ್ಯಾಚಾರ್ಯರು, ನಳಿನಿ ಬೀಗರನ್ನು ಬಾಗಿಲಿನಲ್ಲಿಯೇ ಸ್ವಾಗತಿಸಿ ಒಳಕ್ಕೆ ಕರೆದೊಯ್ದರು. ರಾಮು ಪರಸ್ಪರ ಪರಿಚಯ ಮಾಡಿಕೊಟ್ಟ.

ಮಾಧವರಾಯನ ದಿವಾನ್‌ಖಾನೆಯಲ್ಲಿ ನಾಗೇಶರಾಯರು, ಸರ್ವೋತ್ತಮ ಕುಳಿತರು. ರುಕ್ಮಿಣಮ್ಮ ಬೀಗಿತ್ತಿಯನ್ನು ಒಳಕ್ಕೆ

ಕರೆದೊಯ್ದು ಅತ್ತೆ, ಕಮಲನ ಪರಿಚಯ ಮಾಡಿಕೊಟ್ಟಳು.

ಮಾಧವರಾಯ, ನಾಗೇಶರಾಯರು ಮಾತನಾಡುತ್ತ ಕುಳಿತಿರುವಲ್ಲಿ ರಾಮು ಕಾಫಿ, ಉಪ್ಪಿಟ್ಟು, ರಸಬಾಳೆಹಣ್ಣು ತಂದಿಟ್ಟ. ಉಪಾಹಾರ ಮುಗಿದ ಮೇಲೆ ಲೋಕಾಭಿರಾಮವಾಗಿ ಮಾತು ಸಾಗಿತು.

ರುಕ್ಮಿಣಿ ಎಷ್ಟು ಉಪಚರಿಸಿದರೂ ಸೋನಾಬಾಯಿ ಉಪಾಹಾರ ಸ್ವೀಕರಿಸಲಿಲ್ಲ. ಅವರ ಪಾಲಿನ ಉಪ್ಪಿಟ್ಟನ್ನೂ ಶ್ರೀದೇವಿಯೇ ಸ್ವಾಹಾ ಮಾಡಿದಳು.

ಮಧ್ಯಾಹ್ನ ಎಲ್ಲರಿಗೂ ಸುಖಭೋಜನವಾಯಿತು.

ಗಂಡಸರ ಊಟ ಮುಗಿದ ಮೇಲೆ ಸೋನಾಬಾಯಿ ಎದ್ದು ಸ್ನಾನಮಾಡಿ, ಪೂಜೆಮಾಡಿ ರುಕ್ಮಿಣಿಯೊಂದಿಗೆ ಊಟಕ್ಕೆ ಕುಳಿತರು.

ಸುಮಾರು ಎರಡು ಗಂಟೆಯ ವೇಳೆಗೆ ರಾಮು ತೊಟ್ಟಿಯಲ್ಲಿ ಜಮಖಾನಾ ಹಾಸಿ ಎಲ್ಲರನ್ನೂ ಆಹ್ವಾನಿಸಿದ. ಎಲ್ಲರೂ ಬಂದು ಕುಳಿತಮೇಲೆ ರಾಮು, ಪದ್ಮನನ್ನು ಕರೆದುಕೊಂಡು ಬಂದು ನಾಗೇಶರಾಯರಿಗೆ, ಸರ್ವೋತ್ತಮನಿಗೆ ನಮಸ್ಕಾರ ಮಾಡಿಸಿದ.

ವಧೂವರರ ಪ್ರಥಮ ಸಂದರ್ಶನವಾಯಿತು.

ಸೋನಾಬಾಯಿ ಪದ್ಮನನ್ನು ತಮ್ಮ ಹತ್ತಿರ ಕರೆದು ಕೂಡಿಸಿಕೊಂಡರು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ನರಸಿಂಹಮೂರ್ತ್ಯಾಚಾರ್ಯರೊಬ್ಬರೇ ಮಾತು ನಡೆಸಿದ್ದರು. ರಾಮು ಆಗಾಗ್ಗೆ ಅವರ ಪ್ರಶ್ನೆಗಳಿಗೆ ಉತ್ತರ ಹೇಳುತ್ತಿದ್ದ.

ನಾಗೇಶರಾಯರು ಮೆಲ್ಲನೆ ರಾಮುವನ್ನೆಬ್ಬಿಸಿಕೊಂಡು ಹೊರಗೆ ಹೋದರು. ಅವನು ಕೂಡಲೆ ಹಿಂದಿರುಗಿ ಸರ್ವೋತ್ತಮನನ್ನೂ ಸೋನಾಬಾಯಿಯವರನ್ನೂ ಹೊರಗೆ ಕಳಿಸಿಕೊಟ್ಟ. ಅವರು ಹಿಂದಿರುಗಲು ಬಹಳ ಕಾಲ ಹಿಡಿಸಲಿಲ್ಲ.

ಎಲ್ಲರ ದೃಷ್ಟಿಯೂ ನಾಗೇಶರಾಯರ ಮೇಲೆ ನೆಟ್ಟಿತು. ಅವರ ಬಾಯಲ್ಲಿ ಏನು ಹೊರಡುವುದೋ ಎಂದು ಎಲ್ಲರೂ ಕುತೂಹಲಗ್ರಸ್ತ

ರಾಗಿದ್ದರು. ನರಸಿಂಹಮೂರ್ತ್ಯಾಚಾರ್ಯರು ಮಾಧವರಾಯನ ಕಡೆ ತಿರುಗಿ

"ಸುಮ್ಮನೆ ಕುಳಿತುಬಿಟ್ಟರೆ ಹೇಗೆ ಸ್ವಾಮೀ" ಎಂದರು.

ಮಾಧವರಾಯ ಮಾತನಾಡಲಿಲ್ಲ.

ನಾಗೇಶರಾಯರೇ ಮೆಲ್ಲನೆ ಗಂಭೀರವಾಗಿ

"ಮಾಧವರಾಯರೇ, ತಮ್ಮ ಮಗಳನ್ನು ನನ್ನ ಮಗನಿಗೆ ಲಗ್ನ ಮಾಡಿಕೊಟ್ಟು ನನ್ನ ಮನೆ ಬೆಳಗಬೇಕು"

ಎಂದು ಕೇಳಿದರು. ಮಾಧವರಾಯನ ಕಣ್ಣುಗಳಲ್ಲಿ ಆನಂದ ಭಾಷ್ಪ ಹೊರಹೊಮ್ಮಿತು. ಬೀಗರ ಕೈಹಿಡಿದು

"ದೊಡ್ಡ ಮಾತು ಆಡಿದಿರಿ. ತಾವು ನಮ್ಮ ಮಗುವನ್ನು ಸ್ವೀಕರಿಸಿ ನನ್ನ ವಂಶ ಪಾವನ ಮಾಡಬೇಕು"

ಎಂದು ಪ್ರಾರ್ಥಿಸಿಕೊಂಡ.

ರಾಮು, ಶ್ರೀದೇವಿ ಎಲ್ಲರಿಗೂ ಕೊಬ್ಬರಿ ಸಕ್ಕರೆ ಹಂಚಿ, ಕಾಫಿ ತಂದಿತ್ತರು. ಮಾಧವರಾಯ ಬೀಗರನ್ನು ಕುರಿತು

"ಅಪ್ಪಣೆಯಾದರೆ ರಾತ್ರಿಗೆ ಲಗ್ನಪತ್ರಿಕೆ ಕೆಲಸ ಮುಗಿಸಿಬಿಡಬಹುದು" ಎಂದ.

"ಆಗಬಹುದು. ಆದರೆ ತಮಗೆ ತುಂಬ ಅವಸರವಾಗುತ್ತದೆ."

"ಏನೂ ಇಲ್ಲ. ನಾವು ಅದರ ಸಿದ್ಧತೆ ಮಾಡಿಕೊಂಡೇ ಇದ್ದೇವೆ."

"ಸಂತೋಷ. ಶುಭಸ್ಯ ಶೀಘ್ರಂ."

ಸಂಜೆಯ ವೇಳೆಗೆ ಹೊರಗಿನಿಂದ ಜನ ಬರಲಾರಂಭಿಸಿದರು. ಪಟ್ಟಣದಿಂದ ಗೌಡರು, ಷರೀಫ್ ಸಾಹೇಬರು, ಡಾಕ್ಟರು, ಶೇಷಪ್ಪ ಬಂದಿಳಿದರು. ಮುನಸೀಫ್ ಪದ್ಮನಾಭಯ್ಯನವರು ಕೋರ್ಟು ಮುಗಿಸಿಕೊಂಡು ನೇರವಾಗಿ ಮಾಧವರಾಯನ ಮನೆಗೇ ಬಂದರು. ರಮಣಯ್ಯನವರು, ಸಕ್ಕರೆ ಕಂಪೆನಿಯ ಅಧ್ಯಕ್ಷರು, ಮ್ಯಾನೇಜರು ಸಕಾಲಕ್ಕೆ ಬಂದಿಳಿದರು.

ರಾಮು, ನಾರಾಯಣಸ್ವಾಮಿ, ಶ್ರೀದೇವಿ ತೊಟ್ಟಿಯಲ್ಲಿ ಲಗ್ನ

ಪತ್ರಿಕಾ ಸಮಾರಂಭದ ವ್ಯವಸ್ಥೆ ಮಾಡುತ್ತಿದ್ದರು.

ಮಾಧವರಾಯ ತನ್ನ ಬೀಗರಿಗೆ ಎಲ್ಲಾ ಅತಿಥಿಗಳ ಪರಿಚಯ ಮಾಡಿಕೊಡುತ್ತಿದ್ದ. ಮಾಧವರಾಯನ ಬಳಗ ಕಂಡು ಬೆಕ್ಕಸ ಬೆರಗುಗೊಂಡ ನಾಗೇಶರಾಯರು ನಸುನಗುತ್ತಾ

" ತಾವು ವಿಶ್ವಕುಟುಂಬಿಗಳು ಮಾಧವರಾಯರೇ " ಎಂದರು.

ಜವರೇಗೌಡರು ಮಂದಸ್ಮಿತರಾಗಿ

" ರಾಯರ ಬಳಗ ನೋಡಿಯೇ ತಾವು ಹೀಗೆ ಹೇಳುವಿರಿ. ಅಮ್ಮಾವರ ಬಳಗ ತಾವು ನೋಡಬೇಕು "

ಎಂದರು. ಗೌಡರು ಹೇಳಿದಂತೆ ' ಅಮ್ಮಾವರ ಬಳಗ ' ಅಮಿತ ವಾಗಿ ಸೇರಿತ್ತು. ಶ್ರೀದೇವಿ ಉತ್ಸಾಹದಲ್ಲಿ ಊರಿಗೆಲ್ಲಾ ಆಮಂತ್ರಣ ನೀಡಿ ಬಂದಿದ್ದಳು.

ಮುಹೂರ್ತದ ವೇಳೆಗೆ ಎಲ್ಲರೂ ಮಾಧವರಾಯನ ಮನೆಯ ಹಜಾರದಲ್ಲಿ ಸೇರಿದರು. ಆಚಾರ್ಯರು ಮೊದಲೇ ಎಲ್ಲ ಎಚ್ಚರಿಕೆ ತೆಗೆದುಕೊಂಡು, ಒಂದು ಜತೆ ನಂದಾದೀಪ ಹಚ್ಚಿಸಿಟ್ಟಿದ್ದರು. ರಾಮು ಎರಡು ಪೆಟ್ರೋಮ್ಯಾಕ್ಸ್ ದೀಪಗಳನ್ನೂ ತಂದಿಟ್ಟಿದ್ದ. ಲಗ್ನಪತ್ರಿಕೆಗಳ ಪೂಜೆಯಾದಮೇಲೆ ಬೀಗರು ಅವುಗಳ ವಿನಿಮಯ ಮಾಡಿಕೊಂಡರು. ಪುರೋಹಿತರು ಎರಡು ಲಗ್ನಪತ್ರಿಕೆಗಳನ್ನೂ ಗಟ್ಟಿಯಾಗಿ ಓದಿಹೇಳಿ ಸಭಾಸದರ ಕೈಯಲ್ಲಿ ' ಅಸ್ತು ' ಎನ್ನಿಸಿದರು.

ರಾತ್ರಿ ಅತಿಥಿಗಳಿಗೂ ಆಮಂತ್ರಿತರಿಗೂ ರಸೌತಣವಾಯಿತು. ಅಡಿಗೆಯವರನ್ನು ಬರಮಾಡುವ ಗೋಜಿಗೆ ಹೋಗದೆ ಗೋದಮ್ಮನವರೇ ಎಲ್ಲವನ್ನೂ ನಾಲ್ಕಾರು ಹೆಣ್ಣುಮಕ್ಕಳ ಸಹಾಯದಿಂದ ನಿರ್ವಹಿಸಿದ್ದರು.

ಗೌಡರು, ಷರೀಫ್‌ಸಾಹೇಬರು, ಡಾ. ಸುಂದರಂ ಅವರಿಗೆ ಪ್ರತ್ಯೇಕ ಕೊಠಡಿಯಲ್ಲಿ ಬಡಿಸಲಾಯಿತು. ಅವರು ಊಟ ಮುಗಿಸಿ ಎಲ್ಲರ ಜತೆ ತಾಂಬೂಲಕ್ಕೆ ಕುಳಿತರು. ಮಾಧವರಾಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದುದರಿಂದ ಪಂಕ್ತಿಯಲ್ಲಿ ಊಟಕ್ಕೆ ಕುಳಿತಿರಲಿಲ್ಲ. ಅವನು ಊಟ ಮುಗಿಸಿಕೊಂಡು ಬರಲು ಗೌಡರು, ಷರೀಫ್‌ಸಾಹೇಬರು

ಹೊರಡಲನುವಾದರು.

"ಈಗಲೇ ಹೊರಟುಬಿಡುತ್ತೀರಾ?"

"ಎಷ್ಟು ದೂರ ಹೋಗಬೇಕು – ಮೂವತ್ತು ಮೈಲಿ – ಒಂದು ಗಂಟೆ ಪ್ರಯಾಣ."

"ದೊಡ್ಡ ಮನಸ್ಸು ಮಾಡಿ ತಾವುಗಳೆಲ್ಲಾ ಬಂದಿರಲ್ಲಾ. ಅಷ್ಟೇ ಸಂತೋಷ. ಹೀಗೇ ಸಂತೋಷವಾಗಿ ಲಗ್ನಕಾರ್ಯವನ್ನೂ ನಡಸಿ ಕೊಟ್ಟುಬಿಡಿ."

"ಹೀಗೇ ಬಂದು ಊಟ ಮಾಡುತ್ತೇವೆ. ಅಷ್ಟೇ ತಾನೆ ನಮ್ಮಿಂದಾಗುವ ಕೆಲಸ."

ಮಾಧವರಾಯ ತಮ್ಮ ಬೀಗರ ಕಡೆ ತಿರುಗಿ

"ಈ ನನ್ನ ನಾಲ್ಕು ಮಿತ್ರರು ನನ್ನ ನಾಲ್ಕು ಭುಜ ಇದ್ದಹಾಗಿ ದ್ದಾರೆ ಸ್ವಾಮಿ. ಇವರ ವಿಶ್ವಾಸವಿಲ್ಲದಿದ್ದರೆ ನಾನೊಬ್ಬ ಮನುಷ್ಯನಾಗಿ ಸಂಸಾರ ಮಾಡುವುದೇ ಸಾಧ್ಯವಾಗುತ್ತಿರಲಿಲ್ಲ."

ಗೌಡರು ಮುಜುಗರ ವ್ಯಕ್ತಮಾಡುತ್ತಾ

"ಅಮ್ಮಯ್ಯ ಮಲಗಿ ಬಿಟ್ಟಳೇನು? ಇವತ್ತೆಲ್ಲಾ ಅವಳನ್ನು ನೋಡಲೇ ಇಲ್ಲ."

"ರಾಮು, ಪದ್ಮ ಎಚ್ಚರವಾಗಿದ್ದರೆ ಕರೆದುಕೊಂಡು ಬಾ."

ಎಂದು ಮಾಧವರಾಯ ಹೇಳಿದ.

ಪದ್ಮ, ರಾಮು ಜತೆಯಲ್ಲಿ ಬಂದು ಬಾಗಿಲು ಪಕ್ಕದಲ್ಲಿ ನಿಂತಳು. ಜವರೇಗೌಡರು ಎದ್ದು ಬಂದು ತಲೆ ನೇವರಿಸಿ

"ಭಗವಂತ ಚೆನ್ನಾಗಿಡಲಿ ನನ್ನ ತಾಯಿ" ಎಂದರು.

ಗೌಡರ ಕಣ್ಣುಗಳಲ್ಲಿ ನೀರು ತುಂಬಿತು. ಈ ಅಚ್ಚರಿಯನ್ನು ನೋಡುತ್ತಿದ್ದ ನಾಗೇಶರಾಯರ ಕಡೆ ತಿರುಗಿ ಗೌಡರು

"ನಮ್ಮ ಕೈಯಲ್ಲಿ ಬೆಳೆದ ಕಂದಮ್ಮ. ಎಷ್ಟು ಬೇಗ ಲಗ್ನಕ್ಕೆ ಸಿದ್ಧವಾಯಿತು." ಎಂದರು.

ಷರೀಫ್‌ಸಾಹೇಬರು ಕಾರ್ ಸ್ಟಾರ್ಟ್ ಮಾಡುವುದಕ್ಕೆ

ಹೋದರು. ಮಾಧವರಾಯ ಜವರೇಗೌಡರನ್ನು ಕಳಿಸಿ ಬರಲು ಅವರ ಜತೆ ನಡೆಯುತ್ತ

"ಅಳಿಯ ಒಪ್ಪಿಗೆಯಾಯಿತೇ ?"

"ಸೊಗಸಾಗಿದ್ದಾನೆ ಸ್ವಾಮಿ. ವರಸಾಮ್ಯ ಬಹಳ ಚೆನ್ನಾಗಿದೆ. ಜನ ತುಂಬ ಸಾತ್ವಿಕರ ಹಾಗೆ ಕಾಣುತ್ತಾರೆ."

"ಹೌದು ಗೌಡರೆ. ನಿಗರ್ವಿಗಳು. ಬೀಯಗಿತ್ತಿಯನ್ನಂತೂ ಶ್ರೀದೇವಿ ಬಾಯಿ ತುಂಬ ಹೊಗಳುತ್ತಾಳೆ."

"ಮಗೂ ಒಳ್ಳೆಯ ಕಡೆ ಸೇರುತ್ತದಲ್ಲಾ ಅಷ್ಟೇ ಸಾಕು."

"ನಾಣಿ ಬೊಂಬಾಯಿಗೆ ಹೊರಟಿದ್ದಾನೆ."

"ಯಾವತ್ತು ಪ್ರಯಾಣ ?"

"ಸೋಮವಾರ ಹೊರಡುತ್ತೇನೆಂದು ಹೇಳುತ್ತಿದ್ದಾನೆ."

"ತಮ್ಮ ಖರ್ಚು ಬೆಳೆಯಿತು."

"ಅಮ್ಮ, ರುಕ್ಮಿಣಿ ಎಲ್ಲಾ ಅವನ ಪಕ್ಷ ಸೇರಿ ಬಿಟ್ಟಿದ್ದಾರೆ ಗೌಡರೇ. ನನ್ನ ಮಾತು ಕೇಳುವವರೇ ಇಲ್ಲ."

"ಎಲ್ಲಾ ಒಳ್ಳೆಯದಕ್ಕೇ ಸ್ವಾಮಿ. ಅಮ್ಮಾವರ ಸಂಕಲ್ಪಕ್ಕೆ ಯಾರೂ ಪ್ರತಿ ಹೇಳಲು ಸಾಧ್ಯವಿಲ್ಲ."

"ಅವಳನ್ನು ನೋಡಿದಿರಾ ?"

"ದೂರದಿಂದ ನೋಡಿದೆ. ಏಕೆ ?"

"ತುಂಬ ಇಳಿದು ಹೋಗಿದ್ದಾಳೆ. ಅವಳಿಗೂ ಮೈಯಲ್ಲಿ ಚೆನ್ನಾಗಿಲ್ಲ. ಒಂದನ್ನೂ ಬಾಯಿಬಿಟ್ಟು ಹೇಳುವುದಿಲ್ಲ ಗೌಡರೇ."

"ಮಗಳ ಮದುವೆಯ ವಿಷಯ ಮನಸ್ಸಿಗೆ ಆತಂಕವಾಗಿರ ಬಹುದು. ಈಗ ಆತಂಕ ಕಳೆಯಿತಲ್ಲ. ನಾಳೆ ನಾಡಿದ್ದು ಕಳೆದ ಮೇಲೆ ಮೈಸೂರಿಗೆ ಕರೆದುಕೊಂಡು ಒಂದು ಸಲ ದೊಡ್ಡಾಸ್ಪತ್ರೆಯಲ್ಲಿ ತೋರಿಸಿಕೊಂಡು ಬನ್ನಿ."

"ಅವಳು ಒಪ್ಪಬೇಕಲ್ಲಪ್ಪಾ."

"ನನ್ನ ಬಾ ಅಂದರೆ ಬರುತ್ತೇನೆ."

" ಇರಲಿ – ಯೋಚನೆ ಮಾಡಿ ತಿಳಿಸುತ್ತೇನೆ."

ಷರೀಫ್‌ಸಾಹೇಬರು ಸೆಲ್ಫ್ ಪ್ರಯೋಗಿಸುತ್ತಿದ್ದರು. ಚಳಿಗಾಳಿಯಲ್ಲಿ ನಿಂತಿದ್ದ ಕಾರು ಸ್ವಲ್ಪ ತೊಂದರೆ ಕೊಡುತ್ತಿತ್ತು. ಗೌಡರು ಮಾಧವರಾಯನನ್ನು ಪಕ್ಕಕ್ಕೆ ಕರೆದು

" ನಾಣಿ ಪ್ರಯಾಣಕ್ಕೆ...... ."

ಎಂದು ಜೇಬಿಗೆ ಕೈಹಾಕಿದರು. ಮಾಧವರಾಯ ಅವರ ಕೈ ತಡೆದು

" ತೊಂದರೆ ತೆಗೆದುಕೊಳ್ಳಬೇಡಿ " ಎಂದ.

ಗೌಡರು ಕಾರಿನಲ್ಲಿ ಕುಳಿತ ಮೇಲೆ ಕಾರು ಸ್ಟಾರ್ಟ್ ಆದ ಸೂಚನೆ ತೋರಿಸಿ ಮತ್ತೆ ಸ್ತಬ್ಧವಾಯಿತು. ಷರೀಫ್‌ಸಾಹೇಬರು ಕೆಳಗಿಳಿದು ಹ್ಯಾಂಡಲ್ ಹೊಡೆದು ಸ್ಟಾರ್ಟ್ ಮಾಡಿದರು. ರಾಮು ಓಡುತ್ತಾ ಬಂದು ಕಾರಿನಲ್ಲಿದ್ದ ನಾಲ್ಕು ಜನರಿಗೂ ನಾಲ್ಕು ತಿಂಡಿ ಪೊಟ್ಟಣಗಳನ್ನಿತ್ತ. ಡಾಕ್ಟರು ಆಶ್ಚರ್ಯದಿಂದ

" ಇದೇನಪ್ಪಾ ! " ಎಂದರು.

ಗೌಡರು ಪೊಟ್ಟಣವನ್ನು ಭಕ್ತಿಯಿಂದ ಸ್ವೀಕರಿಸಿ

" ಯಾರು ನಮ್ಮನ್ನು ಮರೆತರೂ ನಮ್ಮಮ್ಮ ಮರೆಯುವಹಾಗಿಲ್ಲ ಡಾಕ್ಟರೇ. ತೆಗೆದುಕೊಳ್ಳಿ – ಇದು ದೇವರ ಪ್ರಸಾದ " ಎಂದರು.

೧೫

ಮಾರನೆಯ ಬೆಳಿಗ್ಗೆಯೇ ಊರಿಗೆ ಹೊರಟುಬಿಡಬೇಕೆಂದು ಸೋನಾಬಾಯಿ ಸೂಚಿಸಿದರು. ರುಕ್ಮಿಣಮ್ಮ ಅದಕ್ಕೆ ಸುತರಾಂ ಒಪ್ಪದೆ

"ನಾಳೆ ಊಟ ಮಾಡಿಕೊಂಡೇ ಹೋಗಬೇಕು" ಎಂದು ಬಿಟ್ಟಳು.

ಅದೇ ಸುದ್ದಿಯನ್ನು ಮಾಧವರಾಯ ನಾಗೇಶರಾಯರಿಗೂ ತಿಳಿಸಿದ. ಸರ್ವೋತ್ತಮನಿಗೆ ರಜವಿದ್ದುದರಿಂದ ನಾಗೇಶರಾಯರು ಒಪ್ಪಿದರು.

ಬೆಳಿಗ್ಗೆ ಸ್ನಾನ, ಉಪಾಹಾರ ಮುಗಿದಮೇಲೆ ಸರ್ವೋತ್ತಮ ಮೆಲ್ಲನೆ ರಾಮುವನ್ನು ಕರೆದುಕೊಂಡು ಹೋಗಿ

"ನೀವು ನನಗೊಂದು ಉಪಕಾರ ಮಾಡಬೇಕು ರಾಮುರಾಯರೇ" ಎಂದ.

"ಏನು ಹೇಳಿ ಸಾರ್."

"ಪದ್ಮನ್ನ ಡ್ರೈವ್ ಕರೆದುಕೊಂಡು ಹೋಗಬೇಕೂಂತಿದ್ದೀನಿ. ನಮ್ಮಮ್ಮನ್ನ ನಿಮ್ಮಕ್ಕಾವರನ್ನ ಒಪ್ಪಿಸುವುದು ನಿಮ್ಮ ಭಾರ."

"ಒಳ್ಳೆಯ ಕಷ್ಟಕ್ಕೆ ತಂದಿಟ್ಟಿರಲ್ಲಾ ಸರ್ವೋತ್ತಮ್. ನಿಮ್ಮ ತಾಯಿಯವರಿಗೆ ನೀವೇ ಒಂದು ಮಾತು ಹೇಳಿ. ಅಕ್ಕನನ್ನು

ಒಪ್ಪಿಸುವ ಭಾರ ನನಗಿರಲಿ."

"ನಾನು ಹೇಳಿದರೆ ಅಮ್ಮ ನನ್ನ ಹಿಡಿದುಕೊಂಡು ಹೊಡೆದೇ ಬಿಡುತ್ತಾರೆ. ಎಲ್ಲಾ ನೀವೇ ಮಾಡಬೇಕಪ್ಪ."

"ಆಗಲಿ – ದೇವರಿದ್ದಾನೆ"

ಎಂದು ರಾಮು ಸೋನಾಬಾಯಿಯವರನ್ನೂ ಶ್ರೀದೇವಿಯನ್ನೂ ಕರೆದು ಸರ್ವೋತ್ತಮನ ವಾಂಛಿತವನ್ನು ವಿವರಿಸಿದ. ಸೋನಾಬಾಯಿ ಗಾಬರಿಗೊಂಡು

"ಎಲ್ಲಿಯಾದರೂ ಉಂಟೇ ರಾಮರಾಯರೇ. ರುಕ್ಮಿಣಮ್ಮ ಏನೆಂದುಕೊಳ್ಳುತ್ತಾರೆ. ನಮ್ಮ ಹುಡುಗನಿಗೆ ಸ್ವಲ್ಪವೂ ತಿಳಿವಳಿಕೆ ಇಲ್ಲಪ್ಪ."

"ಹೋಗಿ ಬರಲಿ ಬಿಡಿ ಅತ್ತೆ. ಗಂಡ ಹೆಂಡತಿ ಅನ್ಯೋನ್ಯ ವಾಗಿರುವುದು ತಾನೆ ನಮಗೂ ಬೇಕಾದುದು"

ಎಂದು ಶ್ರೀದೇವಿ ಹೇಳಿದಳು.

"ಅಲ್ಲ ಶ್ರೀದೇವಿ, ಮದುವೆಯಾಗುವುದಕ್ಕೆ ಮುಂಚೆ ಹೀಗೆ ಹೋದರೆ ಜನದ ಬಾಯಿ ಸುಮ್ಮನಿರುತ್ತದೆಯೇ? ಇದು ಹಳ್ಳಿಗಾಡು. ಬೇಯದ ಮನೆ ಯಾವದು, ಬೆಂದ ಮನೆ ಯಾವದು ಎಂದು ಲೆಕ್ಕ ಹಾಕುವುದೇ ಜನಗಳ ಕೆಲಸ. ನಾನಂತೂ ಈ ಮಾತು ರುಕ್ಮಿಣಮ್ಮ ನವರಿಗೆ ಹೇಳಲಾರೆನಮ್ಮ."

"ನೀವು ಹೇಳಬೇಡಿ. ನಾನೇ ಹೇಳುತ್ತೇನೆ. ನೀವು ನನ್ನ ಜತೆಯಲ್ಲಿರಿ ಸಾಕು."

ಅರೆಮನಸ್ಸಿನಿಂದಲೇ ಸೋನಾಬಾಯಿ ಒಪ್ಪಿಕೊಂಡರು. ಶ್ರೀದೇವಿ ಅತ್ತಿಗೆಗೆ, ಸರ್ವೋತ್ತಮನ ಬಿನ್ನಹವನ್ನೊಪ್ಪಿಸಿದಳು. ಪಕ್ಕದಲ್ಲಿ ಇದ್ದ ಕಮಲ ತಾಯಿಯ ಮುಖ ನೋಡಿದಳು. ರುಕ್ಮಿಣಮ್ಮ ಕ್ಷಣಕಾಲ ಆಲೋಚಿಸಿ

"ದೊಡ್ಡವರು ಬೀಯಗಿತ್ತಿ ಇರುವಾಗ ನನ್ನೇನು ಕೇಳುತ್ತೀ ಶ್ರೀದೇವಿ. ಅವರನ್ನು ಕೇಳು. ಅವರು ಆಗಬಹುದೆಂದರೆ ಅವಶ್ಯಕ

ವಾಗಿ ಹೋಗಿ ಬರಲಿ."

ಸೋನಾಬಾಯಿ ಮಧ್ಯೆ ಬಾಯಿ ಹಾಕಿ

" ನಾನು ಬೇಡವೆಂದು ಹೇಳಿದೆ ಕಣ್ರೀ. ಶ್ರೀದೇವಿ ಕೇಳಲಿಲ್ಲ. ಅನವಶ್ಯಕವಾಗಿ ಜನಗಳ ಬಾಯಿಗೆ ಬೀಳುವುದೇಕೆಂದು ಹೇಳಿದೆ."

ಶ್ರೀದೇವಿ ಮುಖ ಚಿಕ್ಕದು ಮಾಡಿಕೊಂಡು

" ಪಾಪ ಸರ್ವೋತ್ತಮ – ತುಂಬ ಬೇಸರಪಟ್ಟುಕೊಳ್ಳುತ್ತಾರೆ." ಎಂದಳು.

ರುಕ್ಮಿಣಮ್ಮ ನಸುನಗುತ್ತಾ

" ಹೋಗಿ ಬರಲಮ್ಮ. ಅದರಲ್ಲಿ ತಪ್ಪೇನು. ಇಷ್ಟು ಸಣ್ಣ ವಿಷಯಕ್ಕೆ ಅಳಿಯಂದಿರ ಮನಸ್ಸನ್ನೇಕೆ ಬೇಸರಗೊಳಿಸಬೇಕು" ಎಂದಳು.

ಸೋನಾಬಾಯಿಯವರಿಗೂ ಸಮಾಧಾನವಾಯಿತು.

" ನಮ್ಮ ಯಜಮಾನರ ಕಿವಿಯ ಮೇಲೆ ಈ ವಿಷಯ ಬೀಳದಿದ್ದರೆ ಒಳ್ಳೆಯದು."

" ಅದಕ್ಕೆ ನಾನು ವ್ಯವಸ್ಥೆ ಮಾಡುತ್ತೇನೆ ಬನ್ನಿ ಅತ್ತೆ. ನಿಮ್ಮ ಯಜಮಾನರನ್ನು ಕ್ಲಬ್ಬಿಗೆ ಕರೆದುಕೊಂಡು ಹೋಗುವಂತೆ ಭಾವನಿಗೆ ತಿಳಿಸುತ್ತೇನೆ. ಊಟದ ಟೈಮಿನವರೆಗೆ ಅವರಾದರೂ ಮನೆಯಲ್ಲಿ ಒಬ್ಬರೇ ಏಕೆ ಕುಳಿತಿರಬೇಕು."

ಎಂದು ರಾಮು ಸಮಸ್ಯೆ ಬಗೆಹರಿಸಿದ.

ಮಾಧವರಾಯ ಅರ್ಧಗಂಟೆಯಲ್ಲಿ ಸಿದ್ಧನಾಗಿ ನಾಗೇಶರಾಯ ರನ್ನು ಕರೆದುಕೊಂಡು ಕ್ಲಬ್ಬಿಗೆ ಹೋದ.

ರುಕ್ಮಿಣಮ್ಮ ಮಗಳ ತಲೆಬಾಚಿ, ಜಡೆ ಹೆಣೆದು ಹೂ ಮುಡಿ ಸಿದಳು. ಪದ್ಮ ಹೊಸ ಸೀರೆ ಕುಪ್ಪಸ ಧರಿಸಿ ಗಂಡನ ಜತೆ ಹೊರಟಳು.

ಸ್ಟೀರಿಂಗ್ ವ್ಹೀಲ್ (Steering wheel) ಹಿಡಿದು ಕುಳಿತ ಸರ್ವೋತ್ತಮನಿಗೆ ಸ್ವರ್ಗವೇ ಕರತಲಾಮಲಕವಾಗಿತ್ತು. ರಾಮು ಮೆಲ್ಲನೆ ಬಂದು ಅವನ ಕಿವಿಯಲ್ಲಿ

"ಬೇಗ ಬಂದು ಬಿಡಿಯಪ್ಪ. ಯಜಮಾನರು ಕ್ಲಬ್ಬಿನಿಂದ ಹಿಂದಿರುಗುವ ವೇಳೆಗೆ ನೀವು ಮನೆಯಲ್ಲಿ ಹಳಬರಾಗಿರಬೇಕು."

"ಹಾಗೇ ಆಗಲಿ. ಮೆನಿ ಥ್ಯಾಂಕ್ಸ್ ಮಿ. ರಾಮರಾವ್ (Many thanks Mr. Rama Rao)"

ಎಂದಂದು ಆಕ್ಸಿಲೇಟರ್ (accelator) ಮೇಲೆ ಕಾಲೂರಿದ.

ಕಾರು ಓಡುತ್ತಿದ್ದಂತೆ ಸರ್ವೋತ್ತಮ ಬಾಗಿಲು ಕಡೆ ನೋಡಿ, ಅದನ್ನು ಭದ್ರವಾಗಿ ಎಳೆದುಕೊಂಡು

"ಬಾಗಿಲು ಒರಗಿಕೊಳ್ಳಬೇಡ. ಒಮ್ಮೊಮ್ಮೆ ಅದು ಬಿಟ್ಟು ಕೊಳ್ಳುವುದೂ ಉಂಟು" ಎಂದ.

ಮೈಸೂರು ರಸ್ತೆಯಲ್ಲಿ ಕಾರು ೩-೪ ಮೈಲಿ ಓಡಿತು. ಉಭಯರೂ ಮಾತನಾಡಲಿಲ್ಲ. ಸರ್ವೋತ್ತಮ ಒಂದೆರಡು ಬಾರಿ ಪದ್ಮನ ಕಡೆ ತಿರುಗಿ ನೋಡಿ

"ಕಾಲೇಜಿಗೆ ಹೋಗುತ್ತಿರುವೆಯಂತೆ!" ಎಂದ.

"ಹೂ!"

"ಕಾಲೇಜಿನಲ್ಲಿ ಮಾತಾಡುವುದನ್ನು ಹೇಳಿಕೊಡುವುದಿಲ್ಲವೇ?"

ಪದ್ಮ ಮುಗುಳ್ನಗೆ ಬೀರಿದಳು.

"ನಿನ್ನ ಡ್ರೈವ್ ಕರೆದುಕೊಂಡು ಬರಬೇಕಾದರೆ ನಾನು ತುಂಬ ಸಾಹಸ ಮಾಡಬೇಕಾಯಿತು. ರಾಮರಾಯರು ಶ್ರೀದೇವಿ ಉಪಕಾರ ಮಾಡಿದರು."

ಎನ್ನುತ್ತಾ ಕಾರನ್ನು ಥಟಕ್ಕನೆ ನಿಲ್ಲಿಸಿಬಿಟ್ಟ. ಪದ್ಮ ಗಾಬರಿಯಾಗಿ

"ಏನಾಯಿತು? ಕಾರು ಕೆಟ್ಟುಹೋಯಿತೇ?"

"ಹೌದು – ನೀನು ಮಾತನಾಡಿದರೆ ಮುಂದೆ ಹೋಗುವುದಂತೆ."

"ನಾನೇನು ಮಾತನಾಡಲಿ."

"ಹೆಂಗಸರಿಗೆ ಮಾತಾಡುವುದನ್ನು ಹೇಳಿಕೊಡಬೇಕೇ?"

"ನಾವು ಅಷ್ಟು ಗಯ್ಯಾಳಿಗಳೇ?"

"ಅಲ್ಲ – ಬಾಯಾಳಿಗಳು....ಪುನಃ ಕಾಲೇಜ್ ಸೇರುವೆಯಾ?"

" ನನಗೆ ಗೊತ್ತಿಲ್ಲ. ನೀವು ಅಪ್ಪಣೆಕೊಟ್ಟರೆ ಹೋಗಬಹುದೆಂದು ಅಮ್ಮ ಹೇಳಿದಳು."

" ನಿಮ್ಮ ತಾಯಿಯ ತಿಳಿವಳಿಕೆ ನನಗೆ ಆಶ್ಚರ್ಯವನ್ನುಂಟು ಮಾಡುತ್ತದೆ—ನನ್ನ ವಿಷಯ ನಿಮ್ಮ ತಾಯಿ ಏನು ಹೇಳಿದರು."

" ನಿಜ ಹೇಳಲೇ ?"

" ಹೇಳು."

" ನಿಮಗೆ ಜಂಬ ಬರುತ್ತದೇನೋ ? "

" ಜಂಬ ಬಂದರೂ ತೋರಿಸಿಕೊಳ್ಳುವುದಿಲ್ಲ."

" ಅಮ್ಮ ನಿಮ್ಮನ್ನು ತುಂಬ ಮೆಚ್ಚಿಕೊಂಡಿದ್ದಾಳೆ. ಎಷ್ಟು ಲಕ್ಷಣವಾಗಿದ್ದಾರೆ ಪದ್ಮ, ಮುಖದಲ್ಲಿ ಎಷ್ಟು ಶಾಂತಿ ಎಂದಳು."

" ನಾನು ಬಹಳ ಕೋಪಿಷ್ಠ ಪದ್ಮ."

" ಅಮ್ಮ ಎಂದಿಗೂ ಸುಳ್ಳು ಹೇಳುವುದಿಲ್ಲ."

" ನಾನು ಸುಳ್ಳು ಹೇಳುತ್ತೇನೆಯೇ ?"

" ನೀವೂ ಸುಳ್ಳು ಹೇಳಬೇಡಿ."

" ನಿನಗೆ ಮಾತೇ ಬರುವುದಿಲ್ಲವೆಂದಿದ್ದೆನಲ್ಲ !"

" ಹೋಗಲಿ ಬಿಡಿ – ಇನ್ನು ಬಾಯಿಬಿಟ್ಟರೆ ಕೇಳಿ."

" ಪದ್ಮ ... .... "

ಪದ್ಮ ಕುತೂಹಲಗ್ರಸ್ತಳಾಗಿ ಸರ್ವೋತ್ತಮನ ಕಡೆ ತಿರುಗಿದಳು.

" ನಿಮ್ಮ ತಾಯಿ ತುಂಬ ದೊಡ್ಡವರು."

" ಏಕೆ ? "

" ಮದುವೆಗೆ ಮುಂಚೆಯೇ ನಿನ್ನನ್ನು ನನ್ನ ಜತೆ ಕಳಿಸಲು ಅನುಮಾನಿಸಲಿಲ್ಲ."

" ಪ್ರಪಂಚದಲ್ಲಿ ಕೆಟ್ಟವರೇ ಇಲ್ಲ. ನಾವು ಒಳ್ಳೆಯ ರೀತಿಯಲ್ಲಿ ನಡೆದು ಕೊಂಡರೆ ಎಲ್ಲರೂ ಒಳ್ಳೆಯವರಾಗಿಯೇ ಇರುತ್ತಾರೆ ಎಂದು ಅಮ್ಮ ಪದೇಪದೇ ಹೇಳುತ್ತಿರುತ್ತಾಳೆ."

" ನನ್ನ ತಾಯಿ – ನಿನ್ನ ತಾಯಿ ಇಬ್ಬರೂ ಕಷ್ಟ, ದುಃಖಗಳನ್ನು

ಶಕ್ತಿ ಮೀರಿ ಅನುಭವಿಸಿದ್ದಾರೆ. ಅವರ ಜೀವನಕ್ಕೆ ಶಾಂತಿ, ತೃಪ್ತಿ ಕೊಡುವುದು ನಮ್ಮ ಕರ್ತವ್ಯ."

"ಹೌದು."

"ನನ್ನ ವೃತ್ತಿ ಯಾವದು ಬಲ್ಲೆಯಾ ?"

"ಬಲ್ಲೆ – ಏರ್‌ಪೈಲೆಟ್."

"ಜೀವ ಸಾವುಗಳ ಮಧ್ಯೆ ನಾನು ನಿತ್ಯವೂ ತೂಗಾಡುತ್ತಿರುತ್ತೇನೆ."

"ಹಾಗನ್ನ ಬೇಡಿ."

"ನನ್ನ ತಾಯಿಗೆ ನೀನು ಸೊಸೆಯೂ ಆಗಬೇಕು – ಮಗಳೂ ಆಗಬೇಕು."

"ಅವರ ಮನಸ್ಸಿಗೆ ಸ್ವಲ್ಪವೂ ವ್ಯಥೆಯಾಗದಂತೆ ನಾನು ನಡೆದುಕೊಳ್ಳುತ್ತೇನೆ."

"ಅಷ್ಟೇ ನನಗೆ ಬೇಕಾದುದು. ನನ್ನ ವಿಷಯವೇನಾದರೂ ತಿಳಿಯಬೇಕೆಂದಿದ್ದರೆ ಧೈರ್ಯವಾಗಿ ಕೇಳು."

"ಏನು ಕೇಳಬೇಕೊ ನನಗೆ ಹೊಳೆಯುವುದಿಲ್ಲ. ನಾನು ಪುನಃ ಕಾಲೇಜ್ ಸೇರಲೇ ?"

"ಸೇರಲು ಇಷ್ಟವಿದ್ದರೆ ಸೇರು.

"ನನಗೆ ಇಷ್ಟವಿಲ್ಲ."

"ನಾವು ಊಟ ಮುಗಿಸಿಕೊಂಡು ಪ್ರಯಾಣ ಮಾಡುತ್ತೇವೆ."

"ಈಗಲೇ ಹೊರಡಬೇಕೇ ?"

"ಹೂ! ನಾಳೆ ಬೆಳಿಗ್ಗೆ ನಾನು ಡ್ಯೂಟಿಯ ಮೇಲೆ ಹೋಗಬೇಕಾಗಿದೆ."

ಪದ್ಮನ ಮುಖ ಕಳೆಗುಂದಿದುದನ್ನು ಕಂಡು ಸರ್ವೋತ್ತಮ

"ಕಾಗದ ಬರೆಯುತ್ತಿರುವೆಯಾ ?"

"ನೀವು ಬರೆದರೆ ಬರೆಯುತ್ತೇನೆ."

"ನಾನು ನಾಳೆಯೆ ಮುಂಬಯಿಯಿಂದ ಬರೆಯುತ್ತೇನೆ."

"ಮುಂಬಯಿಗೆ ಹೋಗುವಿರಾ ?"

"ಹೂ! ನಿತ್ಯವೂ ಹೋಗಿ ಬರುತ್ತೇನೆ. ಏಕೆ ?"

"ಅಣ್ಣನೂ ಮುಂಬಯಿಗೆ ಹೊರಟಿದ್ದಾನೆ. ಅಲ್ಲಿ ಕಾಲೇಜು ಸೇರುತ್ತಾನೆ."

"ಬರಲಿ – ನಾನು ಜತೆಯಲ್ಲಿ ಕರೆದುಕೊಂಡು ಹೋಗುತ್ತೇನೆ."

"ಹೇಳಿ ನೋಡುತ್ತೇನೆ."

ಸರ್ವೋತ್ತಮ ಗಡಿಯಾರ ನೋಡಿಕೊಂಡು

"ಇನ್ನು ಹೊರಡೋಣವೇ ?" ಎಂದ.

ಪದ್ಮ ತಡೆತಡೆದು ಮೆಲ್ಲನೆ

"ನನಗೆ....ನನಗೆ...."

"ಏನು ಹೇಳು."

"ಹೋಗಲಿ ಬಿಡಿ."

"ಇಲ್ಲ ಹೇಳು."

"ನಿಮ್ಮ ಪೈಲಟ್ ಡ್ರೆಸ್ಸಿನ ಫೋಟೊ ಒಂದು ನನಗೆ ಬೇಕು."

"ಕಳಿಸಿಕೊಡುತ್ತೇನೆ. ನಿನ್ನ ಫೋಟೊ ಕೊಡುವುದಿಲ್ಲವೇ ?"

"ಈಚೆಗೆ ನನ್ನ ಫೋಟೊ ತೆಗೆಸಿಲ್ಲ. ಎಳೆಯ ಮಗುವಿನಲ್ಲಿ ತೆಗೆಸಿದ್ದ ಫೋಟೊ ಮಾತ್ರ ಇದೆ."

"ಅದನ್ನೇ ಕೊಡು."

"ರಾಮಣ್ಣನವರ ಕೈಯಲ್ಲಿ ಕೊಟ್ಟಿರುತ್ತೇನೆ."

ಸರ್ವೋತ್ತಮ ಕಾರು ಸ್ಟಾರ್ಟ್‌ಮಾಡಿ ಮನೆಯನ್ನು ಮುಟ್ಟಿದ. ಅವರು ಬರುವಷ್ಟರಲ್ಲಿ ಯಜಮಾನರುಗಳು ಕ್ಲಬ್ಬಿನಿಂದ ಹಿಂದಿರುಗಿರಲಿಲ್ಲ. ಸೋನಾಬಾಯಿಯವರ ಮನಸ್ಸಿಗೆ ಶಾಂತಿಯಾಯಿತು.

ಮನೆಯಲ್ಲಿದ್ದ ಹೆಣ್ಣುಮಕ್ಕಳು ಪದ್ಮನನ್ನು ಸುತ್ತು ಗಟ್ಟಿ ನೂರಾರು ಪ್ರಶ್ನೆಗಳನ್ನು ಕೇಳಿದರು. ನಾಚಿನಾಚಿ ಪದ್ಮನ ಕಪೋಲಗಳು ಶಾಶ್ವತ ಕೆಂಪು ವರ್ಣ ತಳೆದು ಬಿಟ್ಟವು. ಅದೇ ಮನೆಗೆ ಬಂದ ನಳಿನಿ ಗೆಳತಿಯನ್ನು ಹತ್ತಿರ ಕರೆದು

" ನಿನ್ನ ಗಂಡ ಕೆನ್ನೆ ಕಚ್ಚಿದನೇನೇ ಪದ್ಮ" ಎಂದಳು.

" ಯಾಕೇ ಹಾಗೆ ಕೇಳುತ್ತೀ."

" ನಿನ್ನ ಕೆನ್ನೆ ನೋಡಿಕೋ – ಎಷ್ಟು ಕೆಂಪಗಾಗಿದೆಯಮ್ಮ."

" ಹೋಗೇ – ನೀನೊಬ್ಬಳು...."

" ಹೌದು ನಾನು ಒಬ್ಬಳೇ – ನೀನು ಒಬ್ಬಳಾಗಿಲ್ಲ...."

" ನೀನು ಹಾಸ್ಯಮಾಡಿದರೆ ನಾನು ನಿನ್ನ ಮಾತೇ ಆಡಿಸಲ್ಲ ನಳಿನಿ."

" ಇನ್ನು ಯಾಕಮ್ಮ ಆಡಿಸುತ್ತೀ – ನಮ್ಮನ್ನ ಕಟ್ಟಿಕೊಂಡು ನಿನಗೆ ಆಗಬೇಕಾದುದೇನು?–ಹೋಗಲಿ, ನಿನ್ನ ಗಂಡ ಏನು ಹೇಳಿದ."

" ಏನೂ ಹೇಳಲಿಲ್ಲ."

" ಏನೂ ಹೇಳದೆ ಇಬ್ಬರೂ ಎರಡು ಗಂಟೆ ಡ್ರೈವ್ ಹೋಗಿದ್ದಿರಾ ? "

" ಏನೋ ಮನೆ ವಿಷಯ ಮಾತನಾಡಿದರು ಕಣೇ."

" ಸಾರಿಗೆ ಉಪ್ಪು ಎಷ್ಟು ಹಾಕುತ್ತೀ ಎಂದು-ಕೇಳಿದರೆ."

ಪದ್ಮ ಅವಳ ಕುಚೇಷ್ಟೆಯನ್ನು ಕಂಡು ಗಹಗಹಿಸಿ ನಕ್ಕಳು.

ಮಧ್ಯಾಹ್ನದ ಊಟ ಮುಗಿದ ಮೇಲೆ ಎಲ್ಲರೂ ತಾಂಬೂಲ ಹಾಕಿಕೊಳ್ಳುತ್ತಾ ಕುಳಿತಿದ್ದಾಗ ಸರ್ವೋತ್ತಮ ನಾರಾಯಣಸ್ವಾಮಿಯನ್ನು ಕುರಿತು

" ನೀವು ಮುಂಬಯಿಗೆ ಹೋಗಿ ಕಾಲೇಜ್ ಸೇರುವಿರಂತೆ ! "

" ಹೌದು."

" ಯಾವಾಗ ಪ್ರಯಾಣ."

" ಎರಡುಮೂರು ದಿನಗಳಲ್ಲಿ ಹೊರಡಬೇಕೆಂದಿದ್ದೇನೆ."

"ಶುಕ್ರವಾರ ಬೆಳಿಗ್ಗೆ ಹೊರಡುವಹಾಗಿದ್ದರೆ ನಾನು ಮುಂಬಯಿಗೆ ಪ್ಲೇನಿನಲ್ಲಿ ಕರೆದುಕೊಂಡು ಹೋಗುತ್ತೇನೆ."

" ನಿಮಗೇಕೆ ತೊಂದರೆ."

" ತೊಂದರೆಯೇನು ಬಂತು. ಇದುವರೆಗೆ ನನ್ನ ಹಕ್ಕು ಚಲಾ

ಯಿಸುವ ಅವಕಾಶವೇ ನನಗೆ ಸಿಕ್ಕಿರಲಿಲ್ಲ."

ನಾರಾಯಣಸ್ವಾಮಿ ಅನುಮಾನಿಸಲು ನಾಗೇಶರಾಯರು

"ಸರ್ವನ ಜತೆ ಕಳಿಸಿಕೊಡಿ ಸ್ವಾಮಿ. ಮುದುಕರು ನಮ್ಮ ಕಾಲ ಮುಗಿಯಿತು – ಹುಡುಗರು ಸ್ನೇಹವಾಗಿರುವುದು ತಾನೇ ನಾವು ಕೋರುವುದು" ಎಂದರು.

"ಆಗಬಹುದು. ನನ್ನದೇನೂ ಅಭ್ಯಂತರವಿಲ್ಲ"

ಎಂದು ಮಾಧವರಾಯ ಒಪ್ಪಿಕೊಂಡ.

ರಾಮು, ಶ್ರೀದೇವಿಯೂ ಹೊರಟು ನಿಂತಿದ್ದರು. ರುಕ್ಮಿಣಮ್ಮ ಎಲ್ಲರಿಗೂ ಅರಿಶಿನ ಕುಂಕುಮ ತಾಂಬೂಲ ಕೊಟ್ಟಳು. ಪದ್ಮ ಅತ್ತೆಗೆ ನಮಸ್ಕಾರ ಮಾಡಿದಳು. ಸೋನಾಬಾಯಿ ಶ್ರೀದೇವಿಗೂ ನಮಸ್ಕಾರ ಮಾಡಿಸಿದರು.

ಸರ್ವೋತ್ತಮ ಕಾರು ಸಿದ್ಧಗೊಳಿಸಿದ. ಮನೆಯ ಜನರೆಲ್ಲಾ ಅತಿಥಿಗಳನ್ನು ಬೀಳ್ಕೊಡಲು ಹೊರಗೆ ಬಂದು ನಿಂತರು. ಪದ್ಮ ತನ್ನ ಮಾವನವರಿಗೂ, ಪತಿಗೂ ನಮಸ್ಕರಿಸಿದಳು

ಕಾರು ಮೆಲ್ಲನೆ ಹೊರಟಿತು. ಪದ್ಮ ಕಾರು ಕಣ್ಮರೆಯಾಗುವ ವರೆಗೂ ಬಾಗಿಲಿನಲ್ಲಿಯೇ ನಿಂತಿದ್ದಳು. ಅವಳ ಕಣ್ಣಲ್ಲಿ ನೀರು ಮಿಡಿದುದನ್ನು ಕಂಡು ನಾರಾಯಣಸ್ವಾಮಿ

"ನೋಡಿದೆಯೇನಮ್ಮ" ಎಂದ.

ರುಕ್ಮಿಣಮ್ಮ

"ಏನೋ ಅದು" ಎಂದಳು.

"ನಾವಿಷ್ಟು ಜನ ಇರುವುದೂ ಪದ್ಮನಿಗೆ ಲಕ್ಷ್ಯವೇ ಇಲ್ಲ. ಯಜಮಾನರು ಹೊರಟುಹೋದರು ಎಂದು ದುಃಖಿಸುತ್ತಿದ್ದಾಳೆ."

ರುಕ್ಮಿಣಮ್ಮ ಮಗನನ್ನು ಕಣ್ತುಂಬ ನೋಡಿ

"ಹುಚ್ಚು ಹುಡುಗ" ಎಂದುಕೊಂಡಳು.

೧೬

ನಾರಾಯಣಸ್ವಾಮಿ ಗುರುವಾರ ಬೆಳಿಗ್ಗೆಯೇ ಹೊರಟು, ಅಂದು ಬೆಂಗಳೂರಿನಲ್ಲಿದ್ದು ಶುಕ್ರವಾರ ಬೆಳಿಗ್ಗೆ ಸರ್ವೋತ್ತಮನ ಜತೆ ಮುಂಬಯಿಗೆ ಹೋಗುವುದೆಂದು ಇತ್ಯರ್ಥವಾಯಿತು. ನಾರಾಯಣ ಸ್ವಾಮಿ ಪ್ರಯಾಣ ಮಾಡುವ ವಿಷಯ ತಿಳಿದ ಸುನಂದಮ್ಮನವರು ತಾವೇ ಬಂದು ರುಕ್ಮಿಣಿಯನ್ನು

"ನಾರಾಯಣಸ್ವಾಮಿ ಶುಕ್ರವಾರ ಪ್ರಯಾಣ ಮಾಡುತ್ತಾನಂತೆ!" ಎಂದರು.

"ಹೌದಮ್ಮ, ಹೊರಟು ನಿಂತಿದ್ದಾನೆ."

"ಮುಂಬಯಿಯಲ್ಲಿ ಎಲ್ಲಿರುತ್ತಾನೆ."

"ಕಾಲೇಜ್ ಹಾಸ್ಟಲ್ಲಿನಲ್ಲಿರಬಹುದು."

"ಮುಂಬಯಿಯಲ್ಲಿ ನನ್ನ ಮಗ ರಘುನಾಥ ಇದ್ದಾನೆ. ನಾರಾಯಣಸ್ವಾಮಿ ಒಪ್ಪುವುದಾದರೆ ಅವನ ಜತೆಯಲ್ಲಿಯೇ ಏಕಿರ ಬಾರದು. ಕಾರ್ಪೊರೇಷನ್ನಿನವರು ರಘೂಗೆ ದೊಡ್ಡ ಮನೆ ಕೊಟ್ಟಿದ್ದಾರೆ. ನಾರಾಯಣಸ್ವಾಮಿ ಅವನಿಗೇನೂ ಭಾರವಾಗುವುದಿಲ್ಲ. ನೀವು ಒಪ್ಪುವಹಾಗಿದ್ದರೆ ನಾನಿವತ್ತೇ ರಘೂಗೆ ಕಾಗದ ಬರೆಯುತ್ತೇನೆ."

"ನಾಣಿ ವಿಚಿತ್ರ ಹುಡುಗ ಸುನಂದಮ್ಮ. ನಾನು ಒಪ್ಪಿದರೂ

ಅವನು ಒಪ್ಪುವುದಿಲ್ಲ. ಕಮಲನ ಯಜಮಾನರು ಜೀವಂತರಾಗಿದ್ದಾಗ, ಅವರ ಮನೆಯಲ್ಲಿರಲಿ ಎಂದು ಬಿಟ್ಟು ನೋಡಿದೆವು. ಒಂದೆರಡು ತಿಂಗಳಲ್ಲಿಯೇ ನಾಣಿ ಹಾಸ್ಟಲ್ಲಿಗೆ ಬದಲಾಯಿಸಿದ. – ನಿಮ್ಮ ಮಗ ಮುಂಬಯಿಯಲ್ಲಿರುವುದು ನನಗೊಂದು ಧೈರ್ಯ. ಆಗಾಗ್ಗೆ ನಾಣಿಯನ್ನು ವಿಚಾರಿಸಿಕೊಂಡು, ಅವನ ಯೋಗಕ್ಷೇಮ ತಿಳಿಸುತ್ತಿರು ಎಂದು ಬರೆಯಿರಿ."

"ಒಂದು ಕೆಲಸ ಮಾಡೋಣ ರುಕ್ಮಿಣಮ್ಮ. ನಾನು ರಘೂಗೆ ಕಾಗದ ಬರೆಯುತ್ತೇನೆ – ಅವನು ರೈಲಿನ ಬಳಿಗೆ ಬಂದು ನಾಣಿಯನ್ನು ಮನೆಗೆ ಕರೆದುಕೊಂಡು ಹೋಗಲಿ. ನಾಣಿಯು ಜತೆಯಲ್ಲಿಯೇ ಇದ್ದು ರಘು ಎಲ್ಲಾ ಅನುಕೂಲ ಮಾಡಿಕೊಡುತ್ತಾನೆ. ಒಂದು ವೇಳೆ ಅವರಿಬ್ಬರಿಗೂ ಕೂಡಿ, ನಾಣಿ ರಘು ಜತೆಯಲ್ಲಿರಲು ಒಪ್ಪುವುದಾದರೆ ಹಾಗೇ ಮಾಡಲಿ."

"ಆಗಬಹುದು. ನಾಣಿ ರೈಲಿನಲ್ಲಿ ಹೋಗಲ್ಲ ಸುನಂದಮ್ಮ. ನಮ್ಮ ಅಳಿಯಂದಿರು ವಿಮಾನದಲ್ಲಿ ಕರೆದುಕೊಂಡು ಹೋಗುತ್ತಾರೆ."

"ಏರೋಡ್ರೋಮಿಗೇ ಬಂದು ನಾಣಿಯನ್ನು ನೋಡು ಎಂದು ಬರೆಯತ್ತೇನೆ."

"ಅವರ ಕೆಲಸ ಕಾರ್ಯ ಎಷ್ಟಿರುತ್ತದೆಯೋ ಏನೋ – ತುಂಬ ತೊಂದರೆಯಾಗುತ್ತದೆ."

"ಇತರರಿಗಾಗಿ ನೀವು ತೆಗೆದುಕೊಳ್ಳುವ ಒಂದು ಭಾಗವಿಲ್ರೀ ಇದು."

ರುಕ್ಮಿಣಿ ಅವರ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳದೆ ಏನನ್ನೋ ಯೋಚಿಸುತ್ತಿದ್ದಳು. ಸುನಂದಮ್ಮ ರುಕ್ಮಿಣಿಯ ಲಕ್ಷ್ಯ ತಮ್ಮೆಡೆಗೆ ಸೆಳೆದುಕೊಂಡು

"ರುಕ್ಮಿಣಮ್ಮ, ನೀವೂ ನಾನೂ ಒಂದೇ ವಯಸ್ಸಿನವರೆಂದು ಕಾಣುತ್ತದೆ."

"ಇಲ್ರೀ – ನೀವು ನನಗಿಂತ ಒಂದು ವರ್ಷಕ್ಕೆ ದೊಡ್ಡವರು."

" ನನ್ನ ವಯಸ್ಸಿನ ಪ್ರೌಢಿಮೆ ಉಪಯೋಗಿಸಿಕೊಳ್ಳಬೇಕೆಂದಿದ್ದೇನೆ."

" ಬೇಡವೆಂದವರು ಯಾರಮ್ಮ ? "

" ನಿಮ್ಮ ಆರೋಗ್ಯ ಏಕೆ ಹೀಗೆ ನಿರ್ಲಕ್ಷ್ಯ ಮಾಡುತ್ತಿರುವಿರಿ ? "

" ನನ್ನ ಆರೋಗ್ಯ ಚೆನ್ನಾಗಿದೆ ಸುನಂದಮ್ಮ."

" ನನ್ನ ಕಣ್ಣು ಕಟ್ಟಬೇಡಿ ರುಕ್ಮಿಣಮ್ಮ. ನಿಮ್ಮ ಯಜಮಾನರು ನಮ್ಮವರ ಹತ್ತಿರ ಈ ವಿಷಯ ಪ್ರಸ್ತಾಪಿಸಿ ಕಣ್ಣೀರು ಹಾಕಿಕೊಂಡರು."

" ಕಣ್ಣೀರು ಹಾಕಿಕೊಂಡರೆ....? "

" ಆಸ್ಪತ್ರೆಗೆ ಕರೆದುಕೊಂಡು ಹೋಗಿ ತೋರಿಸುತ್ತೇನೆಂದರೂ ರುಕ್ಮಿಣಿ ಒಪ್ಪುವುದಿಲ್ಲ. ಒಳಗೇ ನವೆದು ನವೆದು ಕಡ್ಡಿಯಾಗುತ್ತಿದ್ದಾಳೆ ಎಂದು ದುಃಖಪಟ್ಟುಕೊಂಡರು."

" ತಪ್ಪು ಮಾಡಿದೆ ಸುನಂದಮ್ಮ. ಅವರ ಕಣ್ಣಲ್ಲಿ ನೀರು ಹಾಕಿಸುವುದಿಲ್ಲ."

" ನಿಮ್ಮ ಜೀವ ನಿಮ್ಮದಲ್ಲರಿ ರುಕ್ಮಿಣಮ್ಮ. ನಮಗೆಲ್ಲಾ ಅದನ್ನು ಹಂಚಿಕೊಟ್ಟುಬಿಟ್ಟದ್ದೀರಿ. ನಮ್ಮ ವಸ್ತುವನ್ನು ನಿಮ್ಮಲ್ಲಿ ಮುಡಿಪಾಗಿ ಇಟ್ಟದ್ದೇವೆ. ಅದನ್ನು ನಿರ್ಲಕ್ಷ್ಯ ಮಾಡುವ ಅಧಿಕಾರ ನಿಮಗಿಲ್ಲ."

" ನನಗಾಗಿ ಎಲ್ಲರೂ ಎಷ್ಟು ಒದ್ದುಕೊಳ್ಳುತ್ತೀರಮ್ಮ."

" ಏನು ಒದ್ದುಕೊಳ್ಳೋದೋ ಬಿಡ್ರಿ – ನಮ್ಮ ಮಾತು ನೀವೆಲ್ಲಿ ಲಕ್ಷಿಸುತ್ತೀರಿ."

" ಇಲ್ಲ ಸುನಂದಮ್ಮ. ಈ ವಾರದಲ್ಲಿಯೇ ಮೈಸೂರಿಗೆ ಹೋಗಿ ಬರುತ್ತೇನೆ."

ಎಂದು ಆಶ್ವಾಸನವಿತ್ತಮೇಲೆ ಸುನಂದಮ್ಮ ತೃಪ್ತರಾದರು.

ಬುಧವಾರ ಸಂಜೆಗೇ ಹೊರಡಲು ನಾರಾಯಣಸ್ವಾಮಿ ಸಿದ್ಧವಾದ. ' ಗುರುವಾರ, ಊಟ ಮುಗಿಸಿಕೊಂಡು ಬಸ್ಸಿನಲ್ಲಿ ಹೋಗು' ಎಂದು ರುಕ್ಮಿಣಮ್ಮ ಮಗನಿಗೆ ತಿಳಿಸಿದರು. ನಾರಾಯಣಸ್ವಾಮಿ

ಗೊಣಗುಟ್ಟಿಕೊಂಡು ಒಪ್ಪಿಗೆಯನ್ನಿತ್ತ.

ಗುರುವಾರ ಬೆಳಿಗ್ಗೆ ರುಕ್ಮಿಣಿಯೇ ಮಗನಿಗೆ ಎಣ್ಣೆ ಒತ್ತಿ ನೀರೆರೆದಳು.

ನರಸಿಂಹಮೂರ್ತ್ಯಾಚಾರ್ಯರು ಬೆಳಿಗ್ಗೆಯ ಪೂಜೆಯನ್ನು ಸಾಂಗವಾಗಿ ನೆರವೇರಿಸಿದ್ದರು. ಅವರ ಪೂಜೆಯಿಂದ ರುಕ್ಮಿಣಿ ತೃಪ್ತಿ ಪಟ್ಟುಕೊಳ್ಳಲಿಲ್ಲ. ದೇವರಿಗೆ ತುಪ್ಪದ ದೀಪ ಹಚ್ಚಿಟ್ಟು ತಾನು ಸಾಂಗವಾಗಿ ಪೂಜೆ ಮಾಡಿ, ಮಗನನ್ನು ಕರೆದು ಅವನಿಗೆ ಮಡಿಯಲ್ಲಿ ತೀರ್ಥ ಪ್ರಸಾದ ಕೊಟ್ಟಳು.

ಮಧ್ಯಾಹ್ನ ಪಾಯಿಸದಡಿಗೆ ಮಾಡಿಸಿ ಮಗನಿಗೆ ರುಕ್ಮಿಣಿಯೇ ಬಡಿಸಿದಳು. ಊಟ ಮುಗಿದ ಮೇಲೆ ನಾರಾಯಣಸ್ವಾಮಿ ತನ್ನ ರೂಮು ನೇರಿ, ಬಟ್ಟೆ ಬರೆ ಕಟ್ಟಿಕೊಳ್ಳುವುದರಲ್ಲಿ ಉದ್ಯುಕ್ತನಾಗಿದ್ದ. ಕೋಟು, ಪ್ಯಾಂಟು, ಟೈಗಳು, ಷರ್ಟುಗಳು, ಕಾಲರುಗಳು ಮೊದಲಾದ ನೂರಾರು ಪರಿಕರಗಳನ್ನು ಮಡಿಸುವುದಕ್ಕೆ ಅವನಿಗೆ ನಾಕಷ್ಟು ಕಾಲ ಹಿಡಿಯಿತು.

ನಾರಾಯಣಸ್ವಾಮಿ ಪ್ಯಾಕಿಂಗ್‌ನಲ್ಲಿ ನಿಮಗ್ನನಾಗಿದ್ದಾಗ ರುಕ್ಮಿಣಿ ಮೆಲ್ಲನೆ ರೂಮು ಪ್ರವೇಶಿಸಿದಳು. ತಾಯಿಯನ್ನು ಕಂಡು ಬೆಚ್ಚಿಬಿದ್ದು

" ಯಾರೋಂತಿದ್ದೆ. ನೀನೇ ! ಊಟ ಆಯಿತೇನಮ್ಮ?"

" ಆಯಿತಪ್ಪ. ವಿಮಾನ ನಿಲ್ದಾಣದ ಹತ್ತಿರ ಸುನಂದಮ್ಮನ ಮಗ ರಘು ಬಂದಿರುತ್ತಾರೆ. ಅವರ ಜತೆಯಲ್ಲಿ ಹೋಗು."

" ನಾನು ಅವರ ಮನೆಯಲ್ಲಿ ಇರುವುದಿಲ್ಲಮ್ಮ."

" ಇರು ಎಂದು ನಾನು ಒತ್ತಾಯ ಮಾಡುತ್ತಿಲ್ಲ ನಾಣಿ. ಅವರು ವಿಶ್ವಾಸದಿಂದ ನಿನ್ನ ಎದುರುಗೊಳ್ಳಲು ಬಂದರೆ ತಿರಸ್ಕರಿಸುವುದು ನ್ಯಾಯವಲ್ಲ. ನಾಳೆ ಅವರ ಮನೆಗೆ ಹೋಗು. ನಿನ್ನ ಹಾಸ್ಟಲ್ ಎಲ್ಲಿದೆ ನೋಡಿಕೋ. ನಿನಗೆ ಹೇಗೆ ಅನುಕೂಲವೋ ಹಾಗೆ ಮಾಡಪ್ಪ. ಅವರ ಮನಸ್ಸು ಮಾತ್ರ ನೋಯಿಸಬೇಡ – ಯಾರ ಮನಸ್ಸೂ

ನೋಯಿಸಬೇಡ."

"ನಿನ್ನದು ಬಹಳ ದಾಕ್ಷಿಣ್ಯಪ್ರಕೃತಿ ಕಣೇಮ್ಮ."

"ನಾಣಿ, ವಾರಕ್ಕೆರಡಾದರೂ ಕಾಗದ ಬರೆಯುತ್ತಿರುತ್ತೀಯಾ?"

"ಖಂಡಿತ ಬರೆಯುತ್ತೇನಮ್ಮ."

"ಹೆಚ್ಚೇನು ಬೇಡ. ಕ್ಷೇಮವಾಗಿದ್ದೇನೆ ಎಂದು ಬರೆದು ಹಾಕಿದರೆ ಸಾಕು – ಒಂದು ಪೋಸ್ಟ್‌ಕಾರ್ಡ್ ಬರೆದರೂ ಸಾಕು."

"ಹಾಗೇ ಆಗಲಮ್ಮ."

"ಆರೋಗ್ಯ ಚೆನ್ನಾಗಿ ನೋಡಿಕೋ. ಮೈಯಲ್ಲಿ ಆಲಸ್ಯವಾದರೆ ರಘು ಅವರ ಸಹಾಯ ತೆಗೆದುಕೊ. ನಿನ್ನ ಭಾವನವರೂ ಮುಂಬಯಿಗೆ ಬರುತ್ತಿರುತ್ತಾರೆ. ಅವರನ್ನು ಆಗಾಗ್ಗೆ ಕಾಣುತ್ತಿರು."

ರುಕ್ಮಿಣಮ್ಮನ ಧ್ವನಿ ಗದ್ಗದವಾದುದನ್ನು ಕಂಡು

"ಇದೇಕಮ್ಮ ಇಷ್ಟು ಚಿಂತೆ ಮಾಡುತ್ತೀ. ಮುಂಬಯಿಗೆ ಹೋಗಿ ಬರುವುದು ಮೈಸೂರಿಗೆ ಹೋಗಿ ಬರುವುದರಷ್ಟೇ ಸುಲಭ ವಾಗಿದೆಯಲ್ಲ – ಬೆಳಿಗ್ಗೆ ಮುಂಬಯಿಗೆ ಹೋಗಿ ಸಂಜೆಗೆ ಹಿಂದಿರುಗ ಬಹುದು."

"ನಿಜ – ನೀನು ಹೇಳುವುದು ನಿಜ."

"ಯೋಚನೆ ಮಾಡಬೇಡಮ್ಮ – ರಜಾ ಬಂದಾಗ ಬರುತ್ತೇನೆ."

"ನಾಣಿ, ನಿಮ್ಮಮ್ಮ ಓದಿದವಳಲ್ಲ – ಬುದ್ಧಿವಂತಳಲ್ಲ...."

"ಬಿಡಮ್ಮ – ಯಾವ ಓದಿದವರಿಗೆ ನಿನ್ನ ತಿಳುವಳಿಕೆ ಇರುತ್ತದೆ."

"ನನ್ನ ಮಾತು ಕೇಳು – ನಾನು ಹೆಚ್ಚು ಕಾಲವಿದ್ದು ನಿನಗೆ ಬುದ್ಧಿ ಮಾತು ಹೇಳುತ್ತೇನೆನ್ನುವ ಧೈರ್ಯ ನನಗಿಲ್ಲ. ಇನ್ನೂ ಒಂದೆರಡು ಕರ್ತವ್ಯಗಳಿವೆ. ಅವುಗಳನ್ನು ಪೂರೈಸಬೇಕಾಗಿದೆ. ಈ ಸಾರೆ ನೀನು ಬಂದಾಗ ನಿನ್ನ ಮದುವೆಯನ್ನು ಮಾಡಿಬಿಡಬೇಕು. ಸಾಧ್ಯವಾದರೆ ಪದ್ಮನದೂ ನಿನ್ನದು ಒಟ್ಟಿಗೆ ಮಾಡಿಬಿಡುವ ಎಂಬ ಯೋಚನೆಯೂ ಇದೆ."

" ನನ್ನ ಕೋರ್ಸ್ ಮುಗಿಯುವವರೆಗೆ ನಾನು ಮದುವೆ ಯಾಗುವುದಿಲ್ಲಮ್ಮ."

" ಆಮೇಲೆ...."

" ಆಮೇಲೆ ಆಗಬಹುದು."

" ಕಮಲನಿಗೆ ಯಾವುದಾದರೂ ಒಂದು ನೆಲೆಯಾಗಬೇಕು. ಅವಳು ಕಾಲೇಜ್ ಶಿಕ್ಷಣ ಮುಗಿಸಿಕೊಂಡುಬಿಟ್ಟರೆ ನನಗೆ ಯೋಚನೆ ಯಿಲ್ಲ. ನೀನು ದೊಡ್ಡ ಮಗ. ಇನ್ನು ಮೇಲೆ ಇವೆಲ್ಲಾ ನೀನು ನಿರ್ವಹಿಸಬೇಕಾದ ಜವಾಬ್ದಾರಿಗಳು. ಅವರ ಆರೋಗ್ಯ ಹೇಗಿದೆ ನಿನಗೆ ಗೊತ್ತೇ ಇದೆ."

ಯಾವ ಉದ್ದೇಶದಿಂದ ತಾಯಿ ಇವುಗಳನ್ನೆಲ್ಲಾ ಹೇಳುತ್ತಿದ್ದಾ ಳೆಂಬುದು ನಾಣಿಗೆ ಅರ್ಥವಾಗಲಿಲ್ಲ. ಪ್ರಯಾಣದ ಉತ್ಸಾಹದಲ್ಲಿದ್ದ ಅವನಿಗೆ ಸಂಸಾರದ, ಹಳೆಯ ಕಥೆ ಕೇಳುವ ಇಷ್ಟವೂ ಇರಲಿಲ್ಲ. ಆದರೆ ಸ್ಪಷ್ಟವಾಗಿ ತಾಯಿಯನ್ನೆದುರಿಸುವ ಧೈರ್ಯ ಸಾಲದು. ಒಂದೆರಡು ಬಾರಿ ಗಡಿಯಾರ ನೋಡಿಕೊಂಡು. ತನ್ನ ಚಿಂತೆಯಲ್ಲಿಯೇ ಮುಳುಗಿದ್ದ. ರುಕ್ಮಿಣಿ ಅವನು ಕೊಟ್ಟ ಸೂಚನೆಯನ್ನು ಗಮನಿಸಲಿಲ್ಲ.

" ಜೀವನದಲ್ಲಿ ಯಾವದು ಶಾಶ್ವತವೆಂದು ನಾನೂ ಬಹಳ ಯೋಚನೆ ಮಾಡಿದ್ದೇನೆ ನಾಣಿ. ಆಯಸ್ಸೇ, ಐಶ್ವರ್ಯವೇ, ಕೀರ್ತಿಯೇ – ಯಾವದು ಶಾಶ್ವತ ? ನಿನ್ನೆ ಗಟ್ಟಿಯಾಗಿದ್ದವರು ಇವತ್ತಿಲ್ಲ – ನಿನ್ನೆ ಸಂಪತ್ತಿನ ಶಿಖರದಲ್ಲಿದ್ದವರು ಇಂದು ನೆಲದ ಮೇಲೆ – ನಿನ್ನೆ ಲೋಕಮಾನ್ಯರಾಗಿದ್ದವರು ಇಂದು ಲೋಕತ್ಯಾಜ್ಯರು. ಉಳಿಯುವುದು ಯಾವದು – ನಾವಿಷ್ಟು ಬನ್ನಬಡುತ್ತಿರುವುದು ಯಾವ ದನ್ನು ಉಳಿಸಿಕೊಳ್ಳುವುದಕ್ಕೆ."

" ಉಳಿಯುವುದು ಯಾವದೂ ಇಲ್ಲವೇನಮ್ಮ?"

" ಇದೆ. ಇದೆಯಪ್ಪ. **ಸತ್ಯ – ಪ್ರೇಮ ಜ್ಞಾನವೇ** ಉಳಿಯುವುದು. ಇದನ್ನೇ ನಾವು **ದೇವರು** ಎನ್ನುತ್ತೇವೆ. ಒಂದು ಕ್ಷಣಕಾಲ ನಾವು ಈ ಸಂಸಾರಬಂಧನ ಸೀಗಿಕೊಂಡು ಮೇಲಕ್ಕೆದ್ದರೆ

ದೇವರ ದರ್ಶನವಾಗುತ್ತದೆ. ಜಗತ್ತಿನಲ್ಲಿಲ್ಲದ ಆನಂದ ನಮ್ಮದಾಗುತ್ತದೆ."

"ಎಲ್ಲರೂ ಸಂಸಾರ ಬಿಟ್ಟು ದೇವರನ್ನು ಹುಡುಕಿಕೊಂಡು ಹೋದರೆ ಪ್ರಪಂಚದ ಗತಿ ?"

"ದೇವರನ್ನು ಹುಡುಕಿಕೊಂಡು ಹೋಗಬೇಕಾದರೆ ಪ್ರಪಂಚ ಬಿಡಬೇಕಾಗಿಲ್ಲ ನಾಣಿ. ಪ್ರಪಂಚದಲ್ಲಿಯೂ ದೇವರನ್ನು ಕಾಣ ಬಹುದು. ಈ ಪ್ರಪಂಚ ಸೃಷ್ಟಿಸಿದವರು ಯಾರು – ದೇವರಲ್ಲವೇ ? ತಾನು ಕಟ್ಟಿದ ಸಾಮ್ರಾಜ್ಯವನ್ನು ತಾನೇ ಕಡೆಗಾಣಿಸುವನೇ ? "

" ಪ್ರಪಂಚದಲ್ಲಿದ್ದು ಪ್ರಪಂಚಿಯಾಗದಿರುವುದು ಹೇಗಮ್ಮ ? "

"ನಿಜಗುಣ ಶಿವಯೋಗಿ ಇದನ್ನು ಸುಂದರವಾಗಿ ವರ್ಣಿ ಸಿದ್ದಾನೆ. ಮಗು ತಾಯಿಯ ಒಂದು ಮೊಲೆಯೂಡುತ್ತಿದ್ದರೂ ಇನ್ನೊಂದು ಮೊಲೆಯ ಮೇಲೆ ಕೈಯಿಟ್ಟಿರುವುದಂತೆ."

"ತರುಣಿಯ ಮೊಲೆಯೊಂದನುಣುತಲಣುಗಸಸ್ಯ
ಕರದೊಳುಳಿದ ಕುಚಾಗ್ರವ ನೋವ್ರುವಂತೆ ||
ಜಾಣನು ಲೌಕಿಕ ಪರಮಾರ್ಥವೆರಡನು
ಮಾಣದೆ ಕೂಡಿ ನಡೆಸುತಿಹನಿಂತು || "

ಈ ಬಗೆಯ ಮನೋವೃತ್ತಿ ಬೆಳೆಯಬೇಕಾದರೆ ಸತತ ಧ್ಯಾನ ಬೇಕು."

" ನಾನು ಹಾರ್ಡ್ ರಿಯಲಿಸ್ಟ್ (hard realist) ಅಮ್ಮ – ನನಗೆ ವೇದಾಂತ ಸ್ವಲ್ಪವೂ ಅರ್ಥವಾಗುವುದಿಲ್ಲ."

"ಜೀವನ, ವೇದಾಂತ ಬೇರೆಯಲ್ಲ ನಾಣಿ. ಎರಡೂ ಒಂದ ಕ್ಕೊಂದು ನಿಕಟವಾಗಿ ಹೊಂದಿಕೊಂಡಿವೆ. ಹಸಿದು ಬಂದವರಿಗೆ ಅನ್ನವಿಕ್ಕಬೇಕು – ಈ ಮಾತು ಎಲ್ಲರೂ ಒಪ್ಪುತ್ತಾರಷ್ಟೆ. ಇದೇ ವೇದಾಂತ. ಜೀವನದಲ್ಲಿ ಸಮಾವೇಶವಾಗದ ಒಣ ವೇದಾಂತ ಗೊಡ್ಡು ಹರಟೆ. ಅದರಿಂದ ಇಹಕ್ಕೂ ಪ್ರಯೋಜನವಿಲ್ಲ, ಪರಕ್ಕೂ ಲಾಭವಿಲ್ಲ."

"ನಾನು ಎಲ್ಲೇ ಇದ್ದರೂ, ಏನೇ ಮಾಡಿದರೂ ನಿನಗೂ ಅಣ್ಣನಿಗೂ ಅಗೌರವ ತರುವ ಕೆಲಸ ಮಾಡುವುದಿಲ್ಲಮ್ಮ. ನೀನು ಮನಸ್ಸಿಗೆ ಯಾವ ವ್ಯಥೆಯನ್ನೂ ಹಚ್ಚಿಕೊಳ್ಳಬೇಡ."

ರುಕ್ಮಿಣಿಯ ಹೃದಯಕ್ಕೆ ಹಾಲೆರೆದಂತಾಯಿತು. ಮಗನ ಮಾತುಗಳು ಅವಳ ಅಂತರಂಗ ವಿಪ್ಲವದ ಆವೇಗವನ್ನು ಕಡಿಮೆ ಮಾಡಿತು. ಮಗನನ್ನಪ್ಪಿ ಕಣ್ಣೀರು ಸುರಿಸುತ್ತಾ

"ನಾಣಿ, ನಾನು ಪುನಃ ನಿನ್ನನ್ನು ನೋಡುತ್ತೇನೆಯೋ ಇಲ್ಲವೋ – ನಿನ್ನ ಅಭ್ಯುದಯವನ್ನು ಸದಾ ಬಯಸುತ್ತೇನೆ ಕಂದ. ನನ್ನ ಮಗ ದೊಡ್ಡ ಆಲದಮರದ ಹಾಗೆ ಬೆಳೆದು ನೂರಾರು – ನಾವಿರಾರು ಜನಗಳಿಗೆ ಆಶ್ರಯ ಕೊಡಲಿ – ಲೋಕದ ದುಃಖವನ್ನು ನೀಗಿಸುವ ಸಾಧನವಾಗಲಿ ಎಂದು ಗುರುರಾಯನನ್ನು ಪ್ರಾರ್ಥಿಸುತ್ತೇನೆ" ಎಂದಳು.

ಬಸ್ಸಿಗೆ ವೇಳೆಯಾಯಿತೆಂದು ಕಮಲ ತಾಯಿ ಮಗನನ್ನೆಚ್ಚರಿಸಿದಳು.

ಅಂದೇ ನಾರಾಯಣಸ್ವಾಮಿ ಬೆಂಗಳೂರಿಗೆ ಪ್ರಯಾಣ ಬೆಳಸಿದ.

ಶುಕ್ರವಾರ ಬೆಳಿಗ್ಗೆ ಶ್ರೀದೇವಿ, ರಾಮು ಏರೋಡ್ರೋಮಿನವರೆಗೆ ಹೋಗಿ ನಾಣಿಯನ್ನು ಬೀಳ್ಕೊಟ್ಟರು.

ಮೇಘಮಂಡಲವನ್ನು ಭೇದಿಸಿಕೊಂಡು ಹೋಗುತ್ತಿದ್ದ ವಿಮಾನದಲ್ಲಿ ನಾಣಿ ಪ್ರಯಾಣ ಮಾಡುತ್ತಿದ್ದ. ಗಾಜಿನ ಕಿಟಕಿಯಾಚೆಯೆಲ್ಲಾ ಮೋಡಗಳ ಚಲನವಲನ – ದೂರದಲ್ಲಿದ್ದ ಹಸಿರು ಗದ್ದೆಗಳು ಸಣ್ಣ ಬಿಲ್ಲೆಗಳಂತೆ ಕಾಣುತ್ತಿದ್ದವು. ಕಿಟಕಿಗೆ ಹಾಕಿದ್ದ ಗಾಜಿನ ಮೇಲೆ ಮಂಜು ಕವಿದು ಹೊರಗಿನ ದೃಶ್ಯವನ್ನೂ ಮರೆಮಾಡುತ್ತಿತ್ತು.

ಮಂಜು ಕ್ರಮಕ್ರಮೇಣ ಕರಗಿ ನೀರಾಗಿ ಕೆಳಗಿಳಿಯುತ್ತಿತ್ತು. ಆಗ ಗಾಜಿನ ಮೇಲೆ ಒಂದು ಮುಖ ಸ್ಪಷ್ಟವಾಗಿ ರೂಪ ತಳೆಯುತ್ತಿತ್ತು.

'ಅದೇ ಮುಖ – ರುಕ್ಮಿಣಿಯದು – ಜೀವನದ ಯಜ್ಞಮಂಟಪದ

ಅಧ್ವರ್ಯುವಾಗಿ ಕುಳಿತಿದ್ದ ಯೋಗಿನಿ – ಸತ್ಯ, ಪ್ರೇಮ, ಜ್ಞಾನದ ಓಂಕಾರ ಸತತವಾಗಿ ತಾಯಿಯ ಬಾಯಿಂದ ಹೊರಡುತ್ತಿದೆ.'

ನಾಣಿಯ ಹೃದಯದಲ್ಲಿ ಏನೋ ಉಮ್ಮಳ – ತಳಮಳ. ಏನೆಂಬುದು ಅವನಿಗೇ ಅರ್ಥವಾಗಲೊಲ್ಲದು.

೧೭

ಬೇಸಿಗೆಯ ರಜಾಕಳೆದು ಕಾಲೇಜ್ ಬಾಗಿಲು ತೆಗೆಯಿತು.

ಮೈಸೂರಿಗೆ ಯಾರು ಹೋಗುವುದೆಂಬುದರ ಬಗ್ಗೆ ಮನೆಯಲ್ಲಿ ಜಿಜ್ಞಾಸೆಯೆದ್ದಿತು.

ಕಮಲನಂತೂ ಹೋಗಲೇಬೇಕಾಗಿತ್ತು. ಪದ್ಮನೂ ಹೋಗಲಿ ಎಂದು ಮಾಧವರಾಯ ಹೇಳಿದ.

" ಮದುವೆ ಮುಂದಿಟ್ಟುಕೊಂಡು ಅವಳು ಕಾಲೇಜಿಗೆ ಹೋಗು ವುದೇ "

ಎಂದು ರುಕ್ಮಿಣಮ್ಮ ಕೇಳಿದಳು.

" ಮದುವೆಗಿನ್ನೂ ಮೂರುನಾಲ್ಕು ತಿಂಗಳಿದೆಯಲ್ಲ. ಅವಳು ಮನೆಯಲ್ಲಿ ಕುಳಿತುಕೊಂಡೇನು ಮಾಡಬೇಕು."

ಗೋಪಮ್ಮನವರ ಅಭಿಪ್ರಾಯ ಕೇಳಿದಾಗ

" ಮದುವೆಯಾಗೋ ಹುಡುಗಿ ಹಾಡು ಹಸೆ ಕಲಿತುಕೊಳ್ಳ ಬೇಕು. ಮನೆಗೆಲಸ ತಿಳಿದುಕೊಳ್ಳಬೇಕು. ನಾಳೆ ಅತ್ತೆಯಮನೆಗೆ ಹೋದಾಗ ' ಎಂಥಾವರ ಮನೆ ಹುಡುಗಿ ತಂದುಕೊಂಡೆವಪ್ಪಾ ' ಎಂದು ಅವರ ಬಾಯಲ್ಲಿ ಬರಬಾರದು. ಪದ್ಮ ಮನೆಯಲ್ಲಿಯೇ ಇರಲಿ."

ಎಂದು ಅವರು ತಮ್ಮ ಕೊನೆಯ ತೀರ್ಪನ್ನೇ ಹೇಳಿಬಿಟ್ಟರು. ಕಾಲೇಜ್ ಕಾಟ ಕಳೆದುದೇ ಸಾಕೆಂದು ಪದ್ಮನೂ ಸಮಾಧಾನ

ಗೊಂಡಳು.

ಸಾಮಾನುಗಳ ಒತ್ತಡದಿಂದ, ಪದ್ಮನ ಟ್ರಂಕು ಬಿರಿಯಲಾರಂಭಿಸಿತ್ತು. ಪ್ರತಿನಿತ್ಯ ಸರ್ವೋತ್ತಮನಿಂದ ಕಾಗದ ಬರುತ್ತಿದ್ದುದಲ್ಲದೆ ಆಗಾಗ್ಗೆ ರಿಜಿಸ್ಟರ್ಡ್ ಪಾರ್ಸಲ್ಲೂ ಬರುತ್ತಿತ್ತು. ಕಣ್ಣಿಗೆ ಕಂಡುದನ್ನು ಕೊಂಡು ಸರ್ವೋತ್ತಮ ಹೆಂಡತಿಗೆ ಕಳಿಸುತ್ತಿದ್ದ. ಅವಳ ಟ್ರಂಕಿನ ತುಂಬ ಮುರ್ಷಿದಾಬಾದ್ ಸಾಮಾನುಗಳು, ಬಗೆಬಗೆಯ ಪರ್ಸುಗಳು, ಸೀರೆಗಳು, ಜೋಲಿಗಳು, ಪಾದರಕ್ಷೆಗಳು ಶೇಖರವಾದವು.

ಗಂಡನ ಕಾಗದ ಓದುವುದು – ಗಂಡನಿಗೆ ಕಾಗದ ಬರೆಯುವುದು ಎರಡಕ್ಕೇ ಪದ್ಮನಿಗೆ ಹೊತ್ತು ಸಾಲುತ್ತಿರಲಿಲ್ಲ. ತಮ್ಮ ಮನೆಗೆ ಬರುವುದಿಲ್ಲವೆಂದು ನಳಿನಿ ಆಕ್ಷೇಪಮಾಡುತ್ತಿದ್ದಳು. ನಳಿನಿಯ ಸ್ನೇಹವೂ ಅವಳಿಗೆ ಕಾಟವಾಗಿತ್ತು. ಪುರಸತ್ತು ಸಿಕ್ಕಿದರೆ ಪದ್ಮ ಗಂಡನ ಹಳೆಯ ಕಾಗದಗಳನ್ನೆಲ್ಲಾ ಪುನಃ ಪುನಃ ಓದುವಳು.

ರುಕ್ಮಿಣಮ್ಮ ಮಗಳನ್ನು ಯಾವ ಕೆಲಸಕ್ಕೂ ಕರೆಯುತ್ತಿರಲಿಲ್ಲ. ಪದ್ಮನನ್ನು ಕರೆದು ಕರೆದು ಬೇಸರಗೊಂಡು ಒಮ್ಮೊಮ್ಮೆ ಗೋದಮ್ಮನವರು

" ಈ ಪದ್ಮನ್ನ ಕರೆದೂ ಕರೆದೂ ಗಂಟಲೇ ಕಟ್ಟಿ ಹೋಗತ್ತಪ್ಪಾ"

ಎಂದು ಸಿಡಿಗುಟ್ಟಿದರೆ ರುಕ್ಮಿಣಿ ಮೃದುವಾಗಿ

" ಹೋಗಲಿ ಬಿಡಿಯಮ್ಮ – ಅವಳಿಗೇನು ತಿಳಿಯುತ್ತೆ. ನನಗೆ ಹೇಳಿ ನಾನು ಮಾಡುತ್ತೇನೆ. "

" ನೀನು ಮಾಡುವುದಿದ್ದೇ ಇದೆ. ಅವಳು ಕಲಿತುಕೊಳ್ಳುವುದು ಯಾವಾಗಲೇ ರುಕ್ಕೂ. "

" ತಲೆಯ ಮೇಲೆ ಜವಾಬ್ದಾರಿ ಬಿದ್ದರೆ ತಾನೇ ಬರುತ್ತದಮ್ಮ. ಒಬ್ಬರು ಕಲಿಸಬೇಕಾಗಿಯೇ ಇಲ್ಲ. ಇಂದೋ ನಾಳೆಯೋ ಮಗು ಮನೆಬಿಟ್ಟು ಹೊರಟು ಹೋಗುತ್ತದೆ. ಇರುವವರೆಗೆ ಸ್ವತಂತ್ರವಾಗಿ ಇದ್ದು ಬಿಡಲಿ."

" ಆ ಪದ್ದಿ ತಲೆ ನೀನೇ ಕೆಡಿಸುತ್ತೀ ಕಣೇ ರಕ್ಕೂ. "

" ಹಿರಿಯರ ಮೇಲ್ಪಂಕ್ತಿ. "

" ನಾನು ನಿನ್ನ ತಲೆ ಕೆಡಿಸಿದೆನೇ. "

" ಇವತ್ತಿಗೂ ಕೆಡಿಸುತ್ತಿರುವಿರಿ. "

" ನಿನ್ನ ಕೈಯಲ್ಲಿ ವಾದಮಾಡುವುದಕ್ಕೆ ಯಾರಿಗೆ ಸಾಧ್ಯವೇ ನಮ್ಮಮ್ಮ. "

ಎಂದು ಗೋದಮ್ಮ ನಕ್ಕು ಬಿಡುತ್ತಿದ್ದರು.

ಕಮಲ ಮೈಸೂರಿಗೆ ಹಿಂದಿರುಗಿ ಕಾಲೇಜ್ ಸೇರಿದಳು. ಹಾಸ್ಟೆಲ್ಲಿನಲ್ಲಿ ಅವಳು ಮೊದಲು ವಾಸವಾಗಿದ್ದ ರೂಮೇ ಅವಳಿಗೆ ಸಿಕ್ಕಿತು. ತೆರುವಾಗಿದ್ದ ಪದ್ಮನ ಸ್ಥಾನದಲ್ಲಿ ಅಂಬುಜವಲ್ಲಿ ಬಂದಳು.

ಮನೋರಮಾ ಕಾಲೇಜಿಗೆ ಬರುವುದಾದರೆ ಅವಳನ್ನೇ ರೂಮ್ ಮೇಟಾಗಿ ತೆಗೆದುಕೊಳ್ಳಬೇಕೆಂದು ಕಮಲ ನಿಶ್ಚಯಿಸಿದ್ದಳು. ಮನೋರಮಾ ಬಂದಿರಲಿಲ್ಲ. ಅವಳು ಬರುವ ಸೂಚನೆಯೂ ಕಂಡು ಬರಲಿಲ್ಲ.

ಹಾಸ್ಟಲ್ಲಿನಲ್ಲಿ ಕಮಲನಿಗೆ ಮೊದಲು ಸ್ವಾಗತ ಬಯಸಿದವಳು ಲೀಲಾವತಿ. ಅವಳೇ ಸೌಜನ್ಯದಿಂದ ಮಾತನಾಡಿಸಿಕೊಂಡು ಬಂದ ಮೇಲೆ ತಾನು ಗಡುಸಾಗಿರುವುದು ನ್ಯಾಯವಲ್ಲವೆಂದು ಕಮಲನೂ ಸೌಜನ್ಯದಿಂದ ಉತ್ತರವಿತ್ತಳು.

" ನಿಮ್ಮ ತಂಗಿ ಬರಲಿಲ್ಲವೇನ್ರೀ ಕಮಲಮ್ಮ."

" ಇಲ್ಲಮ್ಮ. ಅವಳ ಮದುವೆ ಗೊತ್ತಾಗಿದೆ."

" ಯಾವಾಗ ? "

" ಇದೇ ಸೆಪ್ಟೆಂಬರ್, ಅಕ್ಟೋಬರ್ ತಿಂಗಳಿನಲ್ಲಿ."

" ಇನ್ನೊಂದು ಯಜ್ಞಪಶು.... "

" ಹಾಗೇಕೆ ಹೇಳುವಿರಿ ಲೀಲಾವತಿ."

" ಹೆಣ್ಣುಮಕ್ಕಳಲ್ಲಿ ಟ್ಯಾಲೆಂಟ್ (Talent) ಇರುವವರೇ ಕಡಿಮೆ. ಟ್ಯಾಲೆಂಟಿರುವ ಒಬ್ಬಿಬ್ಬರೂ ಹೀಗಾಗುತ್ತಾರೆ."

"ನೀವು ಹೇಳುತ್ತಿರುವುದು ನನಗೆ ಅರ್ಥವಾಗುತ್ತಿಲ್ಲ ಲೀಲಾವತಿ."

"ಪದ್ಮ ಓದು ಮುಂದುವರಿಸಿದ್ದರೆ ರ್‍ಯಾಂಕ್ ತೆಗೆದು ಕೊಳ್ಳುತ್ತಿದ್ದರು."

"ರ್‍ಯಾಂಕ್ ತೆಗೆದುಕೊಂಡ ಮೇಲೆ ...."

"ಅವರಿಗೆ ಒಳ್ಳೆಯ ಕೆಲಸ ಸಿಕ್ಕುತ್ತಿತ್ತು."

"ಕೆಲಸ ಮಾಡಿಕೊಂಡೇನು ಮಾಡಬೇಕು?"

"ಸ್ವತಂತ್ರ ಜೀವನ ಮಾಡಬಹುದಾಗಿತ್ತು."

"ಸ್ವತಂತ್ರ ಜೀವನವೆಂದರೇನು ?"

"ಪುರುಷನ ಅಧೀನಕ್ಕೊಳಪಡದ ಜೀವನ."

"ಪುರುಷನ ಅಧೀನಕ್ಕೆ ಸ್ತ್ರೀ, ಸ್ತ್ರೀಯ ಅಧೀನಕ್ಕೆ ಪುರುಷ ಒಳ ಪಡದಿರಲು ಸಾಧ್ಯವೇ ?"

"ಏಕೆ ಸಾಧ್ಯವಿಲ್ಲ. ಆರ್ಥಿಕ ದೃಷ್ಟಿಯಲ್ಲಿ ನಾವು ಅಸ್ವತಂತ್ರ ರಾಗಿರುವೆವೆಂದಲ್ಲವೇ ಪುರುಷರು ನಮ್ಮ ಮೇಲೆ ದಬ್ಬಾಳಿಕೆ ನಡೆಸುವುದು ?"

"ಪುಸ್ತಕದ ಸಫ್ರೆಜಿಸಂ (Suffragism) ಒಪ್ಪಿಸಿದರೆ ಏನು ಸಾರ್ಥಕ ಲೀಲಾವತಿ. ಸ್ತ್ರೀ ಪುರುಷ ಸಂಬಂಧವನ್ನು ಅರ್ಥದ ಅಸ್ತಿ ಭಾರದ ಮೇಲೆ ನಿಲ್ಲಿಸುವುದು ಪಾಶ್ಚಾತ್ಯರಿಂದ ನಾವು ಕಲಿತಿರುವ ದುಶ್ಚಟ. ಸಮಾನ ಧರ್ಮ, ಸಮಾನ ಆಸೆ ಆಕಾಂಕ್ಷೆಗಳು ಸ್ತ್ರೀ ಪುರುಷರಿಬ್ಬರನ್ನೂ ಬಂಧಿಸಿರುವಾಗ ಸ್ವತಂತ್ರರು ಯಾರು– ಅಸ್ವತಂತ್ರರು ಯಾರು ? ಬಂಧಿಸುವವರು ಯಾರು, ಬಂದಿಗಳು ಯಾರು ? ನನ್ನ ಜೀವನವನ್ನೇ ದೃಷ್ಟಾಂತವಾಗಿ ಹೇಳುತ್ತೇನೆ ಕೇಳಿ. ಪ್ರತಿ ತಿಂಗಳ ಮೊದಲನೆಯ ತಾರೀಕು ಸಂಜೆ ತಮ್ಮ ಸಂಬಳವನ್ನು ತಂದು ನನ್ನ ಯಜಮಾನರು, ನನ್ನ ಕೈಯಲ್ಲಿಡುತ್ತಿದ್ದರು. ಅವರ ಸ್ವಂತ ಖರ್ಚಿಗೆ ಒಂದೆರಡು ರೂಪಾಯಿ ಬೇಕಾದರೂ ನಾನೇ ಕೊಡಬೇಕಾಗಿತ್ತು. ಯಾರ ಒತ್ತಾಯವೂ ಇಲ್ಲದೆ ಅವರೇ 'ಅಸ್ವಾತಂತ್ರ್ಯ'ವನ್ನು ತಂದು ಕೊಂಡಿದ್ದರು. ನನ್ನ ಕೈಯಲ್ಲಿಯೇ ಎಲ್ಲ ಹಣವಿದ್ದರೂ ನಾನು ಒಂದು ರೂಪಾಯಿ ಖರ್ಚು ಮಾಡಬೇಕಾದರೂ ಅವರ ಅಪ್ಪಣೆ ಪಡೆಯುತ್ತಿದ್ದೆ.

ನಾನೂ 'ಅಸ್ವತಂತ್ರ'ಳೇ! ನಮ್ಮಿಬ್ಬರ ಅಸ್ವಾತಂತ್ರ್ಯದಿಂದ 'ಪೂರ್ಣ ಸ್ವಾತಂತ್ರ್ಯ' ವಿಕಾಸವಾಗಿತ್ತು. ಸ್ವಾತಂತ್ರ್ಯದ ಗುರಿ ಸ್ವ-ಕರ್ತವ್ಯ ಪರಿಜ್ಞಾನವೇ ವಿನಾ ಸ್ವಚ್ಛಂದ ಪ್ರವರ್ತನೆಯಲ್ಲ!"

"ಇವೆಲ್ಲಾ ಓಬೀರಾಯನ ಕಾಲದ ಅಭಿಪ್ರಾಯಗಳು ಮಿಸೆಸ್. ಕಮಲಾ."

"ಹೊಸ ಅಭಿಪ್ರಾಯಗಳು ಯಾವುವು?"

"ಪುರುಷನ ಮುಂಗಮುಷ್ಟಿಯಿಂದ ಸ್ತ್ರೀ ಮುಕ್ತಳಾಗದಿದ್ದರೆ ಅವಳು ತನ್ನ ವಿಕಾಸ ಸಾಧಿಸುವುದು ಸಾಧ್ಯವೇ ಇಲ್ಲ."

"ಆರ್ಥಿಕ ಸ್ವಾತಂತ್ರ್ಯ ಸ್ತ್ರೀ ಸಾಧಿಸಬಹುದು. ಆದರೆ ಮಾನಸಿಕ ಸ್ವಾತಂತ್ರ್ಯ . . ."

"ಅದನ್ನೂ ಸಾಧಿಸಬಹುದು."

"ಸ್ತ್ರೀ ತನ್ನ ಪ್ರಕೃತಿಧರ್ಮವನ್ನೇ ದಮನಮಾಡಬೇಕೆಂದು ಹೇಳುವಿರಾ?"

"ಇಲ್ಲ. ಯಾವ ಬಂಧನಕ್ಕೂ ಸಿಕ್ಕಿಕೊಳ್ಳದೆ ತನ್ನ ಧರ್ಮವನ್ನು ಪರಿಪಾಲಿಸಬಹುದು."

"ಸ್ತ್ರೀಯೂ ಸ್ವಚ್ಛಂದ ವೃತ್ತಿಯನ್ನವಲಂಬಿಸಬಹುದೆಂದು ನೀವು ಸೂಚಿಸುತ್ತಿರುವಿರಿ. ಇದರಿಂದ ಸಂತಾನದ ಮೇಲೆ, ಜನಾಂಗದ ಮೇಲೆ ಆಗುವ ದುಷ್ಪರಿಣಾಮವನ್ನು ಲಕ್ಷಿಸಿರುವಿರಾ?"

"ಅಮೇರಿಕಾ, ಫ್ರಾನ್ಸ್, ಇಂಗ್ಲೆಂಡುಗಳಲ್ಲಿ ಏನಾಗಿದೆ?"

"ಏನು ಆಗಬೇಕೋ ಅದೇ ಆಗಿದೆ. ಟೆಸ್ಟ್ ಟ್ಯೂಬ್ ಬೇಬೀಸ್ (Test tube babies) ಕಾಲ ಬಂದಿದೆ – ಸಂಸಾರ ಜೀವನ ನಿರ್ನಾಮವಾಗಿದೆ. ಪರೀಕ್ಷಾಲಗ್ನ (Trial marriages)ಗಳ ವ್ಯಾಪ್ತಿಯಿಂದ ಸ್ತ್ರೀಪುರುಷ ಸಂಬಂಧ ಕೇವಲ ವ್ಯಾವಹಾರಿಕವಾಗಿದೆ. ಈ ದುಸ್ಥಿತಿ ಭಾರತಕ್ಕೂ ಬರಬೇಕೆಂದು ನಿಮ್ಮ ಇಚ್ಛೆಯೇ?"

"ಇದು ದುಸ್ಥಿತಿಯೋ ಸುಸ್ಥಿತಿಯೋ ನಾನರಿಯೆ. ಐರೋಪ್ಯ ದೇಶಗಳ ಸ್ತ್ರೀಯರು ನಮಗಿಂತ ಸುಖವಾಗಿರುವುದಂತೂ ಖಂಡಿತ."

"ಅವರು ನಿಜವಾಗಿಯೂ ಸುಖವಾಗಿದ್ದಾರೆಯೇ ಮಿಸ್. ಲೀಲಾವತಿ. ನಮ್ಮ ಸ್ತ್ರೀಯರು ದುಃಖಪಡುತ್ತಿದ್ದಾರೆಯೇ? — ಒಮ್ಮೆ ನಮ್ಮ ಮನೆಗೆ ಬನ್ನಿ. ನನ್ನ ತಾಯಿಯ ಪರಿಚಯಮಾಡಿ ಕೊಡುತ್ತೇನೆ. ಆಕೆ ತೀರ ಹಳೆಯಕಾಲದವರು. ಬೆಳಿಗ್ಗೆ ಎದ್ದರೆ ರಾತ್ರಿ ಮಲಗುವವರೆಗೆ ದುಡಿಯುವುದೊಂದೇ ಅವರಿಗೆ ಗೊತ್ತಿರುವುದು. ನಿಮ್ಮ ದೃಷ್ಟಿಯಲ್ಲಿ ನನ್ನ ತಾಯಿ ಶುದ್ಧ ಗ್ಯಾಲಿ ಸ್ಲೇವ್ (Gally slave). ಆದರೆ ಅವರಲ್ಲಿರುವ ತೃಪ್ತಿ, ಸಂತೋಷ, ಶಾಂತಿ ಮತ್ತೆಲ್ಲಿಯೂ ಕಂಡುಬರುವುದಿಲ್ಲವೇಕೆ? ಹಗಲು ಮುರಿಯುವಂತೆ ದುಡಿದು ರಾತ್ರಿ ತೋಳಿಗೆ ತಲೆಗೊಟ್ಟು ಮಲಗಿದ್ದಾಗ ನನ್ನ ತಾಯಿ ಮಗುವಿನಂತೆ ನಿದ್ರಿಸುತ್ತಾರೆ. ಮಲಗಿ ನಿದ್ರಿಸುತ್ತಿರುವ ನನ್ನ ತಾಯಿಯ ಮುಖ ನೋಡುವುದಕ್ಕೆ ಚೆನ್ನು. ನಮ್ಮ ಶಿಕ್ಷಣವಾಗಲಿ ನಾಗರಿಕತೆಯಾಗಲಿ ಆ ತೃಪ್ತಿಯನ್ನು ನಮಗೆ ತಂದುಕೊಟ್ಟಿಲ್ಲ. ಹಲವು ಹನ್ನೊಂದು ಚಿಂತೆ, ಆಸೆಗಳನ್ನಿಟ್ಟುಕೊಂಡಿರುವ ನಾವು ಮಲಗಿ ಸುಖವಾಗಿ ನಿದ್ರಿಸುತ್ತೇವೆಯೇ?"

ಲೀಲಾವತಿ ಬೆಕ್ಕಸ ಬೆರಗಾಗಿ

"ನಾನು ತಿಳಿದುಕೊಂಡಿರುವುದಕ್ಕಿಂತಲೂ ನೀವು ಹಿಂದುಳಿದಿರುವಿರಿ ಮಿಸೆಸ್ ಕಮಲಾ. ಪ್ರಾಚೀನ ಪ್ರಾರಬ್ಧ ಬಲವಾಗಿ ನಿಮ್ಮ ಹೆಗಲೇರಿದೆ."

"ಚಿಂತೆಯಿಲ್ಲಮ್ಮ. ಅರ್ವಾಚೀನಭೂತ ಕಬಳಿಸದಿದ್ದರೆ ಸಾಕು."

ಎಂದಳು. ಲೀಲಾವತಿ ಅಸಂತೋಷಗೊಂಡು ತನ್ನ ರೂಮಿಗೆ ಹೊರಟುಹೋದಳು. ತನ್ನ – ಲೀಲಾವತಿಯ ಸಂಬಂಧ ಕುದುರಿಸಿಕೊಂಡು, ಅದಕ್ಕೆ ಸ್ನೇಹದ ನೆಲೆಗಟ್ಟನ್ನು ಕೊಡಲು ಮಾಡಿದ ಪ್ರಯತ್ನ ಇಂತು ನಿಷ್ಫಲವಾಯಿತಲ್ಲಾ ಎಂದು ಕಮಲ ಖಿನ್ನಳಾದಳು. ಕಮಲನಿಗೂ ಲೀಲಾವತಿಗೂ ನಡೆದ ಸಂಭಾಷಣೆ ಕೇಳಿಸಿಕೊಂಡ ಅಂಬುಜವಲ್ಲಿಗೆ ಕಮಲನ ಬಗ್ಗೆ ಗೌರವ ಹುಟ್ಟಿತು.

ಕಾಲಕ್ರಮೇಣ ಕಮಲನಿಗೂ ಅಂಬುಜವಲ್ಲಿಗೂ ಗಾಢ ವಿಶ್ವಾಸ

ಬೆಳೆಯಲಾರಂಭಿಸಿತು.

ಅಂಬುಜವಲ್ಲಿ ಶ್ರೀಮಂತರ ಮನೆತನಕ್ಕೆ ಸೇರಿದವಳೆಂಬುದು ಅವಳ ಮೈಮೇಲಿದ್ದ ನಗನಾಣ್ಯಗಳಿಂದ ಗೊತ್ತಾಗಬೇಕಲ್ಲದೆ ಅವಳ ಮಾತು ಕತೆಯಿಂದ ತಿಳಿದುಬರುತ್ತಿರಲಿಲ್ಲ. ದೊಡ್ಡ ವಂಶದಲ್ಲಿ ಹುಟ್ಟಿ ಬೆಳೆದ ಅಂಬುಜ ದೊಡ್ಡ ನಡತೆಯನ್ನೂ ರೂಢಿಸಿಕೊಂಡಿದ್ದಳು.

ಅಂಬುಜನ ತಂದೆ ಸಂಪತ್ತೈಯ್ಯಂಗಾರ್ಯರು ಸಕಲೇಶಪುರಕ್ಕೆ ಸಮೀಪದಲ್ಲಿದ್ದ ಆನೆಗೋಡು ಎಸ್ಟೇಟಿನಲ್ಲಿಯೇ ವಾಸಮಾಡುತ್ತಿದ್ದರು. ಸಂಪತ್ತೈಯ್ಯಂಗಾರ್ಯರ ತಂದೆ ರಾಮಯ್ಯಂಗಾರ್ಯರು ಕಾಡಿನ ಒಂದು ಭಾಗವನ್ನು ಕೊಂಡು, ಸ್ವಂತ ದುಡಿಮೆಯಿಂದ ಅದನ್ನು ಕಾಫಿ ಎಸ್ಟೇಟಾಗಿ ಮಾರ್ಪಡಿಸಿದ್ದರು. ಭೂಮಿತಾಯಿ ರಾಮಯ್ಯಂಗಾರ್ಯರ ದುಡಿಮೆಯನ್ನು ನಿರ್ಲಕ್ಷಿಸಲಿಲ್ಲ. ಅವರ ಕಾಫಿತೋಟ, ಪ್ರಮಾಣದಲ್ಲಿ ಚಿಕ್ಕದಾಗಿ ಸುತ್ತಮುತ್ತಲಿನ ತೋಟಗಳನ್ನು ನಾಚಿಸುತ್ತಿತ್ತು. ತೋಟವನ್ನು ಮಗುವಿನಂತೆ ಪೋಷಿಸಿ ರಾಮಯ್ಯಂಗಾರ್ಯರು ಅದನ್ನು ಅಭಿವೃದ್ಧಿಸ್ಥಿತಿಗೆ ತಂದಿದ್ದರು. ಮೊದಲನೆಯ ಮಹಾಯುದ್ಧ ರಾಮಯ್ಯಂಗಾರ್ಯರ ಅದೃಷ್ಟದ ಬಾಗಿಲನ್ನು ತೆರೆಯಿಸಿತು. ಕಾಫಿಗೆ ದೊರೆತ ಅಸಾಧಾರಣ ಧಾರಣೆಯಿಂದ ರಾಮಯ್ಯಂಗಾರ್ಯರು ಧನಾಢ್ಯತೆಯನ್ನು ಗಳಿಸಿಕೊಂಡರು. ಹಣವನ್ನು ಒಣ ಆಡಂಬರಕ್ಕೆ ವ್ಯಯ ಮಾಡದೆ, ಮತ್ತೊಂದು ಎಸ್ಟೇಟು ಕೊಂಡರು. ಅವರು ವೈಕುಂಠ ವಾಸಿಗಳಾಗುವ ವೇಳೆಗೆ ನಾಲ್ಕು ಭಾರಿ ಎಸ್ಟೇಟುಗಳ ಒಡೆತನ ಅವರದಾಗಿತ್ತು.

ಮಗ ಸಂಪತ್ತುವನ್ನು ರಾಮಯ್ಯಂಗಾರ್ಯರು ಸುಖದ ಸುಪ್ಪತ್ತಿಗೆಯ ಮೇಲೆ ಬೆಳೆಸಲಿಲ್ಲ. ತಮ್ಮ ಹಾಗೇ ಅವನೂ ದುಡಿಯಬೇಕಾಗಿತ್ತು. ಹಗಲಿರುಳು ತೋಟಗಳ ಉಸ್ತುವಾರಿ ನೋಡಿಕೊಳ್ಳಬೇಕಾಗಿತ್ತು. ಸಂಪತ್ತು ಬಿ.ಎ. ಪಾಸುಮಾಡಿಕೊಂಡು ಬಂದರೂ ಚಡ್ಡಿ, ರಬ್ಬರ್ ಬೂಟ್ಸ್ ಹಾಕಿಕೊಂಡು ಕಾಫಿತೋಟ ಕಾಯುವುದು ಅವನಿಗೆ ತಪ್ಪಲಿಲ್ಲ.

ತಂದೆ ಹಾಕಿಕೊಟ್ಟಿದ್ದ ಮೇಲ್ಪಂಕ್ತಿಯಲ್ಲಿಯೇ ಮುನ್ನಡೆದ ಸಂಪತ್ತು ಕಾಫಿ ಜತೆಯಲ್ಲಿ ಏಲಕ್ಕಿಯನ್ನೂ ಬೆಳೆಸಲಾರಂಭಿಸಿದ. ಒಂದೊಂದು ವರ್ಷ ಕಾಫಿ ಉತ್ಪನ್ನದಲ್ಲಿ ಆಗುತ್ತಿದ್ದ ನಷ್ಟವನ್ನೂ ಏಲಕ್ಕಿ ತುಂಬಿಕೊಡುತ್ತಿತ್ತು. ಸಂಪತ್ತು ವ್ಯವಸಾಯ ಕಂಡು ಐರೋಪ್ಯ ಪ್ಲಾಂಟರುಗಳೂ ಅಸೂಯೆ ಪಡುವಂತಾಯಿತು.

ತಂದೆಯಂತೆ ಸಂಪತ್ತೈಯ್ಯಂಗಾರ್ ಕೇವಲ ಸಂಪ್ರದಾಯ ಶರಣನಾಗಿರಲಿಲ್ಲ. ಕಾಫಿ ವ್ಯವಸಾಯದಲ್ಲಿ ನಡೆದಿದ್ದ ನೂತನ ಶೋಧಗಳನ್ನೂ ಅವನು ಅವಲಂಬಿಸಲು ಅನುಮಾನಪಡಲಿಲ್ಲ. ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಷನ್ನಿನ ಸದಸ್ಯರು ಸಂಪತ್ತೈಯ್ಯಂಗಾರ್ಯರ ಅಭಿಪ್ರಾಯಗಳನ್ನು ವೇದವಾಕ್ಯಗಳಂತೆ ಪರಿಗ್ರಹಿಸುತ್ತಿದ್ದರು.

ರಾಮಯ್ಯಂಗಾರ್ಯರ ಸನಾತನ ಮನೋಭಾವವನ್ನು ಮಾತ್ರ ಸಂಪತ್ತೈಯ್ಯಂಗಾರ್ ಅನುಕರಿಸಲೆತ್ನಿಸಲಿಲ್ಲ. ಎಸ್ಟೇಟಿನಲ್ಲಿ ಎಲೆಕ್ಟ್ರಿಕ್ ಎಂಜಿನ್ ಇಟ್ಟುಕೊಂಡು ಮನೆಗೆ, ಎಸ್ಟೇಟಿಗೆ ದೀಪಗಳನ್ನೂ, ನೀರಿನ ಸೌಕರ್ಯವನ್ನೂ ಮಾಡಿಕೊಂಡಿದ್ದರು. ಮನೆಯನ್ನೂ ಅತ್ಯಾಧುನಿಕ ರೀತಿಯಲ್ಲಿ ಅಲಂಕರಿಸಿಕೊಂಡಿದ್ದರು. ಹನ್ನೆರಡು ವಾಲ್ವಿನ ಫಿಲಿಪ್ಸ್ ರೇಡಿಯೋಗ್ರಾಂ ಅವರ ಹಜಾರದಲ್ಲಿ ಮೆರೆಯುತ್ತಿತ್ತು. ಆಲ್‌ಸ್ಯಾಷಿಯನ್, ಏರ್‌ಡೇಲ್, ಸ್ಪ್ಯಾನಿಯಲ್ ಜಾತಿಯ ನಾಲ್ಕೈದು ನಾಯಿಗಳು ಮನೆತುಂಬ ಓಡಿಯಾಡುತ್ತಿದ್ದವು. ಐರೋಪ್ಯ ಪ್ಲಾಂಟರುಗಳ ಸಹವಾಸದಿಂದ ಸಂಪತ್ತೈಯ್ಯಂಗಾರ್ಯರಿಗೆ ಕೆಲವು ಐರೋಪ್ಯ ಅಭ್ಯಾಸಗಳು ಬಂದಿದ್ದರೂ, ಅವರ ಗೃಹಶಾಂತಿಗಾಗಲಿ ನೆಮ್ಮದಿಗಾಗಲಿ ಅದು ಭಂಗತಂದಿರಲಿಲ್ಲ. ಐರೋಪ್ಯ ಮಿತ್ರರನ್ನು ಮನೆಗೆ ಕರೆತರುವುದಕ್ಕಾಗಲಿ, ತಾವು ಅವರ ಮನೆಗೆ ಊಟ ಉಪಾಹಾರಗಳಿಗೆ ಹೋಗುವುದಕ್ಕಾಗಲಿ ಸಂಪತ್ತೈಯ್ಯಂಗಾರ್ಯರು ಹಿಂಜರಿಯುತ್ತಿರಲಿಲ್ಲ.

ಅಯ್ಯಂಗಾರ್ಯರ ಮನೆಯ ಹಜಾರದಲ್ಲಿದ್ದ ದೊಡ್ಡ ಪುಸ್ತಕ ಭಂಡಾರ ಕೇವಲ ಅಲಂಕಾರದ ವಸ್ತುವಾಗಿರಲಿಲ್ಲ. ಇಂಗ್ಲಿಷ್, ಕನ್ನಡ,

ತಮಿಳು ಗ್ರಂಥಗಳನ್ನು ಓದುವುದೆಂದರೆ ಅಯ್ಯಂಗಾರ್ಯರಿಗೆ ಪರಮ ಪ್ರೀತಿ. ಒಂದು ಸಲ ಬೆಂಗಳೂರಿಗೋ ಮದರಾಸಿಗೋ ಹೋಗಿ ಬಂದರೆ ನೂರಾರು ರೂಪಾಯಿಯ ಪುಸ್ತಕಗಳನ್ನು ಕೊಂಡು ತರುತ್ತಿದ್ದರು.

ಅಯ್ಯಂಗಾರ್ಯರ ಹೆಂಡತಿ ಸೀತಮ್ಮ ಗಂಡನನ್ನು ಮೆಚ್ಚಿಸು ವುದಕ್ಕೂ ತಮ್ಮ ಮಡಿ – ಹುಡಿ ಬಿಡಲು ಸಿದ್ಧವಾಗಿರಲಿಲ್ಲ. ಹಳೆಯ ಸಂಪ್ರದಾಯದಲ್ಲಿ ಬೆಳೆದು ಬಂದಿದ್ದ ಸೀತಮ್ಮ ಗಂಡನನ್ನು ಅವರ ದಾರಿಗೆ ಬಿಟ್ಟು ತಾವು ಸಂಪ್ರದಾಯಶೀಲತೆಯನ್ನು ಪರಿಪಾಲಿಸು ತ್ತಿದ್ದರು. ಅಯ್ಯಂಗಾರ್ಯರ ಮೂರು ಹೆಣ್ಣುಮಕ್ಕಳು ಹೆಚ್ಚಾಗಿ ತಾಯಿಯನ್ನೇ ಅನುಸರಿಸುತ್ತಿದ್ದರು. ಅವರ ಮೊದಲನೆಯ ಮಗಳು ಸುಂದರವಲ್ಲೀಗೆ ಚಿಕ್ಕವಯಸ್ಸಿನಲ್ಲಿಯೇ ಲಗ್ನ ಮಾಡಬೇಕಾಗಿ ಬಂತು. ಆಗ ಜೀವಂತರಾಗಿದ್ದ ರಾಮಯ್ಯಂಗಾರ್ಯರು ಪೂರ್ವಪದ್ಧತಿಯಂತೆ ಮೊಮ್ಮಗಳಿಗೆ ಹದಿನೈದನೆಯ ವಯಸ್ಸಿಗೆ ಲಗ್ನ ಮಾಡಿ, ಹದಿನಾರನೆಯ ವಯಸ್ಸಿಗೆ ಗಂಡನ ಮನೆಗೆ ಕಳಿಸಿಕೊಟ್ಟಿದ್ದರು. ಎರಡನೆಯ ಮಗಳು ಆಂಡಾಳ್ ಲಗ್ನವಾಗುವ ವೇಳೆಗೆ ಯಜಮಾನರು ತೀರಿಕೊಂಡಿದ್ದರು. ಸಂಪತ್ತ್ಯಯ್ಯಂಗಾರ್ ಅವಳನ್ನು ಓದಿಸಿ, ಅವಳು ಡಿಗ್ರಿ ತೆಗೆದುಕೊಂಡ ಮೇಲೆ ಲಗ್ನಮಾಡಿಕೊಟ್ಟರು. ಮೂರನೆಯವಳೇ ಅಂಬುಜವಲ್ಲಿ. ಅಂಬುಜ ತಂದೆಯ ಅಚ್ಚುಮೆಚ್ಚಿನ ಮಗಳೂ ಆಗಿದ್ದಳು. ಅವರ ಮೇಲ್ವಿಚಾರಣೆಯಲ್ಲಿಯೇ ಅವಳ ಶಿಕ್ಷಣ ಸಾಗಿತ್ತು. ಅಂಬುಜವಲ್ಲಿಯಲ್ಲಿ ತಾಯಿಯ ಸಂಪ್ರದಾಯಪ್ರೇಮ, ತಂದೆಯ ಪ್ರಾಗತಿಕ ಮನೋಭಾವ ಎರಡೂ ಮನೆ ಮಾಡಿಕೊಂಡಿದ್ದವು.

ಮೈತುಂಬ ನಗನಾಣ್ಯ, ಟ್ರಂಕ್ ತುಂಬ ಸೀರೆ ಕುಪ್ಪಸ, ಪರ್ಸ್ ತುಂಬ ಹಣವಿದ್ದರೂ ಸ್ವಲ್ಪವೂ ಅಹಂಕಾರ ತೋರಿಸದ ಅಂಬುಜನ ಸಂಸ್ಕೃತಿ ಕಂಡು ಕಮಲ 'ತುಂಬಿದ ಕೊಡ ತುಳುಕುವುದಿಲ್ಲ' ಎಂದು ಕೊಂಡಳು. ಕಮಲನ ಕರುಣಾರ್ದ್ರ ಕಥೆ ಅಂಬುಜನ ಅಂತಃಕರಣ ಕಲಕಿತ್ತು. ಲೀಲಾವತಿಯ ಪಟಾಟೋಪ, ಕಮಲನ ಸರಳ ಸಾತ್ವಿಕ ಜೀವನ ಎರಡನ್ನೂ ಅಂಬುಜವಲ್ಲಿ ತುಲನಾತ್ಮಕ ದೃಷ್ಟಿಯಿಂದ ನೋಡು

ತ್ತಿದ್ದಳು. ಆ ಬಗ್ಗೆ ಕಮಲನ ಜತೆ ಮಾತನಾಡಬೇಕೆಂಬ ತವಕ ದಿಂದಿದ್ದ ಅವಳಿಗೆ ಒಂದು ಸದವಕಾಶ ಸಿಕ್ಕಿತು.

ಗಂಡುಮಕ್ಕಳ ಕಾಲೇಜಿಗೂ ಹೆಣ್ಣುಮಕ್ಕಳ ಕಾಲೇಜಿಗೂ ಒಂದು ಚರ್ಚೆ ಏರ್ಪಾಟಾಯಿತು. ಹೆಣ್ಣು ಮಕ್ಕಳ ಕಾಲೇಜಿನ ಪರವಾಗಿ ಲೀಲಾವತಿ, ಬೆಟ್ಸಿ, ಸುಧಾ ಆಯ್ಕೆಯಾಗಿದ್ದರು. ವಿಷಯ ಲೀಲಾವತಿಗೆ ಪ್ರಿಯವಾಗಿದ್ದ ಸ್ತ್ರೀ ಸ್ವಾತಂತ್ರ್ಯ! ತಮ್ಮ ಪ್ರತಿನಿಧಿಗಳಿಗೆ ಪ್ರೋತ್ಸಾಹ ನೀಡಲು ಉಭಯ ಕಾಲೇಜುಗಳ ವಿದ್ಯಾರ್ಥಿ ವಿದ್ಯಾರ್ಥಿನಿ ಯರು ತಂಡೋಪತಂಡವಾಗಿ ಸೇರಿದ್ದರು.

ಲೀಲಾವತಿ ತನ್ನ ಪಕ್ಷವನ್ನು ಕ್ಷಾತ್ರದಿಂದಲೇ ಪ್ರತಿಪಾದಿಸಿದಳು. ವಿದ್ಯಾರ್ಥಿಗಳು ಅಧಿಕ ಸಂಖ್ಯಾತರಾಗಿದ್ದ ಸಭೆಯಲ್ಲಿ ಲೀಲಾವತಿಯ ಪಕ್ಷಕ್ಕೆ ಸೋಲಾಗಿದ್ದರೂ ಅವಳ ವಾದವೈಖರಿ, ಭಾವ ಭಂಗಿ ಎಲ್ಲರಿಗೂ ಅಚ್ಚುಮೆಚ್ಚಾಯಿತು.

ವಾದ ಮುಗಿಸಿಕೊಂಡು ಹಾಸ್ಟೆಲ್ ಸೇರಿದ ಮೇಲೆ ಅಂಬುಜ ಜಿಗುಪ್ಸೆಯಿಂದ

"ಸ್ತ್ರೀ ಸ್ವಾತಂತ್ರ್ಯಕ್ಕೆ ಹೊಡೆದಾಡಬೇಕಾದರೆ ಲಜ್ಜಾಹೀನ ಳಾಗಿಯೇ ವರ್ತಿಸಬೇಕೇನ್ರೀ ಕಮಲಮ್ಮ?"

"ಏಕೆ ಹಾಗೆ ಕೇಳುವಿರಿ ಅಂಬುಜವಲ್ಲಿ?"

"ಲೀಲಾವತಿಯ ಭಾಷಣ ನಿಮಗೇನನ್ನಿಸಿತು?"

"ಚೆನ್ನಾಗಿ ಮಾತನಾಡಿದರು. ತಮ್ಮ ವಾದವನ್ನು ಧೈರ್ಯ ವಾಗಿ ಮಂಡಿಸಿದರು."

"ನೀವು ಕಿವಿಯನ್ನು ಮಾತ್ರ ತೆರೆದುಕೊಂಡು ಕುಳಿತಿದ್ದಿರಿ ಕಮಲಮ್ಮ."

"ಏಕೆ?"

"ಲೀಲಾವತಿ ವಾದಕ್ಕೆ ನಿಂತಿರಲಿಲ್ಲ – ತನ್ನ ಭಾವ, ಬಿನ್ನಾಣ, ಬೆಡಗು ಮೆರಸುವುದಕ್ಕೆ ನಿಂತಿದ್ದಳು. ಕಮಂಗಿ ಹುಡುಗರು ಅವಳ ವೈಯ್ಯಾರಕ್ಕೆ ಬೆರಗಾಗಿ ಬಾಯಿಬಿಟ್ಟುಕೊಂಡು ಕುಳಿತಿದ್ದುದನ್ನು ನೀವು

ನೋಡಲಿಲ್ಲವೇ ? ”

“ ನೋಡಿದೆ.”

“ ಈ ಬಗೆಯ ವರ್ತನೆಯಿಂದ ನಮ್ಮ ಕಾಲೇಜಿಗೆ ಗೌರವ ಬರುವುದಿಲ್ಲರೀ. ಇಂಗ್ಲಿಷ್ ಕಲಿಯುವ ಹೆಣ್ಣು ಮಕ್ಕಳೆಂದರೆ ಜನಕ್ಕೆ ಮೊದಲೇ ತಿರಸ್ಕಾರ. ಲೀಲಾವತಿಯಂಥವರಿಂದ ಹೆಣ್ಣುಮಕ್ಕಳು ಕಾಲೇಜಿಗೇ ಬರದ ಹಾಗಾಗುತ್ತದೆ.”

“ ಅದೇ ಪಾಶ್ಚಾತ್ಯ ಸಂಸ್ಕೃತಿ ಅಂಬುಜವಲ್ಲಿ.”

“ ಪಾಶ್ಚಾತ್ಯ ಸ್ತ್ರೀಯರೆಲ್ಲಾ ಲೀಲಾವತಿಯ ಹಾಗೆ ಆಡುವರೆಂದು ತಿಳಿದಿರುವಿರಾ ? ನಮ್ಮ ಎಸ್ಟೇಟಿಗೆ ಸ್ವಲ್ಪ ದೂರದಲ್ಲಿ ಮಿ. ಹಂಟರ ಎಸ್ಟೇಟಿದೆ. ಕೆಲವು ದಿನಗಳ ಹಿಂದೆ ಅವರ ನಾದಿನಿ ಇಂಗ್ಲೆಂಡಿನಿಂದ ಬಂದರು. ಆಕೆಯೂ ಕಾಲೇಜಿಗೆ ಮಣ್ಣು ಹೊತ್ತಿದ್ದರು. ನಮ್ಮ ರೀತಿ ನೀತಿಗೂ ಅವರ ರೀತಿ ನೀತಿಗೂ ಏನೂ ವ್ಯತ್ಯಾಸವಿರಲಿಲ್ಲ. ನಾನು ಮುಖಕ್ಕೆ ಪೌಡರ್ ಹಾಕಿಕೊಳ್ಳುತ್ತಿದ್ದುದನ್ನು ನೋಡಿ ಮೇರಿಯನ್ ‘ ನೀವೇಕೆ ಈ ಹಾಳು ಪುಡಿ ಹಚ್ಚಿಕೊಳ್ಳುವಿರಿ. ದೇವರು ಮುಖಮುಲ್ಲಿನಂಥ ಚರ್ಮ ನಿಮಗೆ ಕೊಟ್ಟಿರುವಾಗ ಅದರ ಅಂದವನ್ನೇಕೆ ಕೆಡಿಸುವಿರಿ ’ ಎಂದು ಕೇಳಿದರು. ಆಕೆಯ ಪ್ರಶ್ನೆ ನನಗೆ ಆಶ್ಚರ್ಯ ವನ್ನುಂಟುಮಾಡಿತು. ‘ ನೀವೇಕೆ ಪೌಡರ್ ಹಚ್ಚಿಕೊಳ್ಳುವಿರಿ ಮಿಸ್. ಮೇರಿಯನ್ ’ ಎಂದು ಕೇಳಿದೆ – ಅದಕ್ಕೆ ‘ ನೋಡಿ. ನಮ್ಮ ಮುಖದ ಮೇಲೆ ಮಚ್ಚೆಗಳಿರುತ್ತವೆ. ಅವುಗಳ ವಿಕಾರ ಮುಚ್ಚಲೆಂದು ನಾವು ಪೌಡರ್ ತುಂಬಿಕೊಳ್ಳುತ್ತೇವೆ. ಅಲ್ಲದೆ ಇಂಗ್ಲೆಂಡ್ ತುಂಬ ಶೀತ ಪ್ರದೇಶ. ಪೌಡರ್ ಸ್ವಲ್ಪ ಮಟ್ಟಿಗೆ ಶೀತವನ್ನು ಪ್ರತಿಭಟಿಸುತ್ತದೆ ’ ಎಂದರು. ನಮ್ಮ ವಸ್ತ್ರ, ಭೂಷಣ, ಪೂಜೆ, ವಿನಯ ಅವರು ತುಂಬ ಮೆಚ್ಚಿಕೊಳ್ಳುತ್ತಾರೆ. ಪಾಶ್ಚಾತ್ಯರನ್ನು ಅನುಕರಿಸುವ ಭಾರತಸ್ತ್ರೀಯ ರನ್ನು ಕುರಿತು ಅವರೊಮ್ಮೆ ‘ ಕುರೂಪಿಗಳು ಸುರೂಪಿಗಳನ್ನನುಕರಿಸು ವುದನ್ನು ನಾನು ಕಂಡಿದ್ದೆ. ಭಾರತಕ್ಕೆ ಬಂದು – ನಿಮ್ಮ ವಿದ್ಯಾವತಿ ಯರನ್ನು ನೋಡಿದಮೇಲೆ ಸುರೂಪಿಗಳು ಕುರೂಪವನ್ನನುಸರಿಸುವ

ಸೋಜಿಗವೂ ಇದೆಯೆಂದು ತಿಳಿಯಿತು ' ಎಂದರು."

"ನೀವೇಕೆ ಗಂಡಸರ ಜತೆ ಕೆಲಸ ಕಾರ್ಯಗಳಿಗೆ ಸ್ಪರ್ಧಿಸುವಿರಿ ಎಂದು ಕೇಳಲಿಲ್ಲವೇ ?"

"ಕೇಳಿದೆ. ಅವರು ಹೇಳಿದ ಉತ್ತರವೂ ಸಮಂಜಸವಾಗಿದೆ. ' ನಿಮ್ಮ ಆವಶ್ಯಕತೆಗಳು ಕಡಿಮೆ. ಮಾನ ಮುಚ್ಚುವಷ್ಟು ಬಟ್ಟೆಬರೆ ಯಾದರೆ ನಿಮಗೆ ಸಾಕು. ನೀವು ಮರದ ಕೆಳಗೆ ಸುಖವಾಗಿ ಮಲಗಿ ನಿದ್ರಿಸಬಲ್ಲಿರಿ. ದಿನಕ್ಕೆ ನಾಲ್ಕು ಪೆನ್ಸ್ ಖರ್ಚು ಮಾಡಿದರೆ ಒಬ್ಬರ ಊಟ ಕಳೆದುಹೋಗುತ್ತದೆ. ಪ್ರಕೃತಿ ತನ್ನೆಲ್ಲಾ ಭಂಡಾರವನ್ನೂ ನಿಮಗೇ ಸೂರೆಗೊಟ್ಟದ್ದಾಳೆ. ನಮ್ಮ ಸ್ಥಿತಿ ಹೇಗಿದೆ ಬಲ್ಲಿರಾ. ಒಬ್ಬ ಒಂದು ದಿನದ ಊಟಕ್ಕೆ ಐದರಿಂದ ಹದಿನೈದು ಷಿಲ್ಲಿಂಗುಗಳು (ಸುಮಾರು ಮೂರೂಮುಕ್ಕಾಲು ರೂಪಾಯಿಯಿಂದ ಹದಿನೈದು ರೂಪಾಯಿಗಳು) ಖರ್ಚು ಮಾಡಬೇಕಾಗುತ್ತದೆ. ಅದೇ ಪ್ರಮಾಣದಲ್ಲಿ ಬಟ್ಟೆಬರೆ, ಮನೆ ಬಾಡಿಗೆ, ಹೋಗಿಬರುವ ಖರ್ಚು ವಹಿಸಬೇಕಾಗುತ್ತದೆ. ತಿಂಗಳಿಗೆ ಇಪ್ಪತ್ತು ಪೌಂಡುಗಳು (ಸುಮಾರು ಮುನ್ನೂರು ರೂಪಾಯಿ) ಸಂಪಾದಿಸುವವನು ನಿಮ್ಮ ಊರಿನಲ್ಲಿ ಸುಖಜೀವನ ನಡೆಸಬಹುದು; ನಮ್ಮಲ್ಲಿ ಅದು ಒಬ್ಬನಿಗೆ ಸಾಲುವುದಿಲ್ಲ, ಅದೂ ಅಹಸ್ಯಹನಿ ಜೀವನಕ್ಕೆ. ಈ ಕಾರಣಕ್ಕಾಗಿ ಮನೆಯಲ್ಲಿ ಒಬ್ಬ ಸಂಪಾದಿಸಿ ನಾಲ್ಕು ಜನ, ಎಂಟು ಜನ ಕುಳಿತು ತಿನ್ನಲು ಸಾಧ್ಯವಿಲ್ಲ. ಮನೆಯವರೆಲ್ಲಾ ಸಂಪಾದಿಸಬೇಕಾಗುತ್ತದೆ. ಏತಕ್ಕೆನ್ನುವಿರಿ–ಆಸ್ತಿ ಮಾಡುವುದಕ್ಕಲ್ಲ; ಬದುಕುವುದಕ್ಕೆ ? ನಿಮ್ಮ ಅನುಕೂಲ್ಯ ನಮಗಿದ್ದರೆ ಐರೋಪ್ಯ ಹೆಣ್ಣು ಮಕ್ಕಳು ಗಂಧಕ, ಕಲ್ಲಿದ್ದಲು ಗಣಿಗಳಲ್ಲಿ ಕೆಲಸಕ್ಕೆ ಸೇರುತ್ತಿದ್ದರೆಂದು ಕೊಂಡಿರುವಿರಾ ?

' ಯುದ್ಧ ನಮ್ಮ ರಾಷ್ಟ್ರಜೀವನ, ಸಾಮಾಜಿಕ ಜೀವನ, ವೈಯಕ್ತಿಕ ಜೀವನವನ್ನೇ ನಾಶಮಾಡಿಬಿಟ್ಟಿದೆ. ರಾಷ್ಟ್ರದ ಭಾರ ಹೊರಲು ಸಮರ್ಥರಾದ ಲಕ್ಷಾಂತರ ತರುಣರು ಮಡಿದಿದ್ದಾರೆ. ಇಂದು ಯೂರೋಪ್ ವಿಧವೆಯರ, ತಾಯಂದಿರ ಆಕ್ರಂದನದಿಂದ ತುಂಬಿ

ಹೋಗಿದೆ. ರಾಷ್ಟ್ರದ ಹೊರೆ ನೀಗಬಲ್ಲ ತರುಣರು ಹತರಾದ ಮೇಲೆ ಆ ಕೆಲಸ ಉಳಿದಿರುವ ಮಹಿಳೆಯರು ತಾನೇ ಹೊರಬೇಕು. ನಾವು ಸಾಧಿಸಿರುವ ಪ್ರಗತಿ ಅನಿವಾರ್ಯವಾದುದೇ ವಿನಾ ಅಗತ್ಯವಾದುದಲ್ಲ.'"

ಅಂಬುಜ ಹೇಳಿದ ವಿಷಯ ಕೇಳಿ ಕಮಲನ ಮನಸ್ಸಿನಲ್ಲಿ ವಿಚಾರಮಥನವಾರಂಭವಾಯಿತು.

"ಪಾಶ್ಚಾತ್ಯರ ವಿಷಯ ನಾನೂ ಬಹಳ ತಪ್ಪು ತಿಳಿದು ಕೊಂಡಿದ್ದೆ ಅಂಬುಜವಲ್ಲಿ. ಅವರು ಕೇವಲ ಸುಖ. ವಿಲಾಸ ಪ್ರಮತ್ತರಾದ ತಾಮಸಿಗಳೆಂದು ನನ್ನ ಅಭಿಪ್ರಾಯವಾಗಿತ್ತು."

"ಅವರಲ್ಲಿಯೂ ರಸಲ್, ಜೋಡ್, ವೈಟ್‌ಹೆಡ್, ಡೀನ್ ಇಂಜ್, ಡ್ಯೂಯಿ, ಸ್ಪೆಂಗ್ಲರ್ ಮೊದಲಾದ 'ದಾರ್ಶನಿಕ'ರಿದ್ದಾರೆ ಕಮಲಮ್ಮ. ಜೀವನದ ಆಳವಾದ ಸಮಸ್ಯೆಗಳನ್ನು ಕುರಿತು ಅವರೂ ವಿಚಾರ ಮಾಡುತ್ತಿದ್ದಾರೆ. ಜಗತ್ತಿನಲ್ಲಿ ಯಾವದು ಶಾಶ್ವತ ಎಂಬ ಪ್ರಶ್ನೆ ಅವರನ್ನೂ ಕಾಡುತ್ತಿದೆ. ಅವರೂ ಬೆಳಕಿಗಾಗಿ ಹಾತೊರೆ ಯುತ್ತಿದ್ದಾರೆ. ನಾವು ಬೆಳಕಿನಿಂದ ಕತ್ತಲೆಯ ಕಡೆ ಹೋಗುತ್ತಿದ್ದೇವೆ; ಅವರು ಕತ್ತಲೆಯಿಂದ ಬೆಳಕಿಗೆ ಹೋಗುತ್ತಿದ್ದಾರೆ."

"ಈ ವಯಸ್ಸಿಗೆ ಇಷ್ಟು ಹೇಗೆ ತಿಳಿದುಕೊಂಡಿರಿ ಅಂಬುಜವಲ್ಲಿ?"

"ನನ್ನ ಕೂಡಿಸಿಕೊಂಡು ಪಾಶ್ಚಾತ್ಯ ತತ್ತ್ವಜ್ಞಾನವನ್ನು ತಂದೆ ಹೇಳಿದ್ದಾರೆ; ಪ್ರಾಚ್ಯ ತತ್ತ್ವಜ್ಞಾನವನ್ನು ತಾಯಿ ಹೇಳಿದ್ದಾರೆ.— ಇವೆಲ್ಲಾ ನನಗೇನು ಅರ್ಥವಾಗುತ್ತದೆ ಅಣ್ಣ ಎಂದು ನಾನು ಕೇಳಿದರೆ ತಂದೆಯವರು 'ಇರಲಿ ಕೇಳಿರು ಮಗೂ. ಈ ಶಬ್ದಗಳಾದರೂ ನಿನ್ನ ಕಿವಿಯಮೇಲೆ ಬಿದ್ದಿರಲಿ. ಎಂದೋ ಒಂದು ದಿನ ಅರ್ಥವಾಗುತ್ತದೆ' ಎನ್ನುತ್ತಿದ್ದರು. ಅವರು ಕಲಿಸಿದ ಪಾಠವನ್ನೇ ನಿಮಗೊಪ್ಪಿಸುತ್ತಿದ್ದೇನೆ ಕಣ್ರೀ – ನಿಜವಾಗಿ ನನಗೇನೂ ಗೊತ್ತಿಲ್ಲ."

"ವಿವೇಕದ ಜತೆಯಲ್ಲಿ ಎಷ್ಟು ವಿನಯವಿದೆ ನನ್ನ ತಾಯಿ" ಎಂದು ಅಭಿಮಾನದಿಂದ ಕಮಲಮ್ಮ ನುಡಿದಳು.

## ೧೮

ಮಾಧವರಾಯ ನಿರೀಕ್ಷಿಸದಿದ್ದ ಲಾಭವೊಂದು ಅವನಿಗೆ ಲಭಿಸಿತು.

ಸಕ್ಕರೆ ಕಂಪೆನಿಯ ಕೆಲವು ಕೇಸುಗಳನ್ನು ಅವನು ಮ್ಯಾನೇಜ್‌ಮೆಂಟ್ ಪರವಾಗಿ ನಡೆಸಿದ್ದ. ಅವನ ದಕ್ಷತೆ, ಸಹಕಾರ ಗುಣಗಳಿಂದ ಸುಪ್ರೀತರಾದ ಆಡಳಿತವರ್ಗದವರು ಅವನನ್ನೇ ತಮ್ಮ ಮುಖ್ಯ ಲಾಯರಾಗಿ ನಿಯಮಿಸಿಕೊಂಡರು. ಮಾಧವರಾಯನ ಪ್ರ್ಯಾಕ್ಟೀಸಿನ ಮೇಲೆ ಯಾವ ಹತೋಟಿಯನ್ನೂ ವಿಧಿಸದೆ ಆಡಳಿತವರ್ಗದವರು ಅವನಿಗೆ ತಿಂಗಳಿಗೆ ಮುನ್ನೂರು ರೂಪಾಯಿ ಸಂಭಾವನೆ ಕೊಡಲು ಒಪ್ಪಿದ್ದರು.

ಈ ಅನಿರೀಕ್ಷಿತ ಲಾಭವನ್ನು ರುಕ್ಮಿಣಮ್ಮ ಪದ್ಮನ ಅದೃಷ್ಟಫಲವೆಂದು ಭಾವಿಸಿದಳು. ಈ ವ್ಯವಹಾರದಲ್ಲಿ ಜವರೇಗೌಡರ ಕೈವಾಡವಿರಬೇಕೆಂದು ಮಾಧವರಾಯ ಊಹಿಸಿದ.

ಸಕ್ಕರೆ ಕಂಪೆನಿಯ ಮ್ಯಾನೇಜ್‌ಮೆಂಟಿಗೂ, ಕಾರ್ಮಿಕ ಸಂಘಕ್ಕೂ ಅನ್ಯೋನ್ಯತೆಯಿರಲಿಲ್ಲ. ಮ್ಯಾನೇಜ್‌ಮೆಂಟಿನವರ ಪ್ರತಿಯೊಂದು ಚಲನವಲನವನ್ನೂ ಸಂಶಯದಿಂದ ನೋಡುವುದು ಕಾರ್ಮಿಕ ಸಂಘಕ್ಕೆ ರೂಢಿಯಾಗಿತ್ತು. ಕಾರ್ಮಿಕ ಸಂಘದ ಚಟುವಟಿಕೆಗಳ ಬಗ್ಗೆ ಮ್ಯಾನೇಜ್‌ಮೆಂಟಿನವರೂ ಅದೇ ಬಗೆಯ ಸಂದೇಹಗ್ರಸ್ತರಾಗಿದ್ದರು.

ಮಾಧವರಾಯ ಸಕ್ಕರೆ ಕಂಪೆನಿಯ ನ್ಯಾಯವಾದಿಯಾಗಲೊಪ್ಪಿದುದು ಕಾರ್ಮಿಕ ಸಂಘದ ಅಧ್ಯಕ್ಷರಾದ ಕರಿಯಪ್ಪಗೌಡರಿಗೂ, ಕಾರ್ಯದರ್ಶಿ ಕೃಷ್ಣಪ್ಪನಿಗೂ ಅಸಂತೋಷವನ್ನುಂಟುಮಾಡಿತ್ತು. ಕಾರ್ಮಿಕ ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ ಲಾಯರ್ ಜಯದೇವಪ್ಪ ಎಲ್ಲರಿಗಿಂತ ಹೆಚ್ಚು ಅಸಮಾಧಾನಗೊಂಡಿದ್ದ.

ಬಾರ್ ಅಸೋಸಿಯೇಷನ್ ಅಧ್ಯಕ್ಷಸ್ಥಾನಕ್ಕೆ ವೆಂಕಣ್ಣನವರಿಗೂ ಮಾಧವರಾಯನಿಗೂ ಬಿದ್ದ ಪೈಪೋಟಿಯಲ್ಲಿ ಮಾಧವರಾಯನ ಪಕ್ಷ ವಹಿಸಿ ಹೋರಾಡಿದ್ದವನೇ ಜಯದೇವಪ್ಪ. ತನ್ನ ನೆರವಿನಿಂದ ಅಧ್ಯಕ್ಷರಾದ ಮಾಧವರಾಯರು ಕೂಲಿಗಾರರ ವಿರುದ್ಧ ಮ್ಯಾನೇಜ್‌ಮೆಂಟಿನ ಕಡೆ ಸೇರಿಕೊಂಡರಲ್ಲಾ ಎಂದು ಜಯದೇವಪ್ಪ ತಳಮಳಗೊಂಡ.

ಮೈಸೂರಿನಲ್ಲಿ ಬಿ.ಎ ಪಾಸಾದಮೇಲೆ ಬೆಳಗಾಂವಿಗೆ ಹೋಗಿ ಅಲ್ಲಿನ ಲಾ ಕಾಲೇಜಿನಲ್ಲಿ ಎಲ್.ಎಲ್.ಬಿ ಪಾಸುಮಾಡಿಕೊಂಡು ಬಂದು ಸ್ವಂತ ಊರಾದ ಮಂಡ್ಯದಲ್ಲಿ ಪ್ರಾಕ್ಟೀಸ್ ಆರಂಭಿಸಿದ ಜಯದೇವಪ್ಪ ತಾನು 'ಮಾರ್ಕ್ಸ್‌ವಾದಿ' (Marxist) ಎಂದು ಹೇಳಿಕೊಳ್ಳಲು ಹೆಮ್ಮೆಪಡುತ್ತಿದ್ದ. ಬೆಳಗಾಂವಿಯ ವಾಮಪಕ್ಷದ ರಾಜಕಾರಣಿಗಳ ಸ್ನೇಹ ಬೆಳಸಿಕೊಂಡಿದ್ದ ಜಯದೇವಪ್ಪ ತನ್ನ ಮಾರ್ಕ್ಸ್‌ವಾದವನ್ನು ಕೆಲವು ಸ್ಪಷ್ಟ ಸೂತ್ರಗಳಿಗೆ ಇಳಿಸಿದ್ದ.

'ಬಂಡವಾಳಗಾರರೆಲ್ಲಾ ಹುಟ್ಟು ರಾಕ್ಷಸರು. ಶ್ರಮಜೀವಿಗಳ ರಕ್ತ ಹೀರಿಯೇ ಅವರು ಬದುಕುವುದು.

'ಶ್ರಮಜೀವಿಗಳು ಯಾವ ವಿಲೋಭನೆಗೂ ಒಳಗಾಗದ ದೈವಾಂಶ ಸಂಭೂತರು.

'ಜಗತ್ತಿನ ಸರ್ವಸಂಪತ್ತೂ ಶ್ರಮಜೀವಿಗಳದ್ದು. ಬಂಡವಾಳಗಾರರು ಅನುಭವಿಸುತ್ತಿರುವ ಸಂಪತ್ತೂ ಶ್ರಮಜೀವಿಗಳದ್ದು.

'ಬಂಡವಾಳಗಾರರ ಸಂಪತ್ತನ್ನು ಸಾಧ್ಯವಾದರೆ ನ್ಯಾಯಮಾರ್ಗದಿಂದ – ಸಾಧ್ಯವಾದರೆ ನ್ಯಾಯವಲ್ಲದ ಮಾರ್ಗದಿಂದ ಕಸಿದು

ಕೊಳ್ಳಬೇಕು.

'ಬಂಡವಾಳಗಾರರ ಜತೆಯಲ್ಲಿ ಯಾವ ಬಗೆಯ ಸಂಪರ್ಕವಿಟ್ಟು ಕೊಳ್ಳುವವನನ್ನೂ ಶ್ರಮಜೀವಿಗಳ ಶತ್ರುವೆಂದು ಪರಿಗಣಿಸಬೇಕು.

'ಸರ್ಕಾರ ಬಂಡವಾಳಶಾಹಿಗಳ ಕೈಗೊಂಬೆ. ಸದ್ಯ ನಡೆಯುತ್ತಿರುವ ಸರ್ಕಾರವನ್ನು ಉರುಳಿಸಿ ಶ್ರಮಜೀವಿಗಳ ಸರ್ಕಾರ ಸ್ಥಾಪಿಸಬೇಕು.

'ಕಮ್ಯೂನಿಸ್ಟ್ ಮ್ಯಾನಿಫೆಸ್ಟೋದಲ್ಲಿರುವ ಮಹಾವಾಕ್ಯವೇ ಶ್ರಮಜೀವಿಗಳ ಗಾಯತ್ರಿ.

'The Communists disdain to conceal their views and aims. They openly declare that their ends can be attained only by forcible overthrow of all existing social conditions. Let the ruling classes tremble at a Communist revolution. The proletarians have nothing to lose but their chains. They have a world to win.

Workingmen of all countries, Unite!'

ಜಯದೇವಪ್ಪನಿಗೆ ಹೆಚ್ಚು ಪ್ರ್ಯಾಕ್ಟೀಸಿನ ತೊಂದರೆ ಇರಲಿಲ್ಲವಾದ್ದರಿಂದ ಅವನು ಸಾಕಷ್ಟು ವೇಳೆಯನ್ನು ಕಾರ್ಮಿಕ ಸಂಘಕ್ಕೆ ನಿವೇದಿಸಲು ಅನುಕೂಲವಾಗಿತ್ತು. ಅವನ ತಂದೆ ರುದ್ರಪ್ಪನವರು ಮನೆತನ ನಡಸಿಕೊಂಡು ಹೋಗುತ್ತಿದ್ದರು. ಮದ್ದೂರಿನಲ್ಲಿದ್ದ ತೋಟ, ಗದ್ದೆಗಳಿಂದ ರುದ್ರಪ್ಪನವರಿಗೆ ಕೈತುಂಬ ವರಮಾನ ಬರುತ್ತಿದ್ದುದರಿಂದ ಜಯದೇವಪ್ಪ ಉದರಂಭರಣಕ್ಕೆ ಕಷ್ಟಪಡಬೇಕಾಗಿರಲಿಲ್ಲ.

ಕಾರ್ಮಿಕ ಸಂಘದ ಕಛೇರಿಯಲ್ಲಿ ಪ್ರತಿನಿತ್ಯ ಕೂಲಿಗಾರರ ಸಂಕಷ್ಟಗಳು, ಮ್ಯಾನೇಜ್‌ಮೆಂಟಿನವರ ದಬ್ಬಾಳಿಕೆಯ ಬಗ್ಗೆ ಚರ್ಚೆಗಳಾಗುತ್ತಿದ್ದವು. ಸಂಘದ ನ್ಯಾಯವಾದಿಯಾಗಿದ್ದ ಜಯದೇವಪ್ಪ ಲೇಬರ್ ಕಮಿಷನರ ಮುಂದೆ ಕೂಲಿಗಾರರ ಸಂಕಷ್ಟಗಳನ್ನೊಯ್ದು

ವಾದವನ್ನಾಡುತ್ತಿದ್ದ.

ಕರಿಯಪ್ಪಗೌಡರನ್ನು ಕೂಲಿಗಾರರು ಅಪಾರವಾಗಿ ಪ್ರೀತಿಸು ವುದಕ್ಕೆ ಯೋಗ್ಯ ಕಾರಣವಿತ್ತು. ಕರಿಯಪ್ಪಗೌಡರು ಶ್ರೀಮಂತ ಕುಲಕ್ಕೆ ಸೇರದಿದ್ದರೂ ತಕ್ಕಮಟ್ಟಿಗೆ ಅನುಕೂಲವಾಗಿಯೇ ಇದ್ದರು. ಗಾಂಧೀ ಭಕ್ತರಾಗಿದ್ದ ಗೌಡರು ಅನೇಕ ಚಳುವಳಿಗಳಲ್ಲಿ ಭಾಗವಹಿಸಿ ಸೆರೆಮನೆಯ ವಾಸವನ್ನು ಚೆನ್ನಾಗಿ ಉಪಭೋಗಿಸಿದ್ದರು. ಸಕ್ಕರೆ ಕಂಪೆನಿಯ ಕೂಲಿಗಾರರ ಪಾಡು, ಕಾರ್ಖಾನೆಗೆ ಕಬ್ಬು ಒದಗಿಸುತ್ತಿದ್ದ ರೈತರ ಕಷ್ಟ ನೋಡಲಾರದೆ ಗೌಡರು ಕೂಲಿಕಾರರ ಸಂಘ ಸ್ಥಾಪಿಸಿ, ಅದಕ್ಕೆ ತ್ರಿಕರಣಪೂರ್ವಕವಾಗಿ ದುಡಿಯುತ್ತಿದ್ದರು.

ಗೌಡರು ಸಂಘ ಸ್ಥಾಪಿಸುವ ವಿಷಯ ಪ್ರಸ್ತಾಪಿಸಿದಾಗ ಅವರನ್ನು ಕೂಲಿಗಾರರೇ ಕಟುವಾಗಿ ವಿರೋಧಿಸಿದರು. ತಾವು ಸಂಘ ಸೇರಿದರೆ ಮ್ಯಾನೇಜ್‌ಮೆಂಟಿನವರ ಅವಕೃಪೆಗೆ ಪಾತ್ರರಾಗಿ ಕೆಲಸ ಕಳೆದುಕೊಳ್ಳುವ ಸಂಭವ ಬರಬಹುದೆಂದು ಕೂಲಿಗಾರರು ಹೆದರಿದರು. ಮ್ಯಾನೇಜ್‌ಮೆಂಟಿನ ಪಕ್ಷದ ಗೂಢಚಾರರು ಕೂಲಿಗಾರರ ಮನಸ್ಸಿನಲ್ಲಿ ಭಯ ಬಿತ್ತಿ ಸಂಘ ಸ್ಥಾಪನೆಯಾಗದಂತೆ ಸರ್ವಪ್ರಯತ್ನ ಮಾಡಿದರು.

ಗೌಡರು ಸಂಘ ಸ್ಥಾಪಿಸಿ ಕುಳಿತರು. ಅದರ ಸಂಖ್ಯಾಬಲ ಐವತ್ತು ಅರವತ್ತು ಮುಟ್ಟಬೇಕಾದರೆ ಸಾಕುಸಾಕಾಗಿಹೋಯಿತು. ಸದಸ್ಯರಾಗಿದ್ದ ಐವತ್ತು ಅರವತ್ತು ಜನರೂ ಚಂದಾಹಣ ಕೊಡು ತ್ತಿರಲಿಲ್ಲ. ಇಷ್ಟು ಸಾಲದೆಂದು, ಗೌಡರು ಕೂಲಿಗಾರರಿಂದ ಅಪಾರ ಹಣ ಶೇಖರಿಸಿ ಸ್ವಾಹಾ ಮಾಡುತ್ತಿದ್ದಾರೆಂಬ ಆಪಾದನೆಯೂ ಹೊರಟಿತು. ಮ್ಯಾನೇಜ್‌ಮೆಂಟಿನವರಿಂದ ಪ್ರೇರಿತರಾದ ಕೆಲವು ಕೂಲಿಗಾರರು ಗೌಡರನ್ನು ಎರಡು ಬಾರಿ ಥಳಿಸಿ ಅವರ ಮೈಮೂಳೆ ಗಳನ್ನೂ ಮುರಿದಿದ್ದರು.

ಎಲ್ಲದಕ್ಕೂ ಗೌಡರು ಒಂದೇ ಉತ್ತರ ಹೇಳುತ್ತಿದ್ದರು: 'ನಾನು ಗಾಂಧೀಜಿಯ ಶಿಷ್ಯ. ನಾನು ಕೈಗೊಂಡಿರುವ ಕೆಲಸ ಅನ್ಯಾಯ ವಾದುದಲ್ಲ. ತಿಳುವಳಿಕೆಯಿಲ್ಲದ ಜನ ನಿಷ್ಕಾರಣವಾಗಿ ನನ್ನನ್ನು

ಆಕ್ಷೇಪಿಸುತ್ತಿದ್ದಾರೆ. ಇಂದಲ್ಲ ನಾಳೆ ಅವರಿಗೇ ವಿವೇಕ ಬರುತ್ತದೆ.'

ಗೌಡರು ಊರಿನಲ್ಲಿದ್ದ ತಮ್ಮ ಒಂದು ತುಂಡು ಜಮೀನು ಮಾರಿ, ಆ ಹಣದಿಂದ ಸಂಘ ನಡೆಸಿದರು. ಒಂದು ವರ್ಷದ ತರುವಾಯ ಕೂಲಿಗಾರರು ತಾವಾಗಿಯೇ ಬಂದು ಸಂಘ ಸೇರಿದರು. ಸಂಘದ ಸದಸ್ಯತ್ವ ಐವತ್ತರಿಂದ ಏಳುನೂರಕ್ಕೇರಿತು.

ಕೃಷ್ಣಪ್ಪ ಗಾಂಧೀಭಕ್ತನೂ ಆಗಿರಲಿಲ್ಲ; ಗೌಡರಂತೆ ನಿಷ್ಕಲ ಚಿತ್ತನೂ ಆಗಿರಲಿಲ್ಲ. ಆದರೆ ಮೈ ಮುರಿಯ ದುಡಿಯುವುದರಲ್ಲಿ ಅವನು ನಿಸ್ಸೀಮನಾಗಿದ್ದ. ನಾಲ್ಕು ಆಣೆ ಚಂದಾ ವಸೂಲ್ಮಾಡು ವುದಕ್ಕೆ ನಾಲ್ಕು ಗಂಟೆ ಸುತ್ತಾಡುವುದಕ್ಕೆ ಕೃಷ್ಣಪ್ಪ ಸಿದ್ಧನಾಗಿದ್ದ. ಗೌಡರ ಇಚ್ಛಾಶಕ್ತಿಗೆ ಕೃಷ್ಣಪ್ಪನ ಕ್ರಿಯಾಶಕ್ತಿ ಅವಶ್ಯಕವಾಗಿ ಬೇಕಾಗಿತ್ತು.

ಸಂಘದಲ್ಲಿ ವಾದವಿವಾದಗಳು ಹೊರಟಾಗ ಕೃಷ್ಣಪ್ಪ, ಜಯ ದೇವಪ್ಪ ಒಂದಾಗುತ್ತಿದ್ದರು. ಅವರ ಜತೆಯಲ್ಲಿ ವಾದ ಮಾಡಲಾಗದೆ ಗೌಡರು ಸೋಲುತ್ತಿದ್ದರೂ, ಗೌಡರ ನಿರ್ಧಾರಕ್ಕೆ ಅವರಿಬ್ಬರೂ ಸೋಲ ಬೇಕಾಗಿತ್ತು.

ಮಾಧವರಾಯನ ವರ್ತನೆಯಿಂದ ಕೆರಳಿ ಕೆಂಡವಾಗಿದ್ದ ಜಯದೇವಪ್ಪ

"ವೆಂಕಣ್ಣನವರ ವಿರೋಧ ಕಟ್ಟಿಕೊಂಡು ನಾವೆಲ್ಲಾ ದುಡಿದು ಮಾಧವರಾಯರನ್ನು ಬಾರ್ ಅಸೋಸಿಯೇಷನ್ನಿನ ಪ್ರೆಸಿಡೆಂಟ್ ಮಾಡಿ ದುದಕ್ಕೆ ಒಳ್ಳೆಯ ಉಪಕಾರ ಮಾಡಿದರು."

ಎಂದು ಗುಡುಗಾಡಿದ. ಗೌಡರು ಸಹಜ ಸೌಮ್ಯತೆಯಿಂದ

"ರಾಯರು ಮ್ಯಾನೇಜ್‌ಮೆಂಟ್ ಪಕ್ಷ ಸೇರಿದುದು ನಮ್ಮ ಬಲ ಕುಂದಿದಂತಾಗಿದೆ. ಆದರೆ ಅವರನ್ನು ಆಕ್ಷೇಪಿಸಿ ಏನು ಪ್ರಯೋಜನ ಜಯದೇವಪ್ಪ. ರಾಯರು ನಮ್ಮ ಹಿತದ ವಿರುದ್ಧ ಹೋಗುತ್ತಾರೆಂದು ನಾನು ತಿಳಿದಿಲ್ಲ."

".ನಮ್ಮ ಹಿತವನ್ನವರು ಎದುರಿಸದಿದ್ದರೆ ಮ್ಯಾನೇಜ್‌ಮೆಂಟ್

ನವರು ಅವರನ್ನು ಪುರಸ್ಕರಿಸುತ್ತಾರೇನು ?"

"ಮ್ಯಾನೇಜ್‌ಮೆಂಟಿಗೆ ಬುದ್ಧಿ ಹೇಳಿ ರಾಯರು ಅವರನ್ನು ಹತೋಟಿಯಲ್ಲಿಟ್ಟುಕೊಳ್ಳುತ್ತಾರೆಂದೇಕೆ ಭಾವಿಸಬಾರದು."

"ಕುರಿ ತೋಳನನ್ನು ಹತೋಟಿಯಲ್ಲಿಡುವುದು ಸಾಧ್ಯವೇ ಗೌಡರೇ. ರಾಯರಂಥವರು ಕೂಡ ಅಲ್ಪ ಆಸೆಗೆ ಬಲಿಯಾದರಲ್ಲಾ ಎಂದು ನನಗೆ ತುಂಬ ವ್ಯಸನವಾಗುತ್ತದೆ."

"ಕೂಲಿಗಾರರ ರಕ್ತಹಣ ತಿಂದಲ್ಲದೆ ರಾಯರ ಶ್ರೀಮಂತಿಕೆ ಹೇಗೆ ಬೆಳೆಯಬೇಕು ಜಯದೇವಪ್ಪ."

ಎಂದು ಕೃಷ್ಣಪ್ಪ ಉರಿಯುವ ಬೆಂಕಿಗೆ ಆಜ್ಯ ಹುಯಿದ.

"ರಾಯರು ಮಗಳ ಮದುವೆ ಮಾಡುವ ಸಂಭ್ರಮದಲ್ಲಿದ್ದಾರೆ. ಅವರಿಗೆ ಮ್ಯಾನೇಜ್‌ಮೆಂಟಿನ ಸಹಾಯ ಬೇಕಾಗುವುದು ಸಹಜ."

ಗೌಡರ ಮುಖದಲ್ಲಿ ನೋವಿನ ಗೆರೆಗಳು ಮೂಡಿದವು. ಜಯದೇವಪ್ಪನ ಮರ್ಮಘಾತಕ ಮಾತು ಗೌಡರಿಗೆ ಅತುಲವೇದನೆಯನ್ನುಂಟುಮಾಡಿತು.

"ನೋಡಿ ಜಯದೇವಪ್ಪ. ರಾಯರು ಮ್ಯಾನೇಜ್‌ಮೆಂಟಿನ ಪಕ್ಷ ಸೇರಿದುದಕ್ಕೆ ನಾನೇನೂ ಸಂತೋಷಪಡುತ್ತಿಲ್ಲ. ನಮ್ಮ ಪಕ್ಷದಲ್ಲಿ ಅವರು ಇದ್ದಿದ್ದರೆ ನಮಗೆ ಸಿಂಹಬಲವಿರುತ್ತಿದ್ದಿತು. ಆದರೆ ಈ ಕಾರಣಕ್ಕಾಗಿ ನೀವು ಅವರನ್ನು ತೆಗಳುವುದು ಸರಿಯಲ್ಲ – ಅವರ ಸಂಸಾರದ ಕಷ್ಟಸುಖಗಳನ್ನು ಚರ್ಚಿಸುವುದು ನ್ಯಾಯವಲ್ಲ. ರಾಯರು ಹಣದಾಸೆಗಾಗಲಿ ಕೀರ್ತಿಯಾಸೆಗಾಗಲಿ ಅಲ್ಪತನಕ್ಕಿಳಿಯುವರಲ್ಲ. ಕೊಡುಗೈ ದೊರೆಗಳಾಗಿರುವ ರಾಯರು ಮುನ್ನೂರು ರೂಪಾಯಿ ಆಸೆಗೆ ಕೂಲಿಗಾರರನ್ನು ಬಲಿಗೊಡಲು ಹೊರಟಿದ್ದಾರೆಂಬ ಆಪಾದನೆ ಅನುಚಿತವಾದುದು. ಎಷ್ಟು ಕುಟುಂಬಗಳು ರಾಯರ ಮತ್ತು ಅವರ ಕುಟುಂಬದ ಹೆಸರು ಹೇಳಿಕೊಂಡು ಜೀವಿಸುತ್ತಿವೆಯೆಂಬುದನ್ನು ಜ್ಞಾಪಿಸಿಕೊಳ್ಳಿ. ತತ್ತ್ವಕ್ಕಾಗಿ ಬಡಿದಾಡೋಣ – ರಾಯರ ಜತೆಯಲ್ಲಿಯೂ ಜಗಳ ಮಾಡೋಣ. ಆದರೆ ಅವರ ಹೆಸರಿಗೆ ಮಸಿ

ಬಳೆಯುವ ಪ್ರಯತ್ನ ಮಾಡುವುದು ಬೇಡ."

ಎಂದರು. ಜಯದೇವಪ್ಪನ ಮುಖ ಕಂಗೆಟ್ಟಿತು. ಕೃಷ್ಣಪ್ಪ ಅಸಮಾಧಾನದಿಂದ

" ಇದಕ್ಕೇನು ಮಾಡುವುದು ಗೌಡನೇ ? " ಎಂದು ಕೇಳಿದ.

" ಏನೂ ಮಾಡುವುದು ಬೇಡ. ಅವರ ದಾರಿಯಲ್ಲಿ ಅವರು ಹೋಗಲಿ. ನಮ್ಮ ದಾರಿಯಲ್ಲಿ ನಾವು ಹೋಗೋಣ. ಕೂಲಿಗಾರರ ತಲೆಯಲ್ಲಿ ಇಲ್ಲಸಲ್ಲದ ಅಭಿಪ್ರಾಯಗಳನ್ನು ತುಂಬಿ ನಾವು ಅವರನ್ನು ಕೆರಳಿಸಿದರೆ, ಮುಂದೆ ಅವರನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ನಮಗೂ ಸಾಧ್ಯವಾಗುವುದಿಲ್ಲ. ತಿಸ್ತು ಕಳದುಕೊಂಡ ಕೂಲಿಗಾರರು ತಮ್ಮ ನಾಶಕ್ಕೆ ತಾವೇ ಕಾರಣರಾಗುತ್ತಾರೆ. ನಾವು ಸಂಯಮ ರಹಿತರಾಗಿ ಬಂಡವಾಳಶಾಹಿಯನ್ನು ಎದುರಿಸಲಾಗುವುದಿಲ್ಲ. ಅವರ ದೈತ್ಯಬಲದ ಮುಂದೆ ನಾವು ನಿಲ್ಲಲಾಗುವುದಿಲ್ಲ. ಅವರ ದೈತ್ಯ ಬಲವನ್ನು ನಾವು ದೈವಬಲದಿಂದಲೇ ಎದುರಿಸಬೇಕು."

ಎಂದು ಖಂಡಿತವಾಗಿ ಹೇಳಿದರು.

೧೯

ಸರ್ವೋತ್ತಮನ ಜತೆ ಹೊರಟ ನಾರಾಯಣಸ್ವಾಮಿಯನ್ನು ಏರೋಡ್ರೋಮಿನಲ್ಲಿ ರಘುನಾಥ್ ಕಂಡು ಖಾರ್‌ನಲ್ಲಿದ್ದ ತನ್ನ ಮನೆಗೆ ಕರೆದೊಯ್ದ. ಒಂದೆರಡು ದಿನ ಅವನ ಜತೆಯಿದ್ದ ಶಾಸ್ತ್ರ ಮಾಡಿ ನಾರಾಯಣಸ್ವಾಮಿ ಮೈಸೂರು ಅಸೋಸಿಯೇಷನ್ನಿಗೆ ಬಂದುಬಿಟ್ಟ. ತಾತ್ಕಾಲಿಕವಾಗಿ ಅವನು ಮಾತುಂಗ ಅಸೋಸಿಯೇಷನ್ ಸದಸ್ಯರೊಬ್ಬರ ರೂಮಿನಲ್ಲಿರಲು ವ್ಯವಸ್ಥೆಯಾಯಿತು. ನಾರಾಯಣಸ್ವಾಮಿ ಊರಿಗೆ ಕಾಗದ ಬರೆದು ತಾನು ಮಾಡಿಕೊಂಡಿದ್ದ ವ್ಯವಸ್ಥೆ ತಿಳಿಸಿದ.

ನಾರಾಯಣಸ್ವಾಮಿ ಮುಂಬಯಿಗೆ ತೀರ ಅಪರಿಚಿತನಾಗಿದ್ದುದರಿಂದ ಎಲ್ಲಿಗೂ ಹೋಗುತ್ತಿರಲಿಲ್ಲ. ಕಾಲೇಜ್ ಮುಗಿದೊಡನೆಯೇ ಮೈಸೂರು ಅಸೋಸಿಯೇಷನ್ ಸೇರಿ ಇಸ್ಪೇಟು ಆಡುವುದಕ್ಕೆ ಕೂಡುತ್ತಿದ್ದ. ರಘುನಾಥನೊಂದಿಗಾಗಲಿ ಸರ್ವೋತ್ತಮನೊಂದಿಗಾಗಲಿ ಸ್ನೇಹ ಬೆಳಸುವುದಕ್ಕೆ ನಾರಾಯಣಸ್ವಾಮಿ ಸ್ವಲ್ಪವೂ ಪ್ರಯತ್ನಿಸಲಿಲ್ಲ.

ಮಾಧವರಾಯ ಮಗನಿಗೆ ಕಾಗದ ಬರೆದು ಅಕ್ಟೋಬರ್ ತಿಂಗಳಿನಲ್ಲಿ ಮನೆಯಲ್ಲಿ ಲಗ್ನವಿರುವ ವಿಷಯ ಜ್ಞಾಪಿಸಿ 'ಎಂಟು ದಿವಸ ಮುಂಚಿತವಾಗಿಯೇ ನೀನು ಬರಬೇಕು' ಎಂದು ಆಜ್ಞಾಪಿಸಿದ್ದ. ನಾಣಿ ಲಗ್ನಕ್ಕೆ ಹೋಗಲು ಸ್ವಲ್ಪವೂ ಉತ್ಸುಕನಾಗಿರಲಿಲ್ಲ. ಆದರೀಗ ತಂದೆಯನ್ನು ವಿರೋಧಿಸುವುದು ತನಗೆ ಮೂಲವಾಗುವುದೆಂದು ತಿಳಿದು

'ಎಂಟು ದಿವಸ ಮುಂಚೆ ಬರುವುದಕ್ಕೆ ಸಾಧ್ಯವಾಗುತ್ತದೆಯೋ ಇಲ್ಲವೋ. ಆದಷ್ಟು ಬೇಗ ಬರುತ್ತೇನೆ. ಪಾಠ ಪ್ರವಚನಗಳು ಬಿರುಸಾಗಿ ನಡೆಯುತ್ತಿವೆ. ನಾನು ಬಹಳ ಓದಿಕೊಳ್ಳಬೇಕಾಗಿದೆ' ಎಂದು ತಂದೆಗೆ ಉತ್ತರ ಬರೆದಿದ್ದ.

ಮನೆಯಲ್ಲಿ ಮದುವೆಯ ಸಿದ್ಧತೆ ತಡೆಯಿಲ್ಲದೆ ನಡೆದಿತ್ತು. ಗೋದಮ್ಮನವರು ಹಪ್ಪಳ, ಸಂಡಿಗೆ, ಶಾವಿಗೆ, ಅವಲಕ್ಕಿ, ಚಕ್ಕುಲಿ ಹಿಟ್ಟು, ಮೆಣಸಿನ ಪುಡಿ ಸಿದ್ಧಗೊಳಿಸುತ್ತಿದ್ದರು. ಕಮಲನ ಎರಡು ಮಕ್ಕಳನ್ನು ನೋಡಿಕೊಂಡು, ಮನೆಗೆಲಸ ಪೂರೈಸುವುದೇ ರುಕ್ಮಿಣಿಗೆ ಸಾಕುಸಾಕಾಗುತ್ತಿತ್ತು.

ಒಂದು ದಿನ ರಾತ್ರಿ ಊಟ ಮುಗಿದಮೇಲೆ ಮಾಧವರಾಯ ತಾಂಬೂಲ ಹಾಕಿಕೊಳ್ಳುತ್ತಾ ಹಜಾರದಲ್ಲಿ ಕುಳಿತಿದ್ದ. ಗೋದಮ್ಮನವರೂ ಬಂದು ಮಗನೆದುರಿಗೆ ಕುಳಿತರು. ಮುಸರೆ ಪಾತ್ರೆಗಳನ್ನು ಹೊರಗೆ ಹಾಕಿ, ಹಾಲಿಗೆ ಹೆಪ್ಪು ಹಾಕಿ ರುಕ್ಮಿಣಿಯೂ ಅಡಿಗೆಯ ಮನೆ ಬಾಗಿಲು ಹಾಕಿಕೊಂಡು ಬಂದು, ಗಂಡನೆದುರಿಗಿದ್ದ ತಾಂಬೂಲದ ತಟ್ಟೆಯನ್ನು ಮುಂದಿಟ್ಟುಕೊಂಡು ಕುಳಿತಳು. ಮಾಧವರಾಯ ತಾಯಿಯನ್ನು

"ಅಳಿಯಮಯ್ಯನಿಗೆ ಏನೇನು ಕೊಡಬೇಕಮ್ಮ?" ಎಂದು ಕೇಳಿದ.

"ರುಕ್ಕೂ ಮನಸ್ಸಿನಲ್ಲಿ ಏನಿದೆ ಕೇಳಪ್ಪ."

"ನೀವೇ ಹೇಳಬಾರದೇನಮ್ಮ. ಹೊಸದಾಗಿ ನಾನು ಹೇಳುವುದೇನಿದೆ?"

ಎಂದು ರುಕ್ಮಿಣಿ ಹೇಳಿದಳು.

"ಗೊತ್ತೇ ಇದೆಯಲ್ಲಪ್ಪ. ನಂಕಲಿಕೆ ಪಂಚೆ, ನಾಗೋಲಿ ಪಂಚೆ, ಸೂಟು, ಚಿನ್ನದುಂಗುರ, ಬೆಳ್ಳಿಯ ತಟ್ಟೆ ಚೆಂಬು. ಅಕರಾಸ್ತೆ ಪಡುವವರು ಗಡಿಯಾರ ಕೊಡುತ್ತಾರೆ. ಈ ವಿಷಯ ಬೀಗರು ಏನಾದರೂ ಹೇಳಿದ್ದಾರೇನು?"

"ಈ ಸುದ್ದೀಗೇ ಅವರು ಬಂದಿಲ್ಲ. ಪದ್ಮನಿಗೆ....?"

" ಕಮಲನಿಗಿಟ್ಟ ಹಾಗೇ ಪದ್ಮನಿಗೂ ಎಲ್ಲಾ ಇಡಬೇಕಪ್ಪ. ಎರಡು ಒಳ್ಳೆಯ ಸೀರೆ, ದಿನಾ ಉಟ್ಟುಕೊಳ್ಳುವುದಕ್ಕೆ ನಾಲ್ಕು ಸೀರೆ, ಕೈಗೆ ನಾಲ್ಕು ಜತೆ ಬಳೆ, ಕೊರಳಿಗೆ ಮೂರೆಳೆ ಸರ, ಕಿವಿಗೆ ಹರಳೋಲೆ, ಕೈಗೆ ಉಂಗುರ."

" ಅವಳಿಗೆ ವಜ್ರದೋಲೆಯ ಮೇಲೆ ಮನಸ್ಸಿದೆ ಅಮ್ಮ."

" ಅವಳಿಗೀಗ ಓಲೆಯಿಟ್ಟರೆ ಕಮಲನಿಗೂ ಕೊಡಬೇಕಾಗುತ್ತದೆ."

" ಆ ಖರ್ಚು ಈಗ ಬೇಡ. ಮುಂದಕ್ಕೆ ದೇವರು ಅನುಕೂಲ ಮಾಡಿದಾಗ ಇಬ್ಬರಿಗೂ ಓಲೆ ತೆಗೆದುಕೊಡುತ್ತೇನೆ."

ಎಂದು ಮಾಧವರಾಯ ಹೇಳಿದ.

" ಬೆಳ್ಳಿಯ ಸಾಮಾನು, ಒಡವೆ ಬೇಗ ಮಾಡಿಸಲು ಹಾಕುವುದು ಒಳ್ಳೆಯದು ಮಾಧೂ. ಸಕಾಲಕ್ಕೆ ನಗ ಒದಗದಿದ್ದರೆ ಆಭಾಸವಾದೀತು."

" ಅಮ್ಮ ಹೇಳುವುದು ನಿಜಾಂಪ್ರೆ. ಮೊದಲು ಬೆಳ್ಳಿಯ ಸಾಮಾನು, ಒಡವೆ ಸಿದ್ಧವಾಗಿಬಿಟ್ಟರೆ, ಬಟ್ಟೆಬರೆ ನಿಧಾನವಾಗಿ ಕೊಂಡುಕೊಳ್ಳಬಹುದು."

" ನಾಳೆ ನಾಡಿದ್ದು ನೀನೂ ರುಕ್ಕೂ ಮೈಸೂರಿಗೆ ಹೋಗಿ ಈ ಕೆಲಸ ಮುಗಿಸಿಕೊಂಡೇ ಬಂದು ಬಿಡಿ."

" ಆಗಬಹುದು."

" ಮೈಸೂರಿನಲ್ಲಿ ಕಮಲನನ್ನೂ ಜತೆಯಲ್ಲಿ ಕರೆದುಕೊಂಡು ಹೋಗಿ."

" ಅದಕ್ಕೇನು – ಅವಶ್ಯಕವಾಗಿ ಆಗಲಿ."

" ಅಳಿಯಮಯ್ಯನ ಬಟ್ಟೆ ಬರೇಗೆ ಏನು ಮಾಡುತ್ತೀ ? "

" ಅದಕ್ಕೊಂದು ಉಪಾಯ ಯೋಚಿಸಿದ್ದೇನೆ. ರಾಮು ಹೆಸರಿಗೆ ಐದುನೂರು ರೂಪಾಯಿ ಕಳುಹಿಸಿ, ಅಳಿಯಮಯ್ಯನ ಜತೆಯಲ್ಲಿ ಕರೆದುಕೊಂಡು ಹೋಗಿ ಎಂಥ ಬಟ್ಟೆ ಅವರು ಅಪೇಕ್ಷೆಪಡುತ್ತಾರೋ ಅಂಥದ್ದು ಹೊಲೆಸು ಎಂದು ಬರೆಯುತ್ತೇನೆ."

"ಅದೇ ಸರಿಯಾದುದು. ಬೀಗಿತ್ತಿ, ಅವರ ಕಡೆಯವರು, ನಮ್ಮ ಮನೆ ಮಕ್ಕಳು ಎಲ್ಲರಿಗೂ ಉಡುಗೊರೆ ಕೊಡಬೇಕಪ್ಪ."

"ಅದು ಏನೇನು ಕೊಡಬೇಕೋ ನೀನೂ ರುಕ್ಕೂ ನೋಡಿಕೊಂಡು ಬಿಡಿ. ನನಗೇನು ತಿಳಿಯುತ್ತದೆ."

"ಮಿಕ್ಕವರ, ಮಾತು ಹಾಗಿರಲಿ – ನನ್ನ ರುಕ್ಕೂಗೆ ಏನು ತರುತ್ತೀ ?"

"ಏನು ತರಲಿ ನೀನೇ ಹೇಳಮ್ಮ."

"ನನ್ನದಿರಲಿ. ಅಮ್ಮನಿಗೆ ಒಂದು ಜತೆ ಒಳ್ಳೆ ಸೀರೆ ತಂದುಕೊಡಿ."

ಎಂದು ರುಕ್ಮಿಣಿ ಹೇಳಿದಳು. ಗೋದಮ್ಮನವರು ತುಸು ಕೋಪದಿಂದಲೇ

"ಬೀಗರು ಬಂಕರ ಎದುರಿಗೆ ನೀನು ಬಿಚ್ಚೋಲೆ ಗೌರಮ್ಮ ಇದ್ದ ಹಾಗೆ ಇರಬೇಡ ಕಣೇ ರುಕ್ಕೂ. ನೀನು ಸರಿಯಾಗಿ ಉಟ್ಟು ತೊಟ್ಟು ಮಾಡದಿದ್ದರೆ ನಾನು ಮದುವೆ ಕಾಲದಲ್ಲಿ ಎಲ್ಲಿಗಾದರೂ ಹೊರಟು ಹೋಗುತ್ತೇನೆ ನೋಡು."

"ಕೋಪ ಮಾಡಿಕೊಳ್ಳಬೇಡೀಮ್ಮ. ಮದುವೆಯ ಖರ್ಚು ಅಲ್ಪ ಸ್ವಲ್ಪದರಲ್ಲಿ ಪೂರೈಸುವುದಲ್ಲ. ನಾನು ಒಡವೆ ವಸ್ತ್ರ ಮಾಡಿಸಿ ಕೊಳ್ಳುವುದಕ್ಕೆ ಇದು ಕಾಲವೇ ನೀವೇ ಹೇಳಿ. ನನಗೆ ಯಾವಾಗ ಏನು ಬೇಕೂಂದರೆ ಮಹಾರಾಯರು ಇಲ್ಲವೆನ್ನುತ್ತಾರೆ. ಮದುವೆ ನಿಮ್ಮ ಆಶೀರ್ವಾದದಿಂದ ಸಾಂಗವಾಗಿ ನಡೆದು ಬೀಗರು, ಬೀಗರ ಕಡೆಯವರು, ಅತಿಥಿಗಳು ತೃಪ್ತರಾಗಿ ಹೋದಮೇಲೆ ನನಗೆ ಏನು ಬೇಕಾದರೂ ಮಾಡಿಸಿಕೊಡಿ—ಸಂತೋಷವಾಗಿ ಇಟ್ಟುಕೊಳ್ಳುತ್ತೇನೆ."

ಉಕ್ಕುತ್ತಿದ್ದ ಭಾವನಾಪ್ರವಾಹವನ್ನು ತಡೆಗಟ್ಟುತ್ತಾ ಗೋದಮ್ಮನವರು

"ಅವಳು ಹೇಗೆ ಹೇಳುತ್ತಾಳೋ ಹಾಗೆ ಮಾಡಿಬಿಡಪ್ಪ. ನನ್ನ ರುಕ್ಕೂ ಮೈ ತುಂಬ ಒಡವೆ ಹೇರಿಕೊಂಡರೂ ರಾಜರಾಜೇಶ್ವರಿಯೇ, ಬಿಚ್ಚೋಲೆ ಗೌರಮ್ಮನ ಹಾಗಿದ್ದರೂ ರಾಜರಾಜೇಶ್ವರಿಯೇ" ಎಂದರು.

ಸಂಭಾಷಣೆ ಅತಿ ಗಂಭೀರವಾದುದನ್ನು ಕಂಡು ರುಕ್ಮಿಣಿ ನಸುನಗುತ್ತಾ

" ಅಮ್ಮನ ಕೋರ್ಟಿನಲ್ಲಿ ನಾನೊಂದು ಅರ್ಜಿ ಗುಜರಾಯಿಸ ಬೇಕಾಗಿದೆ."

" ಯಾರ ಮೇಲೆ ರುಕ್ಕೂ ? "

" ನಾನು ಫಿರ್ಯಾದಿ – ಇವರು ಅಪರಾಧಿ."

ಮಾಧವರಾಯ ಸೋಜಿಗಗೊಂಡು

" ನಾನು ಅಪರಾಧಿಯೇ ? – ನನ್ನ ಅಪರಾಧ....? "

" ಘನ ನ್ಯಾಯಾಧೀಶರ ಮುಂದೆ ಅರಿಕೆಮಾಡಿಕೊಳ್ಳುತ್ತೇನೆ. ನ್ಯಾಯಾಧೀಶರು ಅಪ್ಪಣೆಕೊಡಬೇಕು."

" ಇದೇನೇ ರುಕ್ಕೂ. ನಿನ್ನ ಹುಡುಗಾಟಿಕೆ."

" ಹುಡುಗಾಟಿಕೆಯಲ್ಲ ಮಹಾಸ್ವಾಮಿ — ನನ್ನ ಅಹವಾಲು ತಾವು ಪರಾಮರ್ಶಿಸಬೇಕು."

" ಮಾಧೂಗಿಂತ ನೀನೇ ಚೆನ್ನಾಗಿ ವಕೀಲಿ ಮಾಡುತ್ತೀಯಲ್ಲೇ ರುಕ್ಕೂ. ಏನದು ನಿನ್ನ ಅಹವಾಲು – ಹೇಳು ಕೇಳೋಣ."

ಮಾಧವರಾಯನೂ ಕುತೂಹಲಗ್ರಸ್ತನಾದ.

" ಈ ಅಪರಾಧಿಗಳು ನನ್ನ ವಿಷಯದಲ್ಲಿ ಮೂರು ಅಪರಾಧ ಗಳನ್ನು ಮಾಡಿದ್ದಾರೆ. ೧) ನನಗೆ ಮೈಯಲ್ಲಿ ಸರಿಯಿಲ್ಲವೆಂದು ಊರಿನಲ್ಲೆಲ್ಲಾ ಪ್ರಸಾರ ಮಾಡಿದ್ದಾರೆ. ೨) ನಾನು ದೇಹಾರೋಗ್ಯವನ್ನು ನಿರ್ಲಕ್ಷಿಸುತ್ತಿದ್ದೇನೆಂದು ಎಲ್ಲರಿಗೂ ಹೇಳಿಕೊಂಡು ಬಂದಿದ್ದಾರೆ. ೩) ಮುನಸೀಫ್ ಪದ್ಮನಾಭಯ್ಯನವರ ಮುಂದೆ ಕಣ್ಣೀರು ಹಾಕಿ ನಾನು ಹಟಮಾರಿ ಎಂದು ಹೇಳಿದ್ದಾರೆ. ಇವರ ಅಪರಾಧಗಳಿಗೆ ತಕ್ಕ ಶಿಕ್ಷೆ ವಿಧಿಸಬೇಕು ಮಹಾಸ್ವಾಮಿ."

ಗೋದಮ್ಮನವರು ಮಾಧವರಾಯನ ಕಡೆ ತಿರುಗಿ

" ಅಪರಾಧಿ ಹೇಳುವುದೇನಿದೆ ? "

" ಫಿರ್ಯಾಧಿ ಹೇಳಿರುವ ಮೂರು ವಿಷಯಗಳೂ ನಿಜ. ದೇಹಾ

ರೋಗ್ಯವನ್ನು ನಿರ್ಲಕ್ಷಿಸಿದುದಕ್ಕೆ ಘನ ನ್ಯಾಯಾಧೀಶರು ಫಿರ್ಯಾದಿಯನ್ನು ಶಿಕ್ಷಿಸಬೇಕೆಂದು ಪ್ರಾರ್ಥಿಸುತ್ತೇನೆ."

ಗೋದಮ್ಮನವರು ಕ್ಷಣಕಾಲ ವಿಚಾರ ಮಾಡಿ

"ಫಿರ್ಯಾಧಿ ನಾಳೆ ಅಪರಾಧಿ ಜತೆ ಮೈಸೂರಿಗೆ ಹೋಗಿ ದೊಡ್ಡಾಸ್ಪತ್ರೆಯ ಡಾಕ್ಟರಿಗೆ ತೋರಿಸಿ ಔಷಧ ತೆಗೆದುಕೊಂಡು ಬರಬೇಕು. ಫಿರ್ಯಾದಿ ಇನ್ನು ಮುಂದೆ ಇಂಥ ಅಪರಾಧ ಮಾಡಿದರೆ ಘೋರ ಶಿಕ್ಷೆ ವಿಧಿಸಲಾಗುತ್ತದೆಂದು ಈಗಲೇ ಎಚ್ಚರಿಕೆ ಕೊಡಲಾಗಿದೆ" ಎಂದರು.

ಮಾಧೂ, ರುಕ್ಮಿಣಿ, ಗೋದಮ್ಮ ಗಹಗಹಿಸಿ ನಕ್ಕರು.

"ನಿಮ್ಮ ಮನಸ್ಸಿನಲ್ಲಿರುವ ಸಂದೇಹ ಪರಿಹಾರವಾಗಲಿ ಎಂದು ನಾನು ಈ ಮಾತು ಹೇಳಿದೆ. ನನಗೆ ಮೈಯಲ್ಲಿ ಏನೂ ಆಗಿಲ್ಲ. ನೀವು ಇಲ್ಲದ ಅನುಮಾನ ಇಟ್ಟುಕೊಂಡು ಕೊರಗುವುದನ್ನು ನಾನು ನೋಡಲಾರೆ. ನಾಳೆ ಜತೆಯಲ್ಲಿ ಬರುತ್ತೇನೆ – ಯಾವ ಡಾಕ್ಟರಿಗೆ ಬೇಕಾದರೂ ತೋರಿಸಿ. ಪದ್ಮನಾಭಯ್ಯನವರ ಹತ್ತಿರ ನೀವು ದುಃಖ ತೋಡಿಕೊಂಡುದು ಕೇಳಿ ನನ್ನ ಕರುಳು ಹಿಂಡಿ ಹೋಯಿತು. – ನಿಮ್ಮನ್ನು, ಅಮ್ಮನನ್ನು, ಮಕ್ಕಳನ್ನು ಬಿಟ್ಟು ಪರಲೋಕ ಯಾತ್ರೆ ಮಾಡುವಷ್ಟು ಹುಚ್ಚಿಯೇ ನಾನು"

ಎಂದು ರುಕ್ಮಿಣಿ ಹೇಳಿದಳು.

ತಾಯಿ, ಮಗ ಇಬ್ಬರೂ ಅವಳಿಗೆ ಉತ್ತರ ಕೊಡಲು ಪ್ರಯತ್ನಿಸಲಿಲ್ಲ.

ಗೋದಮ್ಮನವರು ವಿಷಯಾಂತರ ಮಾಡಿ

"ಮೈಸೂರಿನಲ್ಲಿ ಎಲ್ಲಿರುತ್ತೀರಿ?" ಎಂದು ಕೇಳಿದರು.

"ಅಲ್ಲಿರುವುದೇಕೆ – ಬೆಳಿಗ್ಗೆ ಹೋಗಿ ನಮ್ಮ ಕೆಲಸ ಮುಗಿಸಿಕೊಂಡು ಸಾಯಂಕಾಲ ಮನೆಗೇ ಬಂದುಬಿಡುತ್ತೇವೆ."

"ಹಾಗಾದರೆ ಗೌಡರಿಗೆ ಹೇಳಿ ಕಾರು ತರಿಸೋ ಮಾಧು."

"ಬೇಡಮ್ಮ–ಪದೇ ಪದೇ ಅವರಿಗೇಕೆ ತೊಂದರೆ ಕೊಡಬೇಕು."

ಎಂದು ರುಕ್ಮಿಣಿ ಅಸಮ್ಮತಿ ಸೂಚಿಸಿದಳು.

" ಅಮ್ಮ ಹೇಳಿದ್ದು ಸರಿ – ಹಾಗೆ ಮಾಡುವುದೇ ಒಳ್ಳೆಯದು. ಮೈಸೂರಿನ ಕೆಲಸ ಒಂದು ದಿವಸದಲ್ಲಿ ಮುಗಿಯುವುದಿಲ್ಲ ರುಕ್ಕೂ. ರಾತ್ರಿ ಅಲ್ಲಿ ನಿಲ್ಲಲೇಬೇಕಾಗುತ್ತದೆ. ಮೈಸೂರಿಗೆ ಹೋಗಿ ಕಮಲನ್ನ, ರಾಮಣ್ಣಾಚಾರ್ಯರನ್ನ ನೋಡದೆ ಬರುವುದು ಹೇಗೆ ? "

" ರಾಮಣ್ಣಾಚಾರ್ಯರ ಮನೆಯಲ್ಲಿಯೇ ಇದ್ದುಬಿಡಿ. ರುಕ್ಕೂ ಮಡೀಗೂ ಸರಿಹೋಗುತ್ತದೆ."

ರುಕ್ಮಿಣಿ ವಿಧಿಯಿಲ್ಲದೆ ಅವರ ಸಲಹೆ ಒಪ್ಪಿಕೊಂಡಳು.

## ೨೦

ಗುರುವಾರ ಬೆಳಿಗ್ಗೆ ಮೈಸೂರಿಗೆ ಹೊರಡುವುದೆಂದು ಮಾಧವ ರಾಯ ತೀರ್ಮಾನಿಸಿದ. ಬುಧವಾರ ರಾತ್ರಿಯೇ ಷರೀಫ್ ಸಾಹೇಬರ ಗಾಡಿ ಮಾಧವರಾಯನ ಮನೆಯ ಮುಂದೆ ಬಂದು ನಿಂತಿತು. ಮೈಸೂರಿನಿಂದ ಹಿಂದಿರುಗುವಾಗ ಪಟ್ಟಣಕ್ಕೆ ಬಂದೇ ಹೋಗಬೇಕೆಂದು ಗೌಡರೂ, ಷರೀಫ್ ಸಾಹೇಬರೂ ಡ್ರೈವರ್ ಸಂಗಡ ಹೇಳಿಕಳಿಸಿದ್ದರು.

ಗುರುವಾರ ಬೆಳಿಗ್ಗೆ ಮಂಡ್ಯದಿಂದ ಹೊರಟು ಮಾಧವರಾಯ, ರುಕ್ಮಿಣಿ ಒಂಭತ್ತುಗಂಟೆಯ ಸುಮಾರಿಗೆ ಮೈಸೂರು ತಲುಪಿ ನೇರವಾಗಿ ರಾಮಣ್ಣಾಚಾರ್ಯರ ಮನೆಗೆ ಹೋದರು. ಮಾಧವರಾಯನನ್ನೂ ರುಕ್ಮಿಣಿಯನ್ನೂ ಕಂಡ ಆಚಾರ್ಯರ ಸಂತೋಷಕ್ಕೆ ಪಾರವೇ ಇಲ್ಲ. ಅವಾಕ್ಕಾಗಿ ಬಾಗಿಲಿನಲ್ಲಿಯೇ ನಿಂತುಬಿಟ್ಟರು. ಆಚಾರ್ಯರ ಸ್ಥಿತಿಯನ್ನು ಅರ್ಥಮಾಡಿಕೊಂಡ ಮಾಧವರಾಯ

" ನಮ್ಮನ್ನು ಒಳಕ್ಕೆ ಬನ್ನಿ ಯೆನ್ನುವುದಿಲ್ಲವೇ ಆಚಾರ್‍ರೇ " ಎಂದ.

ಆಚಾರ್ಯರು ಬಹಿರ್ಮುಖರಾಗಿ

" ಲಕ್ಷ್ಮೀಸಮೇತ ಶ್ರೀಮನ್ನಾರಾಯಣ ಬಡವನ ಕುಠೀರಕ್ಕೆ ಬಂದರೆ ಮಾತನಾಡಲು ಬಾಯೆಲ್ಲಿಂದ ಬರಬೇಕು ಸ್ವಾಮಿ. ಒಳಕ್ಕೆ ದಯಮಾಡಿಸಿ " ಎಂದರು.

ಆಚಾರ್ಯರ ಹೆಂಡತಿ ವೆಂಕಮ್ಮ ಬಂದು ರುಕ್ಮಿಣಿಯನ್ನು

ಮರ್ಯಾದೆಯಿಂದ ಒಳಕ್ಕೆ ಕರೆದೊಯ್ದರು.

ಮಾಧವರಾಯ ತಾನು ಬಂದಿದ್ದ ಕೆಲಸವನ್ನು ಸೂಕ್ಷ್ಮವಾಗಿ ವಿವರಿಸಿ

"ಇನ್ನು ಹೊರಡಲು ಅಪ್ಪಣೆ ಕೊಡಿ. ತುಂಬ ಕೆಲಸವಿದೆ."

ಎಂದು ಹೇಳಿದ.

"ಮಧ್ಯಾಹ್ನ ತಾವೂ ಅಮ್ಮಾವರೂ ಸುಧಾಮನ ಅವಲಕ್ಕಿ ಒಪ್ಪಿಸಿಕೊಳ್ಳಬೇಕು."

"ನಾವು ಸಿದ್ಧವಾಗಿಯೇ ಬಂದಿದ್ದೇವೆ ಆಚಾರ್ರೇ. ಆಸ್ಪತ್ರೆ ಕೆಲಸ ಮುಗಿಸಿಕೊಂಡು ಬಂದುಬಿಡುತ್ತೇವೆ."

"ಅಮ್ಮಾವರಿಗೆ ಮೈಯಲ್ಲಿ ಏನಾಗಿದೆ ?"

"ಏನೂ ಆಗಿಲ್ಲ. ಸ್ವಲ್ಪ ನಿಶ್ಶಕ್ತಿ. ಮದುವೆ ಹೊತ್ತಿಗೆ ಕಾಹಿಲೆ ಬಿದ್ದಾಳು ಎಂದು ಮುಂಜಾಗ್ರತೆ ತೆಗೆದುಕೊಳುತ್ತಿದ್ದೇನೆ."

"ಅವಶ್ಯಕವಾಗಿ ಹೋಗಿಬನ್ನಿ ಸ್ವಾಮಿ. ಆ ತಾಯಿ ಚೆನ್ನಾಗಿದ್ದರೆ ಸಾಕು" ಎಂದರು.

ಇಬ್ಬರೂ ಹೊರಟಾಗ ರುಕ್ಮಿಣಿ

"ಹಾಸ್ಟಲ್ಲಿಗೆ ಹೋಗಿ ಕಮಲನ್ನ ನೋಡಿಕೊಂಡು ಹೋಗೋಣ"

ಎಂದಳು. ಮಾಧವರಾಯ ಅದಕ್ಕೊಪ್ಪದೆ

"ಈಗ ಬೇಡ. ಊಟ ಮಾಡಿಕೊಂಡು ಹೋಗಿ, ಅವಳನ್ನೂ ಜತೆಯಲ್ಲಿ ಕರೆದುಕೊಂಡು ಹೋಗೋಣ" ಎಂದ.

ಆಸ್ಪತ್ರೆಯ ವೆರಾಂಡಾದಲ್ಲಿ ಹಾಕಿದ್ದ ಬೆಂಚಿನ ಮೇಲೆ ರುಕ್ಮಿಣಿಯನ್ನು ಕೂಡಿಸಿ, ಮಾಧವರಾಯ ಲೇಡಿ ಮೆಡಿಕಲ್ ಆಫೀಸರನ್ನು ಹುಡುಕಿಕೊಂಡು ಬರಲು ಹೋದ.

ರುಕ್ಮಿಣಿ ತನ್ನ ದೃಷ್ಟಿಯನ್ನು ಸುತ್ತ ಹೊರಳಿಸಿ ನೋಡಿದಳು. ರೋಗಿಗಳ ಜಾತ್ರೆ ನೆರೆದಿತ್ತು.

ತಡೆಯಡೆಯಿಲ್ಲದೆ ಕೆಮ್ಮುತ್ತ ಕುಳಿತಿದ್ದ ಒಬ್ಬ ವೃದ್ಧ – ತಲೆಯಿಂದ ಕಾಲಿನವರೆಗೆ ಫ್ಲ್ಯಾನಲ್ ಬಟ್ಟೆ ಸುತ್ತಿಕೊಂಡು, ಹಳದಿ

ಮುಖ ಹೊತ್ತುಕೊಂಡಿದ್ದ ತರುಣ – ಹಂಚಿ ಕಡ್ಡಿಯಂತಾಗಿದ್ದ ತನ್ನ ಎಂಟು ವರ್ಷದ ಹೆಣ್ಣುಮಗುವನ್ನೆತ್ತಿಕೊಂಡು ಕುಳಿತಿದ್ದ ಮುಸ್ಲಿಮ್ ಹೆಣ್ಣುಮಗಳು – ಸಿಡಿದುಹೋಗುತ್ತಿದ್ದ ತಲೆಯನ್ನು ಕೈಯಲ್ಲಿ ಹಿಡಿದು ನರಳುತ್ತಿದ್ದ ಒಬ್ಬ ಇಳಿವಯಸ್ಸಿನ ಹೆಣ್ಣುಮಗಳು – ಹಲವಾರು ಜನ, ಹಲವಾರು ಬಗೆಯ ವ್ಯಾಧಿಗೆ ತುತ್ತಾಗಿದ್ದರು.

ಎಲ್ಲಿ ನೋಡಿದರೂ ನೋವು – ನರಳಾಟ.

ನೋವು ಜೀವನವನ್ನಾರಂಭಿಸುತ್ತಿದ್ದ ಮಗುವನ್ನೂ ಬಿಟ್ಟಿರಲಿಲ್ಲ– ಜೀವನವನ್ನು ಮುಗಿಸುತ್ತಿದ್ದ ಮುದುಕನನ್ನೂ ಬಿಟ್ಟಿರಲಿಲ್ಲ.

**ರೋಗ – ಸಾವು** ; ಇವೇ ಅಲ್ಲವೇ ಜೀವನದಮೇಲೆ ಆಧಿಪತ್ಯ ನಡಸುವ ಸರ್ವಾಧಿಕಾರಿಗಳು.

ರೋಗ ಸಾವಿನೆಡೆಗೆ ಕರೆದೊಯ್ಯುತ್ತದೆ – ಸಾವು ಎಲ್ಲಿಗೆ ಕರೆದೊಯ್ಯುತ್ತದೆ ?

ಸಾವಿನಾಚೆ ಬೇರೊಂದು ಲೋಕವಿದೆಯೇ ?

ಚಿರಂಜೀವಿಗಳು ಸಾವನ್ನು ಗೆದ್ದರಂತೆ – ಸಾವನ್ನು ಗೆಲ್ಲಲು ಸಾಧ್ಯವೇ ?

ಎಂದು ವಿಚಾರ ಮಾಡುತ್ತ ಕುಳಿತಿದ್ದ ರುಕ್ಮಿಣಿಯನ್ನು ಯಾರೋ ಬಂದು ಮಾತನಾಡಿಸಿದರು.

"ಅಮ್ಮ! ನೀವು ಇಲ್ಲಿ !...."

ಮಾತನಾಡಿಸಿದವರನ್ನು ರುಕ್ಮಿಣಿ ದಿಟ್ಟಿಸಿ ನೋಡಿದಳು.

"ನನ್ನ ಗುರುತು ನಿಮಗೆ ಸಿಕ್ಕಿದಂತೆ ಕಾಣಲಿಲ್ಲ !"

ರುಕ್ಮಿಣಿಗೆ ಥಟ್ಟನೆ ನೆನಪಾಯಿತು.

"ನರ್ಸ್ ಕೃಷ್ಣವೇಣಮ್ಮನಲ್ಲವೇ ?"

"ಹೌದು ತಾಯಿ – ಯಾವಾಗ ಬಂದಿರಿ ?"

"ಇದೇ ಬಂದೆನಮ್ಮ."

"ಒಬ್ಬರೇ ಕುಳಿತಿರುವಿರಲ್ಲ !"

"ಯಜಮಾನರು ಲೇಡಿಡಾಕ್ಟರ್ ನೋಡಿಕೊಂಡು ಬರು

ವುದಕ್ಕೆ ಹೋಗಿದ್ದಾರೆ."

"ಯಾರನ್ನು ತೋರಿಸುವುದಕ್ಕೆ?"

"ನನ್ನನ್ನೇ."

"ಏನಾಗಿದೆಯಮ್ಮ?"

"ಏನೂ ಇಲ್ಲ – ಸ್ವಲ್ಪ ನಿಶ್ಶಕ್ತಿ – ಅವರಿಗೆ ವೃಥಾ ಗಾಬರಿ."

"ಒಳಗೆ ಬನ್ನಿ ತಾಯಿ."

"ಅವರು ಬಂದು ಹುಡುಕಾಡುತ್ತಾರೆ."

"ನಾನು ವಾರ್ಡ್‌ಬಾಯ್‌ಗೆ ಹೇಳಿರುತ್ತೇನೆ. ಅವರನ್ನು ಕರೆದುಕೊಂಡು ಬರುತ್ತಾನೆ."

ಕೃಷ್ಣವೇಣಿ ರುಕ್ಮಿಣಿಯನ್ನು ಕರೆದುಕೊಂಡು ಹೋಗಿ ಡ್ರೆಸ್ಸಿಂಗ್ ರೂಮಿನಲ್ಲಿ ಕೂಡಿಸಿದಳು. ಒಂದೆರಡು ನಿಮಿಷಗಳಲ್ಲಿ ನಾಲ್ಕಾರು ನರ್ಸುಗಳು, ವಾರ್ಡ್‌ಬಾಯ್‌ಗಳು ರುಕ್ಮಿಣಿಯನ್ನು ಸುತ್ತುಗಟ್ಟಿ ಅವಳ ಯೋಗಕ್ಷೇಮ ವಿಚಾರಿಸಿದರು.

ರುಕ್ಮಿಣಿ ಅವರೆಲ್ಲರ ಕಷ್ಟ ಸುಖ ವಿಚಾರಿಸಿದಳು.

"ಆಗಿದ್ದ ಡಾಕ್ಟರೇ ಇದ್ದಾರೆಯೇ?"

"ಇಲ್ಲ ತಾಯಿ. ಅವರಿಗೆ ಚಿಕ್ಕಮಗಳೂರಿಗೆ ವರ್ಗವಾಯಿತು."

"ಈಗ ಯಾರಿದ್ದಾರೆ?"

"ಬೆಂಗಳೂರಿನಲ್ಲಿದ್ದ ಡಾ. ಶ್ರೀನಿವಾಸನ್ ಬಂದಿದ್ದಾರೆ."

"ಲೇಡಿ ಡಾಕ್ಟರು ಯಾರು?"

"ಅವರೂ ಹೊಸದಾಗಿ ಕೋಲಾರದಿಂದ ಬಂದಿದ್ದಾರೆ."

ವಾರ್ಡ್‌ಬಾಯ್ ಲೇಡಿ ಡಾಕ್ಟರನ್ನೂ, ಮಾಧವರಾಯನನ್ನೂ ಕರೆದುಕೊಂಡು ಬಂದ.

ಡಾಕ್ಟರಿಗೆ ರುಕ್ಮಿಣಿಯ ಪರಿಚಯವನ್ನು ಕೃಷ್ಣವೇಣಿಯೇ ಮಾಡಿಕೊಟ್ಟಳು.

ಡಾಕ್ಟರು ಪಕ್ಕದ ರೂಮಿಗೆ ರುಕ್ಮಿಣಿಯನ್ನು ಕರೆದೊಯ್ದರು. ಕೃಷ್ಣವೇಣಿಯೂ ಅವರ ಜತೆ ಹೋದಳು.

ಡಾಕ್ಟರೂ, ರುಕ್ಮಿಣಿ ಹಿಂದಿರುಗಲು ಅರ್ಧಗಂಟೆ ಬೇಕಾಯಿತು. ಡಾಕ್ಟರು ಮಾಧವರಾಯನನ್ನು ನೋಡಿ

"ಗಾಬರಿಗೇನೂ ಕಾರಣವಿಲ್ಲ. ನಿಶ್ಯಕ್ತಿ ಇದೆ. ವಿಶ್ರಾಂತಿ ಬೇಕು. ಕ್ಯಾಲ್ಷಿಯಂ ಗ್ಲೂಕೋನೇಟ್ ಇಂಜಕ್ಷನ್ಸ್ ಕೊಡಿಸಿ. ಕಾಡ್ ಲಿವರ್ ಆಯಿಲ್ ಮತ್ತು ವಿಟಮಿನ್ – ಬಿ ಕೊಡಬೇಕು. ಸ್ವಲ್ಪ ಹೃದಯ ದೌರ್ಬಲ್ಯವಿದೆ. ಅದಕ್ಕೂ ನಿಶ್ಯಕ್ತಿಯೇ ಕಾರಣ. ವಿಶ್ರಾಂತಿ, ಪುಷ್ಟಿಯಾದ ಆಹಾರಗಳಿಂದಲೇ ಆರೋಗ್ಯ ಸುಧಾರಿಸುತ್ತದೆ"

ಎಂದು ಕಾಗದದ ಮೇಲೆ ತಾವು ಹೇಳಿದ ಔಷಧ, ಪಥ್ಯ, ಅನುಪಾನವನ್ನು ಬರೆದುಕೊಟ್ಟರು.

ನರ್ಸುಗಳು ತರಿಸಿಟ್ಟಿದ್ದ ಹೂವು, ಹಣ್ಣು, ವೀಳೆಯದೆಲೆಯನ್ನು ಕೃಷ್ಣವೇಣಿ ಕೈಗೆ ತೆಗೆದುಕೊಂಡು ರುಕ್ಮಿಣಿಗಿತ್ತು ಅವಳ ಪಾದಗಳಿಗೆ ನಮಸ್ಕರಿಸಿದಳು. ಉಳಿದ ನರ್ಸುಗಳೂ ವಾರ್ಡ್‌ಬಾಯ್ ಅವಳ ಮೇಲ್ಪಂಕ್ತಿಯನ್ನನುಸರಿಸಿದರು. ಲೇಡಿ ಡಾಕ್ಟರು ಅರೆಮೂಕರಾಗಿ ಈ ದೃಶ್ಯ ನೋಡುತ್ತ ನಿಂತುಬಿಟ್ಟರು. ರುಕ್ಮಿಣಿಯ ಮನಸ್ಸಿನಲ್ಲಿ ನಾನಾ ಭಾವನೆಗಳು ವಿಕಾಸಗೊಂಡಿದ್ದವು.

"ಎಷ್ಟು ಉಪಚಾರ ಮಾಡುತ್ತಿರುವಿರಿ. ನಾನು ನಿಮಗೆ ಏನೂ ಮಾಡಲಿಲ್ಲವಲ್ಲ. -- ಯಜಮಾನರಿಗೆ ಅಪಘಾತವಾಗಿ ಅವರು ಈ ಆಸ್ಪತ್ರೆಯಲ್ಲಿ ಕೆಲಕಾಲ ನಿಲ್ಲಬೇಕಾಯಿತು ಡಾಕ್ಟರೇ. ನಾನೂ ಇಲ್ಲಿಯೇ ಬಂದಿದ್ದೆ. ಆಗ ಕೃಷ್ಣವೇಣಮ್ಮ, ಇತರ ನರ್ಸುಗಳು, ವಾರ್ಡ್‌ಬಾಯ್ ತೋರಿಸಿದ ಸಹಾನುಭೂತಿಯನ್ನು ನಾನು ಎಂದಿಗೂ ಮರೆಯಲಾರೆ. ದುಃಖವನ್ನು ಸಹಿಸುವ ಶಕ್ತಿಯನ್ನು ಕೊಟ್ಟವರೇ ಅವರು."

"ಅಮ್ಮ ಆಸ್ಪತ್ರೆಯನ್ನು ದೇವಾಲಯ ಮಾಡಿಬಿಟ್ಟರು ಡಾಕ್ಟರೇ" ಎಂದು ಕೃಷ್ಣವೇಣಮ್ಮ ಹೇಳಿದಳು.

"ಹೌದು ತಾಯಿ. ಇದು ನಿಜವಾಗಿಯೂ ದೇವಾಲಯವೇ. ಎಲ್ಲಿ ನೋವು, ದುಃಖ, ಸಂಕಟವಿದೆಯೋ ಅಲ್ಲಿ ಭಗವಂತ ಇರುತ್ತಾನೆ.

ನೀವು ಮಾಡುತ್ತಿರುವುದೂ ಭಗವಂತನ ಕೆಲಸವನ್ನೇ."

"ಅಮ್ಮ – ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ"

ಎಂದು ಕೃಷ್ಣವೇಣಮ್ಮ ಕಳಕಳಿಯಿಂದ ಪ್ರಾರ್ಥಿಸಿಕೊಂಡಳು.

ಮಾಧವರಾಯನನ್ನೂ, ರುಕ್ಮಿಣಿಯನ್ನೂ ಬೀಳ್ಕೊಡಲು ಎಲ್ಲರೂ ಕಾರಿನವರಿಗೆ ಬಂದರು. ಲೇಡಿಡಾಕ್ಟರೂ ಅವರನ್ನನುಸರಿಸಿ ಬಂದರು. ಕಾರು ಮುಂದಡಿಯಿಟ್ಟಮೇಲೆ ಅವರು ತಮ್ಮ ಕೆಲಸಕ್ಕೆ ಹಿಂದಿರುಗಿದರು.

ಕಾರಿನಲ್ಲಿ ಬರುವಾಗ ರುಕ್ಮಿಣಿಯೇ

"ನೋಡಿದಿರಾ – ಸುಮ್ಮನೆ ಗಾಬರಿಯಾದಿರಿ. ಡಾಕ್ಟರು ಹೇಳಿದ ಮಾತನ್ನೇ ನಾನು ಹೇಳಲಿಲ್ಲವೇ. – ಶಂಖದಿಂದ ಬಿದ್ದರೇ ತೀರ್ಥ."

"ಅದಿರಲಿ – ಡಾಕ್ಟರು ಹೇಳಿದ ಔಷಧಿ, ಟಾನಿಕ್ಕು ನೀನು ಕ್ರಮವಾಗಿ ತೆಗೆದುಕೊಳ್ಳಬೇಕು."

"ನನ್ನ ಚಿಕಿತ್ಸೆ ನಾನು ಮಾಡಿಕೊಳ್ಳುತ್ತೇನೆ. ನೀವು ನಿರಾತಂಕವಾಗಿರಿ. ಇನ್ನೊಂದು ತಿಂಗಳ ಮೇಲೆ ನೀವು ಮೈಸೂರಿಗೆ ಕರೆದುಕೊಂಡು ಬಂದು ಡಾಕ್ಟರಿಗೆ ತೋರಿಸಿ – ಅವರು ಏನು ಹೇಳುವರೋ ನೋಡಿ."

"ಹಾಗೂ ಆಗಬಹುದು. ಒಂದು ತಿಂಗಳಲ್ಲಿ ನಿನ್ನ ಆರೋಗ್ಯ ಸುಧಾರಿಸದಿದ್ದರೆ ನೀನು ಡಾಕ್ಟರ ಚಿಕಿತ್ಸೆಗೆ ಒಳಪಡಬೇಕು."

"ಆಗಬಹುದು."

ಮಾಧವರಾಯ, ರುಕ್ಮಿಣಿ ಮನೆಗೆ ಬರುವ ವೇಳೆಗೆ ಆಚಾರ್ಯರು ದೇವರಪೂಜೆಮಾಡಿ, ಎಲೆ ಹಾಕಿಸಿ, ಅವರ ದಾರಿಯನ್ನೇ ನೋಡುತ್ತಿದ್ದರು. ಡ್ರೈವರನ್ನು ಊಟಮಾಡಿಕೊಂಡು ಬಾರೆಂದು ಹೇಳಿ, ಮಾಧವರಾಯ ಅವನ ಕೈಗೆ ಐದು ರೂಪಾಯಿ ಹಾಕಿದ.

ರುಕ್ಮಿಣಿಯ ಆರೋಗ್ಯದ ಬಗ್ಗೆ ಡಾಕ್ಟರು ಹೇಳಿದುದನ್ನು ಕೇಳಿ ಆಚಾರ್ಯರಿಗೆ ಪರಮ ಸಂತೋಷವಾಯಿತು.

ರುಕ್ಮಿಣಿಯ ಸ್ನಾನಕ್ಕೆ ವೆಂಕಮ್ಮನವರು ವ್ಯವಸ್ಥೆ ಮಾಡಿದರು. ರುಕ್ಮಿಣಿ ಸ್ನಾನ ದೇವರಪೂಜೆ ಮುಗಿಸಿ ಆಚಾರ್ಯರಿಂದ ತೀರ್ಥ

ಸ್ವೀಕರಿಸಿ ಊಟಕ್ಕೆ ಕುಳಿತಳು.

ವೆಂಕಮ್ಮನವರು ಪಾಂಗಿತವಾಗಿ ಪಾಯಸದಿಂದ ಆರಂಭಿಸಿ ಬಡಿಸಲಾರಂಭಿಸಿದರು. ಬಿಸಿಬೇಳೆ ಹುಳಿಯನ್ನ, ನಿಂಬೆಹಣ್ಣಿನಗೊಜ್ಜು, ಹಯಗ್ರೀವ ಅಂದಿನ ಊಟದ ಮುಖ್ಯ ಸಾಮಗ್ರಿಗಳಾಗಿದ್ದವು.

" ಇದೇನ್ರೀ ವೆಂಕಮ್ಮನವರೇ ದೊಡ್ಡ ಔತಣವನ್ನೇ ಮಾಡಿ ಬಿಟ್ಟಿರುವಿರಲ್ಲಾ " ಎಂದು ರುಕ್ಮಿಣಿ ಕೇಳಿದಳು.

" ದೊಡ್ಡವರು ಮನೆಗೆ ಬಂದಾಗ ಅನ್ನ ಸಾರು ಮಾಡಿಹಾಕುವುದು ಸಂಪ್ರದಾಯವಲ್ರೀ. "

" ದೊಡ್ಡವರು ಯಾರು ? "

" .... .... .... .... .. . "

" ನೀವು ಇಷ್ಟು ಉಪಚಾರಮಾಡುವ ಹಾಗಿದ್ದರೆ, ನಾವು ಇನ್ನೊಂದು ಸಲ ಬರುವುದೇ ಇಲ್ಲ ನೋಡಿ. "

" ಹಾಗನ್ನಬೇಡಿ ರುಕ್ಮಿಣಮ್ಮ. ನನ್ನ ಮನಸ್ಸಿಗೆ ತುಂಬ ಪೇಚಾಟವಾಗುತ್ತದೆ. ನಿಮ್ಮನ್ನು ಸರಿಯಾಗಿ ಆದರಿಸಿ ಆತಿಥ್ಯ ಮಾಡುವ ಯೋಗ್ಯತೆ ದೇವರು ನಮಗೆ ಕೊಡಲಿಲ್ಲ. "

ವೆಂಕಮ್ಮನವರ ಮನಸ್ಸಿಗೆ ವ್ಯಥೆಯಾಗಬಾರದೆಂದು ರುಕ್ಮಿಣಿ ಒಂದು ತುತ್ತು ಹೆಚ್ಚಾಗಿಯೇ ಸ್ವೀಕರಿಸಿದಳು.

ತಾಂಬೂಲ ಚರ್ವಣ ಮುಗಿದಮೇಲೆ ರುಕ್ಮಿಣಿ ಮಾಧವ ರಾಯನಿಗೆ

" ಇನ್ನು ಹೊರಡೋಣ. ಗಂಟೆ ಎಷ್ಟು ನೋಡಿ. "

" ಎರಡು ಹೊಡೆಯಲಿದೆ. "

" ಕಮಲನ್ನ ನೋಡಿಕೊಂಡು, ಸಗರ್ತರ ಅಂಗಡಿಗೆ ಹೋಗ ಬೇಕಲ್ಲವೇ ? "

" ಈಗ ತಾನೆ ಊಟವಾಗಿದೆ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳ ಬಾರದೇ ? "

" ಕಮಲೂ ಜತೆಯಲ್ಲಿಯೇ ವಿಶ್ರಾಂತಿಯಾಗುತ್ತದೆ. ಸಾಯಂ

ಕಾಲದೊಳಗಾಗಿ ನಮ್ಮ ಕೆಲಸ ಮುಗಿಸಿಕೊಂಡು ಊರಿಗೆ ಹೊರಟು ಬಿಡೋಣ."

"ಏನವಸರ. ನಾಳೆ ಹೋದರಾಗದೇ? ಸಾಯಂಕಾಲ ಚಾಮುಂಡಿ ಬೆಟ್ಟಕ್ಕೋ, ಕನ್ನಂಬಾಡಿಗೋ ಹೋಗಿ ಬರೋಣ. ನೀನು ಮನೆಬಿಟ್ಟು ಹೊರಗೆ ಕಾಲಿಡುವುದೇ ಅಪರೂಪ."

"ಈಗ ಬೇಡ. ಮನೆಯಲ್ಲಿ ಅಮ್ಮ ಒಬ್ಬರೇ ಇರುತ್ತಾರೆ. ಮಕ್ಕಳು ಎಷ್ಟು ಕಾಟ ಕೊಟ್ಟಿರುತ್ತವೋ ಏನೋ? ನೀವೂ ರಾಮಣ್ಣಾ ಚಾರ್ಯರಿಗೆ ಹೇಳಿಬಿಡಿ. ನಾವು ಪುನಃ ಇಲ್ಲಿ ಬರಬೇಕಾಗಿಲ್ಲ."

ಡ್ರೈವರೂ ಊಟ ಮುಗಿಸಿಕೊಂಡು ಹಿಂದಿರುಗಿ ಬಂದು ಕಾರು ಒರಸುತ್ತ ನಿಂತಿದ್ದ.

ಮಾಧವರಾಯ, ರುಕ್ಮಿಣಿ ಹೊರಡಲನುವಾದರು. ವೆಂಕಮ್ಮ ವಿನಯದಿಂದ

"ರಾತ್ರೀಗೆ ಇಲ್ಲೇ ಬಂದುಬಿಡಬೇಕು" ಎಂದರು.

"ಇಲ್ಲಮ್ಮ. ರಾತ್ರೀಗೆ ಊರಿಗೇ ಹೊರಟುಹೋಗುತ್ತೇವೆ. ಮನೆಯಲ್ಲಿ ಅಮ್ಮ ಒಬ್ಬರೇ ಇದ್ದಾರೆ. ಇವತ್ತು ಗುರುವಾರ – ನಾನು ರಾತ್ರಿ ಊಟವೂ ಮಾಡುವಹಾಗಿಲ್ಲ."

ವೆಂಕಮ್ಮನವರು ರುಕ್ಮಿಣಿಯ ಹಣೆಗಿಟ್ಟು ಎಲಡಿಕೆಕೊಟ್ಟರು. ರುಕ್ಮಿಣಿ ಅವರಿಗೆ

"ಮದುವೆಗೆ ಹದಿನೈದು ದಿವಸ ಮುಂಚಿತವಾಗಿಯೇ ನೀವೂ ಆಚಾರ್ರ್ರು ಬಂದುಬಿಡಬೇಕ್ರೀ. ನಮ್ಮ ಮನೆಗೆ ನೀವೇ ಹಿರಿಯರು– ನೀವು ನಿಂತುಕೊಂಡು, ಎಲ್ಲಾ ಕೆಲಸವನ್ನೂ ಶಾಸ್ತ್ರೋಕ್ತವಾಗಿ ನಡಸಿ ಕೊಡಬೇಕು"

ಎಂದು ಉಪಚಾರ ಹೇಳಿದಳು. ಮಾಧವರಾಯನೂ ಆಚಾರ್ಯರಿಗೆ ಆಹ್ವಾನ ನೀಡಿದ.

ಮಾಧವರಾಯ, ರುಕ್ಮಿಣಿ ಹಾಸ್ಪೆಲ್ಲಿಗೆ ಬಂದಾಗ ಕಮಲ ರೂಮಿನಲ್ಲಿರಲಿಲ್ಲ. ಅಂಬುಜವಲ್ಲಿಯೇ ಅವರಿಗೆ ಸ್ವಾಗತ ಬಯಸಿದಳು.

ಬಂದಿದ್ದವರು ಕಮಲನ ತಾಯಿತಂದೆ ಎಂದು ತಿಳಿದಮೇಲಂತೂ ಅಂಬುಜವಲ್ಲಿಯ ಉತ್ಸಾಹಕ್ಕೆ ಮಿತಿಯಿರಲಿಲ್ಲ.

" ಕಮಲ ಬರುವುದಕ್ಕೆ ಇನ್ನೂ ಹೊತ್ತಾಗುತ್ತದೆಯೇ ? "

" ಆಗಬಹುದು. ಅವರಿಗೆ ಎರಡು ಗಂಟೆ ಪಾಠವಿತ್ತು."

" ನೀವು ಕಮಲನ ರೂಮ್‌ಮೇಟ್ ಅಂಬುಜವಲ್ಲಿಯಲ್ಲವೇ ? "

" ಹೌದು."

" ಕಮಲನ ಕಾಗದಗಳ ತುಂಬ ನಿಮ್ಮ ವಿಷಯವೇ ಇರುತ್ತದೆ ಅಂಬುಜವಲ್ಲಿ."

" ಅವರು ನನ್ನನ್ನು ತುಂಬ ಪ್ರೀತಿಸುತ್ತಾರೆ. ನನ್ನ ಸ್ವಂತ ಅಕ್ಕನ ಹಾಗಿದ್ದಾರೆ. ನಾನು ಹೋಗಿ ಕಮಲಮ್ಮನನ್ನು ಕರೆದು ಕೊಂಡು ಬರಲೇ ? "

" ನೀವು ಏಕೆ ಹೋಗಬೇಕು – ನಾನೇ ಹೋಗಿ ಬರುತ್ತೇನೆ."

ಎಂದು ಮಾಧವರಾಯ ಎದ್ದ.

" ಬೇಡಿ ಸರ್. ನೀವು ಕುಳಿತಿರಿ. ಕಾಲೇಜಿನಲ್ಲಿ ಕಮಲಮ್ಮ ನನ್ನು ಹುಡುಕುವುದು ನಿಮಗೆ ಕಷ್ಟವಾಗಬಹುದು. ನಾನು ಹೋಗಿ ಬರುತ್ತೇನೆ."

" ನಮ್ಮ ಕಾರಿದೆ – ತೆಗೆದುಕೊಂಡು ಹೋಗಿ."

ಎಂದು ಮಾಧವರಾಯ ಡ್ರೈವರನ್ನು ಕರೆದು ಅವನಿಗೆ ಹೇಳಿ ಕಳಿಸಿಕೊಟ್ಟ.

ಕಮಲನ ರೂಮಿನಲ್ಲಿ ರುಕ್ಮಿಣಿಯ ಕಣ್ಣು ಸೆಳೆದುದು ಕಮಲನ ಗಂಡನ ಭಾವಚಿತ್ರ. ಅದನ್ನು ನೋಡುತ್ತ ನೋಡುತ್ತ ರುಕ್ಮಿಣಿಯ ಕಣ್ಣುಗಳಲ್ಲಿ ನೀರುರುಳಿತು.

ಮಾಧವರಾಯನೂ ಮಂಕಾಗಿ ಮೌನತಾಳಿ ಕುಳಿತುಬಿಟ್ಟ.

ನೀರವತೆ ತಂದೊಡ್ಡಿದ್ದ ಮನೋವ್ಯಥೆ ನಿವಾರಿಸಲು ಮಾಧವ ರಾಯ

" ರುಕ್ಮಿಣಿಯ ರೂಮ್‌ಮೇಟ್ ತುಂಬ ಜಾಣೆಯ ಹಾಗೆ ಕಾಣು

ತ್ತಾಳೆ" ಎಂದ.

"ತುಂಬ ಓದಿಕೊಂಡಿದ್ದಾಳಂತೆ! ದೇಶವಿದೇಶಗಳ ದಾರ್ಶನಿಕರ ವಿಷಯವನ್ನೆಲ್ಲಾ ತಿಳಿದುಕೊಂಡಿದ್ದಾಳಂತೆ!"

"ಕಮಲಸಿಗೆ ಒಳ್ಳೆಯ ನೆರೆ ಸಿಕ್ಕಿತಲ್ಲಾ ಅದೇ ಸಂತೋಷ."

ಕಾರು ಬಂದು ನಿಂತ ಶಬ್ದವಾಯಿತು.

ಕಮಲ ಓಡುತ್ತ ಬಂದು

"ಅಮ್ಮಾ – ಅಣ್ಣಾ!" ಎಂದಳು.

ಅವಳ ಹಿಂದೆ ಅಂಬುಜವಲ್ಲಿ ಒಂದು ಸಣ್ಣ ಬುಟ್ಟಿ ಹೊತ್ತು ಕೊಂಡು ಬಂದಳು.

ಕಮಲ ಒಂದೇ ಸಮನೆ ಕೇಳಿದ ಪ್ರಶ್ನೆಗಳಿಗೆ ರುಕ್ಮಿಣಮ್ಮ ಸಾವಧಾನವಾಗಿ ಉತ್ತರವಿತ್ತು

"ಬೇಗ ಬಟ್ಟೆ ಹಾಕಿಕೋ. ಪೇಟೆಕಡೆ ಹೋಗಿಬರೋಣ" ಎಂದಳು.

ಕಮಲ ತಾಯಿಯ ಕಡೆ ತಿರುಗಿ

"ಅಮ್ಮ – ಇವರೇ ಅಂಬುಜವಲ್ಲಿ. ನನ್ನ ರೂಮ್‌ಮೇಟ್."

"ಅವರ ಪರಿಚಯವಾಗಿದೆ ಕಮಲ."

ಕಮಲ ತಾಯಿಯ ಸಮೀಪಕ್ಕೆ ಬಂದು, ಕಿವಿಯಲ್ಲಿ

"ಅಂಬುಜನನ್ನೂ ಕರೆದುಕೊಂಡು ಬರಲೇ?" ಎಂದಳು.

"ಅಗತ್ಯವಾಗಿ ಕರೆದುಕೊಂಡು ಬಾ."

ಅಂಬುಜವಲ್ಲಿ ರುಕ್ಮಿಣಮ್ಮನಿಗೆ

"ಸ್ವಲ್ಪ ಕಾಫಿ ತಂದು ಕೊಡಲೇ?" ಎಂದು ಕೇಳಿದಳು.

"ನನಗೆ ಬೇಡ ತಾಯಿ. ಅವರಿಗೆ ತಂದುಕೊಡಿ – ಇದು ಹೇಗೂ ಅವರ ಕಾಫಿ ವೇಳೆ."

"ನೀವು ಸ್ವಲ್ಪ ಹಾಲಾದರೂ ತೆಗೆದುಕೊಳ್ಳಿ."

"ಬೇಡಮ್ಮ. ಇದೇ ಊಟ ಮುಗಿಸಿಕೊಂಡು ಬಂದಿದ್ದೇವೆ. ರಾಮಣ್ಣಾಚಾರ್ಯರು ದೊಡ್ಡ ಔತಣ ಮಾಡಿಸಿ ಬಿಟ್ಟರು."

ಅಂಬುಜ ಕಾಫಿ ತರಲು ಓಡಿದಳು. ಕಮಲ ತಾಯಿಯ ಕಡೆ ತಿರುಗಿ

"ನೀನು ಏನಾದರೂ ಸ್ವಲ್ಪ ತೆಗೆದುಕೊಳ್ಳಮ್ಮ. ಅಂಬುಜ ಮನಸ್ಸಿಗೆ ತುಂಬ ಪೇಚಾಡಿಕೊಳ್ಳುತ್ತಾರೆ. ನೀನು ಬಂದಿರುವುದು ಅವರಿಗೆ ದೊಡ್ಡ ಭಾಗ್ಯ ಬಂದಂತಾಗಿದೆ. ಕಾಲೇಜಿನಿಂದ ಹಿಂದಿರುಗುವಾಗ ಅವರೇ ಕಾರು ನಿಲ್ಲಿಸಿ ಹಣ್ಣು ಹಂಪಲು ಕೊಂಡುಕೊಂಡು ಬಂದಿದ್ದಾರೆ."

"ಹಾಗಾದರೆ ಒಂದು ಕಿತ್ತಲೆಹಣ್ಣು ಕೊಡು ಕಮಲಾ."

ಕಮಲ ಕೊಟ್ಟ ಕಿತ್ತಲೆ ಹಣ್ಣನ್ನು ಸುಲಿದು ಗಂಡನಿಗೂ, ಕಮಲನಿಗೂ ಎರಡೆರಡು ತೊಳೆ ಕೊಟ್ಟು ಉಳಿದ ಹಣ್ಣನ್ನು ಕೈಯಲ್ಲಿಯೇ ಹಿಡಿದು ಕುಳಿತಳು.

ಅಂಬುಜವಲ್ಲಿ ತಾನೇ ಕಾಫಿ ಲೋಟ ಹಿಡಿದುಕೊಂಡು ಬಂದು, ಮಾಧವರಾಯನಿಗಿತ್ತಳು.

ರುಕ್ಮಿಣಮ್ಮ ಅವಳ ಕೈಗೆ ಎರಡು ತೊಳೆ ಕೊಟ್ಟು, ತಾವೊಂದು ತೊಳೆ ಬಾಯಿಗೆ ಹಾಕಿಕೊಂಡು

"ತುಂಬ ಚೆನ್ನಾಗಿದೆಯಮ್ಮ. ಮಗು ನನಗೋಸ್ಕರ ತುಂಬ ಕಷ್ಟಪಟ್ಟಿದೆ" ಎಂದಳು.

ಅಂಬುಜವಲ್ಲಿಯ ಸಂತೋಷ ಮುಗಿಲು ಮುಟ್ಟಿತು.

"ಸೇಬಿನ ಹಣ್ಣಿದೆ. ಸಿಪ್ಪೆ ತೆಗೆದು ಕೊಡಲೇನ್ರೀ?"

"ಬೇಡಮ್ಮ – ಕಿತ್ತಲೆ ಹಣ್ಣು ತಿನ್ನುತ್ತೇನೆ – ಸಾಕು. ನೀವೂ ನಮ್ಮ ಜತೆ ಬರುವಿರಾ ಅಂಬುಜವಲ್ಲಿ?"

"ಓಹೋ! ಸ್ವಲ್ಪ ಹೊತ್ತು ನಿಮ್ಮ ಜತೆಯಲ್ಲಿರುವ ಅವಕಾಶ ಕಳೆದುಕೊಳ್ಳುತ್ತೇನೆಯೇ? ಅಮ್ಮ, ನೀವು ನನ್ನ ಬಹುವಚನದಲ್ಲೇಕೆ ಮಾತಾಡಿಸುವಿರಿ – ನಾನು ಕಮಲಮ್ಮನ ಹಾಗೇ ನಿಮ್ಮ ಮಗಳು ಎಂದು ತಿಳಿದುಕೊಳ್ಳಬಾರದೇ?"

"ಹಾಗೇ ಆಗಲಪ್ಪ. ಒಳ್ಳೆ ತಾಯಿ ಹೆತ್ತಮಗು. ಎಷ್ಟು

ಗುಣವಂತೆಯಮ್ಮ ನೀನು..... ನಿಮ್ಮ ತಂದೆ ತುಂಬ ಓದಿಸಿದ್ದಾರಂತೆ ”

“ ಅಲ್ಪ ಸ್ವಲ್ಪ ಓದಿಕೊಂಡಿದ್ದೇನ್ರಿ. ಕಮಲಮ್ಮ ನನ್ನ ಮೇಲಿನ ಪ್ರೀತಿಗೆ ಉತ್ಪ್ರೇಕ್ಷೆ ಮಾಡುತ್ತಾರೆ. ಪುಸ್ತಕದ ಓದೆಲ್ಲಾ ಹರಟೆಗೆ ಗ್ರಾಸ. ಓದಿದಷ್ಟೂ ಸಂಶಯಗಳು ಹೆಚ್ಚುತ್ತವೆ – ಮನಸ್ಸಿನ ಅಶಾಂತಿ ಬೆಳೆಯುತ್ತದೆ. ದೊಡ್ಡವರ ಜೀವನ ನೋಡಿ, ಅದರಂತೆ ನಡೆಯುವುದೇ ನಿಜವಾದ ಓದು ಎಂದು ಅಣ್ಣ ಹೇಳುತ್ತಲೇ ಇರುತ್ತಾರೆ. ಅಮ್ಮ – ನೀವೂ, ರಾಯರೂ, ಕಮಲಮ್ಮ, ಮಕ್ಕಳು ಎಲ್ಲರೂ ಒಮ್ಮೆ ನಮ್ಮ ತೋಟಕ್ಕೆ ಬರುವುದಿಲ್ಲವೇ ? ಕಾಫಿ ಹೂ ಬಿಟ್ಟಾಗ ನೋಡುವುದಕ್ಕೆ ಬಲು ಚೆನ್ನಾಗಿರುತ್ತದೆ. ತೋಟಕ್ಕೆಲ್ಲಾ ಹೂವು ಹಾಸಿದಂತಿರುತ್ತದೆ. ಲಘುವಾದ ಪರಿಮಳ ತುಂಬಿ ತೋಟ ತುಂಬ ಆಕರ್ಷಕವಾಗುತ್ತದೆ. ನನ್ನ ತಾಯಿ ನಿಮ್ಮನ್ನು ನೋಡಿದರೆ ತುಂಬ ಸಂತೋಷಪಟ್ಟುಕೊಳ್ಳುತ್ತಾರೆ. ”

“ ಅವರೂ ತುಂಬ ಮಡಿವಂತರಂತೆ ! ”

“ ಹೌದ್ರಿ. ಅಮ್ಮ ಹದಿನಾರಾಣೆ ಭಾಗ ಹಿಂದು. ಅಣ್ಣ ಎಂಟಾಣೆ ಭಾಗ ಮಾತ್ರ ಹಿಂದು. ಆದರೆ ಅಮ್ಮನ ಮಡಿ – ಹುಡಿ, ಪೂಜೆ – ಪುರಸ್ಕಾರ ಅಣ್ಣ ಗೌರವಿಸುತ್ತಾರೆ. ‘ಅವಳು ಭಕ್ತಳು. ಭಕ್ತಿಮಾರ್ಗದಲ್ಲಿಯೇ ಅವಳ ಕಲ್ಯಾಣ. ಅದು ನನ್ನ ಮಾರ್ಗವಲ್ಲದಿದ್ದರೂ, ನಾನು ಗೌರವಿಸುವುದು ಧರ್ಮ ’ ಎನ್ನುತ್ತಾರೆ. ”

“ ಅಮ್ಮ, ಇವರ ಜತೆ ನೀನು ಮಾತಿಗೆ ಕುಳಿತುಬಿಟ್ಟರೆ ಬೆಳಕು ಹರಿದುಬಿಡುತ್ತದೆ. ನಿನ್ನ ಕೆಲಸ ಕಾರ್ಯವೆಲ್ಲಾ ಕೆಟ್ಟುಹೋಗುತ್ತದೆ.”

ಎಂದು ಕಮಲ ಎಚ್ಚರಿಸಿದಳು.

“ ಬೇಗ ಬಟ್ಟೆ ಹಾಕಿಕೊಂಡು ಹೊರಡಲು ಸಿದ್ಧರಾಗಿ ”

ಎಂದು ರುಕ್ಮಿಣಮ್ಮ ಹೇಳಲು, ಕಮಲ, ಅಂಬುಜ ತಮ್ಮ ಸೀರೆ ಕುಪ್ಪಸಗಳನ್ನು ತೆಗೆದುಕೊಂಡು ಪಕ್ಕದ ರೂಮಿಗೆ ಹೋಗಿ ವಸ್ತ್ರಧರಿಸಿ ಬಂದರು.

ಮಾಧವರಾಯ ಕಾರನ್ನು ನೇರವಾಗಿ ಕೃಷ್ಣಸ್ವಾಮಿಶೆಟ್ಟರ

ಅಂಗಡಿಗೆ ಬಿಡಿಸಿದ.

ಶೆಟ್ಟರ ಅಂಗಡಿಯಲ್ಲಿ ಚಿನ್ನದ ಒಡವೆಗಳು, ಬೆಳ್ಳಿಯಪಾತ್ರೆಗಳನ್ನು ಮಾಡಲು ಹಾಕಲಾಯಿತು.

ಕಾರು ಎಲ್ಲರನ್ನೂ ಹಿಂದಕ್ಕೆ ಹಾಸ್ಟಲ್ಲಿಗೆ ಕರೆದು ತಂದಿತು. ರುಕ್ಮಿಣಿ, ಮಾಧವರಾಯ ಕಾರಿನಿಂದ ಕೆಳಗಿಳಿಯಲಿಲ್ಲ.

"ಇವತ್ತಿದ್ದು ನಾಳೆ ಹೋಗಮ್ಮ" ಎಂದು ಕಮಲ ಪ್ರಾರ್ಥಿಸಿದಳು.

"ಇಲ್ಲ ಕಮಲೂ – ಮನೆಯ ವಿಷಯ ನಿನಗೆ ಗೊತ್ತಿದೆಯಲ್ಲ"

ಎಂದು ಅಂಬುಜವಲ್ಲಿಯ ಕಡೆ ತಿರುಗಿ

"ಹದಿನೈದು ದಿವಸ ಮುಂಚೆಯೇ ನೀನೂ ಕಮಲನ ಜತೆ ಬಂದುಬಿಡಬೇಕಮ್ಮ. ನನಗೂ ಹೆಚ್ಚು ಬಳಗವಿಲ್ಲ. ನನ್ನ ಮಕ್ಕಳ ಸ್ನೇಹಿತರೇ ನನ್ನ ಬಳಗ"

ಎಂದು ಗಂಡನನ್ನು ಕುರಿತು

"ಚಿನ್ನಸ್ವಾಮಿಯನ್ನು ನೋಡಲೇ ಇಲ್ಲವಲ್ಲಾಂದ್ರೆ" ಎಂದಳು.

"ಹೊತ್ತಾಯಿತು. ಕತ್ತಲಾಗುವುದರೊಳಗೆ ಊರು ಸೇರುವುದು ಒಳ್ಳೆಯದು. ಇನ್ನೊಮ್ಮೆ ಬಂದಾಗ ನೋಡಿದರಾಯಿತು."

ಕಾರು ಸ್ಟಾರ್ಟ್ ಆಯಿತು. ಕಮಲ, ಅಂಬುಜ ಪೆಚ್ಚುಮುಖ ಹಾಕಿಕೊಂಡು ನಿಂತರು. ರುಕ್ಮಿಣಿ ಅವರಿಬ್ಬರ ಕೆನ್ನೆ ಸವರಿದಳು.

ಕಾರು ಶ್ರೀರಂಗಪಟ್ಟಣ ತಲುಪಿದಾಗ, ಡ್ರೈವರು ಸ್ಪೀಡ್ ಇಳಿಸಿ

"ಗೌಡರನ್ನು ನೋಡುವುದಿಲ್ಲವೇ ಸಾರ್" ಎಂದು ಕೇಳಿದ.

"ಈಗ ಬೇಡಪ್ಪ. ಊರಿಗೇ ಬಿಟ್ಟುಬಿಡು. ನಾವು ಪಟ್ಟಣದಲ್ಲಿ ಕಾಲಿಟ್ಟರೆ ಗೌಡರು, ಷರೀಫ್‌ಸಾಹೇಬರು ನಮ್ಮನ್ನು ಉಳಿಸಿಕೊಂಡುಬಿಡುತ್ತಾರೆ" ಎಂದ.

ಅಂದೇ ಮಾಧವರಾಯ, ರುಕ್ಮಿಣಿ ಹಿಂದಿರುಗಿದುದನ್ನು ಕಂಡು ಗೋದಮ್ಮನವರು ಆಶ್ಚರ್ಯಪಟ್ಟರು. ಮಾಧವರಾಯ ನಸುನಗುತ್ತಾ ತಾಯಿಗೆ

" ನಿನ್ನ ಸೊಸೆ ಶುದ್ಧ ಮನೆಮೊಳಿಯಮ್ಮ. ಎಲ್ಲಿ ಹೋದರೂ ಅವಳಿಗೆ ಮನೆಯದೇ ಚಿಂತೆ. ' ಅಮ್ಮ ಒಬ್ಬರೇ ಇರುತ್ತಾರೆ ' ಎಂದು ಪರಿತಪಿಸುತ್ತಾಳೆ " ಎಂದ.

ಡ್ರೈವರ ಕೈಗೆ ಹತ್ತು ರೂಪಾಯಿ ಇನಾಂ ಹಾಕಿ ಮಾಧವರಾಯ

" ನೀನು ಹೊರಟುಬಿಡಪ್ಪ. ಗೌಡರಿಗೂ ಸಾಹೇಬರಿಗೂ ನಮಸ್ಕಾರ ತಿಳಿಸಿ, ಹೋದ ಕೆಲಸವೆಲ್ಲಾ ಸಾಂಗವಾಗಿ ಆಯಿತು ಎಂದು ಹೇಳು "

ಎಂದು ತಿಳಿಸಿದ.

ರುಕ್ಮಿಣಿ ಅತ್ತೆಗೆ ಎಲ್ಲವನ್ನೂ ಕೂಲಂಕಷವಾಗಿ ವಿವರಿಸಿದಳು. ತನ್ನ ಮನಸ್ಸಿಗೆ ತೃಪ್ತಿಯಾಗುವವರೆಗೆ ಅಂಬುಜವಲ್ಲಿಯ ಗುಣ ಪ್ರಶಂಸೆ ಮಾಡಿದಳು.

# ೨೧

ಎರಡು ತಿಂಗಳಲ್ಲಿ ನಾರಾಯಣಸ್ವಾಮಿ ಮುಂಬಯಿಯ 'ಹೊಸತನ'ವನ್ನು ನೀಗಿಕೊಂಡಿದ್ದ. ಮೈಸೂರು ಅಸೋಸಿಯೇಷನ್ನಿನಲ್ಲಿ ಅವನಿಗೆ ದೊರೆತಿದ್ದ ಗೆಳೆಯರು ಅವನ ಬೇಸರವನ್ನು ಪರಿಹಾರ ಮಾಡಿದ್ದರು.

ನಾರಾಯಣಸ್ವಾಮಿ ರಘುನಾಥನೊಂದಿಗೆ ಹೆಚ್ಚು ಸಂಬಂಧ ಬೆಳಸಿಕೊಳ್ಳಲಿಲ್ಲ. ರಘುನಾಥನೇ ಎರಡು ಮೂರು ಬಾರಿ ನಾರಾಯಣಸ್ವಾಮಿಯನ್ನು ಹುಡುಕಿಕೊಂಡು ಬಂದು ಆಹ್ವಾನ ನೀಡಿದ್ದರೂ ಅವನು ರಘುನಾಥನ ಮನೆಯ ಕಡೆ ಸುಳಿಯಲಿಲ್ಲ.

ಪಾಠ ಪ್ರವಚನಗಳನ್ನು ನಾರಾಯಣಸ್ವಾಮಿ ವಿಶೇಷವಾಗಿ ಗಮನಿಸುತ್ತಿದ್ದುದಲ್ಲದೆ, ಆದಷ್ಟು ಬೇಗ ಸ್ವತಂತ್ರವೃತ್ತಿ ಕಲ್ಪಿಸಿಕೊಳ್ಳುವುದರ ಕಡೆಗೂ ಲಕ್ಷ್ಯ ಕೊಡುತ್ತಿದ್ದ.

ಮುಂಬಯಿಯಲ್ಲಿ ಪ್ರತಿಯೊಬ್ಬರೂ ತಮ್ಮ ವೃತ್ತಿಗೆ ಪೂರಕವಾಗಿ ಯಾವದಾದರೊಂದು ಖಾಸಗಿ ವ್ಯವಹಾರ ಮಾಡುತ್ತಿದ್ದುದು ನಾರಾಯಣಸ್ವಾಮಿಯ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿತ್ತು. 'ಹಣ – ಸಂಪಾದನೆ – ವ್ಯವಹಾರ' ವಾತಾವರಣ ಎಲ್ಲೆಲ್ಲಿಯೂ ಹಬ್ಬಿತ್ತು. ಯಾರ ಬಾಯಲ್ಲಿ ಕೇಳಿದರೂ 'ಸಾವಿರ ಬಂತು – ಸಾವಿರ ಹೋಯಿತು' ಎನ್ನುವ ಮಾತೇ!

ಹಣಕ್ಕೆ ಮುಂಬಯಿಯಲ್ಲಿದ್ದ ಅಲೌಕಿಕ ಪ್ರಾಶಸ್ತ್ಯ ಕಂಡು ನಾರಾಯಣಸ್ವಾಮಿ ದಿಙ್ಮೂಢನಾಗಿದ್ದ.

'ಮುಂಬಯಿಯಲ್ಲಿ ಸುಖವಾಗಿರಬೇಕಾದರೆ ಸಾಕಷ್ಟು ಹಣ ಗಳಿಸಬೇಕು.

'ಹಣವಿಲ್ಲದೆ ಬಾಳುವೆ ಮಾಡಿ ಏನೂ ಸಾರ್ಥಕವಿಲ್ಲ.'

ಎನ್ನುವ ಸಿದ್ಧಾಂತಕ್ಕೆ ಬರಲು ನಾರಾಯಣಸ್ವಾಮಿಗೆ ಬಹಳ ಕಾಲ ಹಿಡಿಯಲಿಲ್ಲ.

'ಹಣ ಬೇಕು.

'ಹಣ ಗಳಿಸಬೇಕು.

'ಹಣ ಕೂಡಿಟ್ಟುಕೊಳ್ಳಬೇಕು.

'ಆದರೆ ಗಳಿಸುವುದು ಹೇಗೆ – ಕೂಡಿಟ್ಟುಕೊಳ್ಳುವುದು ಹೇಗೆ?'

ಎನ್ನುವ ಪ್ರಶ್ನೆ ಬೃಹದಾಕಾರ ತಾಳಿ ನಾರಾಯಣಸ್ವಾಮಿಯ ಎದುರು ನಿಂತಿತು.

ನಾರಾಯಣಸ್ವಾಮಿಯ ಪರಂಪರೆ ಅವನ ದೃಷ್ಟಿಗೆ ಸ್ವಲ್ಪವೂ ಪರಿಪೋಷಕವಾಗಿರಲಿಲ್ಲ.

'ತಂದೆ ವ್ಯಾಪಾರಿಯಾಗಿರಲಿಲ್ಲ.

'ತಂದೆ ಸಾಕಷ್ಟು ಗಳಿಸುತ್ತಿದ್ದರು. ಆದರೆ ಆ ಗಳಿಕೆ ಅವರ ಖರ್ಚಿಗೇ ಸಾಲುತ್ತಿರಲಿಲ್ಲ.

'ತಾಯಿಯೂ ಹಣ ಕೂಡಿಡುವ ಮನೋಭಾವದವಳಲ್ಲ.

'ಒಂದಾಣೆ ಕೈಸೇರುವಲ್ಲಿ ಎರಡಾಣೆ ಕೈಬಿಡುತ್ತಿತ್ತು.

'ಎಷ್ಟು ಬಂದರೂ ತಂದೆತಾಯಿಯ ಖರ್ಚಿಗೇ ಸಾಲುತ್ತಿರಲಿಲ್ಲ.'

ಮುಂಬಯಿಯಲ್ಲಿ ನಾರಾಯಣಸ್ವಾಮಿ ಸೋಷಿಯಾಲಜಿ ಕಲಿಯುವುದರ ಜತೆಗೆ ಹಣ ಸಂಪಾದನೆ – ಸಂಗ್ರಹ ವಿದ್ಯೆಯನ್ನೂ ಕಲಿಯಬೇಕಾಗಿತ್ತು.

ಹಣ ಧ್ಯಾನದಲ್ಲಿ ನಿರತನಾಗಿ ದಾರಿಗಾಣದೆ ತೊಳಲುತ್ತಿದ್ದ ನಾರಾಯಣಸ್ವಾಮಿಗೆ ಗೆಳೆಯ ಪಾಂಡು ಮಾರ್ಗ ತೋರಿಸಿದ.

ಪಾಂಡು ಪುರಂದರದಾಸರ ಶಿಷ್ಯನಂತೆಯೇ ಏಳು ವರ್ಷಗಳ ಹಿಂದೆ ಮುಂಬಯಿಗೆ ಬಂದಿದ್ದ. ಕೆಲಸ ಹುಡುಕುತ್ತಿದ್ದ ಅವನಿಗೆ ಥ್ಯಾಕರ್ ಕಂಪೆನಿಯಲ್ಲಿ ಕಾರಕೂನ ಹುದ್ದೆ ಸಿಕ್ಕಿತು. ಪಾಂಡು ಬರಿಯ ಕಾರಕೂನಿಕೆ ಮಾಡುವುದರಲ್ಲಿಯೇ ತೃಪ್ತನಾಗದೆ ಪುಸ್ತಕ ಪ್ರಕಾಶನ – ಮಾರಾಟ – ಪ್ರಚಾರ ಕ್ರಮಗಳನ್ನೂ ಚೆನ್ನಾಗಿ ಪಾಠ ಮಾಡಿಕೊಂಡ. ಪಾಂಡುವಿನ ಚಾಣಾಕ್ಷತನ ಮೆಚ್ಚಿಕೊಂಡ ಥ್ಯಾಕರ್ ಕಂಪೆನಿಯವರು ಅವನನ್ನು ತಮ್ಮ ಪ್ರಕಟನಾ ವಿಭಾಗಕ್ಕೆ ವರ್ಗ ಮಾಡಿ, ಜವಾಬ್ದಾರಿ ಸ್ಥಾನವಿತ್ತರು. ಪಾಂಡುವಿಗೆ ಪ್ರಕಟನ ಪ್ರಪಂಚದ ರಹಸ್ಯಗಳರಿವಾದುದಲ್ಲದೆ, ಹಲವು ಶ್ರೀಮಂತರು, ಬಂಡವಾಳಗಾರರು, ವ್ಯಾಪಾರಿಗಳ ಪರಿಚಯವಾಯಿತು. ನಾಲ್ಕು ವರ್ಷ ಥ್ಯಾಕರ್ ಕಂಪೆನಿಯಲ್ಲಿ ದುಡಿದಮೇಲೆ ಪಾಂಡು ತನ್ನದೇ ಕಂಪೆನಿ ಸ್ಥಾಪಿಸಿಕೊಂಡು ಪ್ರಕಟನಕಾರ್ಯ ಕೈಗೊಂಡಿದ್ದ. ಶ್ರೀಮಂತ ಮಾಣೆಕಜೀ ಬಂಡವಾಳ ಹಾಕುವುದೆಂತಲೂ, ಪಾಂಡು ವ್ಯವಹಾರದ ಭಾಗ ನೋಡಿಕೊಳ್ಳುವುದೆಂತಲೂ, ಅವರಲ್ಲಿ ಒಪ್ಪಂದ ವಾಯಿತು. ಹಾರನ್‌ಬೀ ರಸ್ತೆಯಲ್ಲಿ 'ಆರ್ಯನ್ ಪಬ್ಲಿಕೇಷನ್ಸ್' (Aryan Publications) ಕಂಪೆನಿಯ ಕಛೇರಿಯೂ ಆರಂಭ ವಾಯಿತು. ಮಾಣೆಕಜೀ ಕಂಪೆನಿಯ ಅಧ್ಯಕ್ಷರಾದರು ; ಪಾಂಡು ಅದರ ಮ್ಯಾನೇಜಿಂಗ್ ಡೈರೆಕ್ಟರಾದ.

ಪಾಂಡು ಇಂಗ್ಲಿಷ್, ಹಿಂದಿ ಗ್ರಂಥಗಳನ್ನು ಪ್ರಕಟಿಸ ಲಾರಂಭಿಸಿದ. ಎರಡನೆಯ ವರ್ಷದಲ್ಲಿಯೇ ಗುಜರಾತಿ ಗ್ರಂಥಗಳ ಪ್ರಕಟನೆಯನ್ನೂ ಕೈಗೊಂಡ. ಮೂರೇ ವರ್ಷಗಳಲ್ಲಿ ಪಾಂಡು ಮುಂಬಯಿಯ ಪ್ರಕಾಶಕರಲ್ಲಿ ಗಣ್ಯವ್ಯಕ್ತಿಯಾದ. ಪಂಡಿತ ಜವಾಹರಲಾಲ ನೆಹ್ರೂ ಅವರ 'ಆತ್ಮಕಥೆ'ಯ ಭಾರತೀಯ ಆವೃತ್ತಿ ಗಳನ್ನು (Indian Editions) ಪ್ರಕಟಿಸುವ ಹಕ್ಕೂ ಪಾಂಡುವಿಗೆ ಲಭಿಸಿ, ಅವನ ಕೀರ್ತಿ ವಿಸ್ತರಿಸತೊಡಗಿತು.

ನಾರಾಯಣಸ್ವಾಮಿಗೂ ಪಾಂಡುವಿಗೂ ಸ್ನೇಹ ಬೆಳೆದಿತ್ತು.

ಇಬ್ಬರೂ ಇಸ್ಪೇಟ್ ಭಕ್ತರಾಗಿದ್ದದು ಅವರ ಸ್ನೇಹಕ್ಕೆ ಬಲವಾದ ಬೆಸುಗೆ ಹಾಕಿತ್ತು.

" ನೋಡಿ ನಾರಾಯಣಸ್ವಾಮಿ. ನೀವು ಕಲ್ಲು, ಕಬ್ಬಿಣ, ಸಿಮೆಂಟ್ ವ್ಯಾಪಾರ ಮಾಡಲು ಹೋದರೆ ಅದು ನಿಮಗೆ ದಕ್ಕುವುದಿಲ್ಲ. ನಿಮ್ಮ ಕ್ಷೇತ್ರದಲ್ಲಿಯೇ ನೀವು ಸಂಪಾದಿಸಬೇಕು."

" ನಮ್ಮ ಕ್ಷೇತ್ರಕ್ಕೂ ಸಂಪಾದನೆಗೂ ತಾಳಮೇಳವಿಲ್ಲ ಪಾಂಡು."

" ಪ್ರತಿಯೊಂದು ಕ್ಷೇತ್ರದಲ್ಲಿಯೂ ಹಣವಿದ್ದೇ ಇದೆ. ಅದನ್ನು ಕಂಡುಹಿಡಿಯುವುದೇ ಜಾಣತನ. ಸೋಷಿಯಾಲಜಿ ಮತ್ತು ಸೈಕಾಲಜಿ ಎರಡೂ ನಮ್ಮ ವಿಶ್ವವಿದ್ಯಾನಿಲಯಗಳಿಗೆ ಹೊಸ ವಿಷಯ ಗಳು. ಈ ರಂಗಗಳಲ್ಲಿ ಇನ್ನೂ ಸ್ಪರ್ಧೆ ಆರಂಭವಾಗಿಲ್ಲ. ನೀವು ಹೆಸರು ಮಾಡಿಕೊಳ್ಳುವುದಕ್ಕೆ ಒಳ್ಳೆಯ ಅವಕಾಶವಿದೆ. ಒಮ್ಮೆ ಹೆಸರಾಯಿತೆಂದರೆ ಹಣ ತಾನೇತಾನಾಗಿ ಬಂದು ಬೀಳುತ್ತದೆ. ಪ್ರಚಾರವೇ ಇಂದಿನ ಜೀವನ ರಹಸ್ಯ."

" ನಿಮ್ಮ ಕಂಪೆನಿ ಪ್ರಕಟಿಸುವ ಹಾಗಿದ್ದರೆ ನಾನೊಂದು ಗ್ರಂಥ ಬರೆದುಕೊಡುತ್ತೇನೆ."

" ಒಮ್ಮೆಲೇ ಗ್ರಂಥ ಬರೆಯಲು ಹೊರಡುವುದು ಲಾಭದಾಯಕ ವಲ್ಲ ನಾರಾಯಣಸ್ವಾಮಿ. ಮೊದಲು ನಿಮ್ಮ ಹೆಸರು ಹತ್ತು ಕಡೆ ಪ್ರಚಾರವಾಗಬೇಕು. ನಿಮ್ಮ ಅಭಿಪ್ರಾಯಗಳನ್ನು ಸಮರ್ಥಿಸುವ, ವಿರೋಧಿಸುವ ತಂಡ ಬೆಳೆಯಬೇಕು. ಹತ್ತು ಜನಗಳ ಬಾಯಲ್ಲಿ ನೀವು ಓಡಿಯಾಡುವಂತಾದರೆ ಗ್ರಂಥ ಪ್ರಕಟನೆ ಕಷ್ಟವಾಗುವುದಿಲ್ಲ. ನಾನಾಗಲಿ, ಬೇರೆ ಯಾರೇ ಪ್ರಕಾಶಕರಾಗಲಿ ಹೊಸಬರ ಗ್ರಂಥ ಪ್ರಕಟ ಮಾಡುವುದಿಲ್ಲ."

" ಗ್ರಂಥ ಪ್ರಕಟವಾದ ಹೊರತೂ ಹೆಸರು ಪ್ರಕಾಶಕ್ಕೆ ಬರು ವುದಿಲ್ಲ; ಹೆಸರು ಪ್ರಕಾಶವಾದ ಹೊರತೂ ಗ್ರಂಥ ಪ್ರಕಟವಾಗುವುದಿಲ್ಲ. ಈ ವಿಷವ್ಯೂಹದಿಂದ ಪಾರಾಗುವುದು ಹೇಗೆ ಪಾಂಡು ? "

" ಅದಕ್ಕೊಂದು ಮಾರ್ಗವಿದೆ. ಮುಂಬಯಿಯ ಎಲ್ಲ ದೈನಂದಿನ

ಪತ್ರಿಕೆಗಳೂ 'ವಾರಾಂತ್ಯ ಸಂಚಿಕೆ'ಗಳನ್ನು ಪ್ರಕಟಿಸುತ್ತಿವೆ. ಇಲ್ಲಸ್ಟ್ರೇಟೆಡ್ ವೀಕ್ಲಿ – ಕೇಸರಿಹಿಂದ್ – ಬಾಂಬೆ ಕ್ರಾನಿಕಲ್ – ಭಾರತ ಜ್ಯೋತಿ ಪ್ರಸಿದ್ಧವಾಗಿವೆ. ನೀವು ಈ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯಲಾರಂಭಿಸಿ. ಹತ್ತಿಪ್ಪತ್ತು ಲೇಖನಗಳು ಪ್ರಕಟವಾದರೆ ಅವು ಗಳನ್ನೇ ಸಂಗ್ರಹಿಸಿ ಗ್ರಂಥವಾಗಿ ಪ್ರಕಟಿಸಬಹುದು. 'ಇಂಡಿಯನ್ ಜರ್ನಲ್ ಆಫ್ ಸೋಷಿಯಾಲಜಿ' ನೋಡುತ್ತಿರುವಿರಾ?"

"ನೋಡುತ್ತಿದ್ದೇನೆ."

"ಆ ಪತ್ರಿಕೆಯ ಪ್ರತಿಗಳು ಹೆಚ್ಚು ಖರ್ಚಾಗುವುದಿಲ್ಲ. ಆದರೆ ಪತ್ರಿಕೆ ತೂಕವಾದುದು. ದೇಶ ವಿದೇಶಗಳಲ್ಲಿ ಅದಕ್ಕೆ ಗೌರವವಿದೆ. ಆ ಪತ್ರಿಕೆಯಲ್ಲಿ ಲೇಖನ ಪ್ರಕಟವಾಗುವುದೇ ಒಂದು ದೊಡ್ಡ ಸಿದ್ಧಿ. ಜರ್ನಲ್‌ನಲ್ಲಿ ನಿಮ್ಮ ಕೆಲವು ಲೇಖನಗಳು ಬಂದು ಬಿಟ್ಟರೆ ನಿಮ್ಮ ಭವಿಷ್ಯ ಕಟ್ಟಿಟ್ಟ ಬುತ್ತಿ."

"ವಿಶಿಷ್ಟ ಶಾಸ್ತ್ರಜ್ಞರ (Specialists) ಲೇಖನಗಳನ್ನು ಮಾತ್ರ ಅವರು ಸ್ವೀಕರಿಸುತ್ತಾರೆ."

"ಹೌದು – ನೀವೂ ಯಾವುದಾದರೊಂದು ವಿಷಯದ ಮೇಲೆ ಪ್ರಭುತ್ವ ಸಂಪಾದಿಸಿಕೊಳ್ಳಬೇಕು. ಸಾಮಾನ್ಯ ವಿಷಯಗಳನ್ನು ಕುರಿತು ವಾರಪತ್ರಿಕೆಗಳಿಗೆ ಬರೆಯಬಹುದು. ಹೆಚ್ಚು ಅಭ್ಯಾಸ ಮಾಡಿದ ವಿಷಯಗಳ ಮೇಲೆ ಜರ್ನಲ್‌ಗೆ ಬರೆಯಬಹುದು."

"ಯಾವ ವಿಷಯ ಸ್ಪೆಷಲೈಸ್ ಮಾಡಿಕೊಳ್ಳುವುದೆನ್ನುವುದೇ ದೊಡ್ಡ ಸಮಸ್ಯೆಯಾಗಿದೆ."

"ನಿಮ್ಮ ಪ್ರೊಫೆಸರನ್ನು ಕೇಳಿ ನೋಡಿ."

"ಅವರಿಗೆ ಅನಾಗರಿಕ ಜನಾಂಗಗಳ (Primitive tribes) ಹುಚ್ಚು. ನನಗೂ ಅದನ್ನೇ ಅಂಟಿಸುತ್ತಾರೆ."

"ನನಗೊಂದು ವಿಷಯ ಹೊಳೆದಿದೆ. ಸೂಚಿಸೆಂದರೆ ಸೂಚಿಸುತ್ತೇನೆ."

"ದಯೆಯಿಟ್ಟು ಸೂಚಿಸಿ."

"ಕಾರ್ಮಿಕರ ಪ್ರಶ್ನೆ ಈಗ ಪ್ರಾಮುಖ್ಯತೆಗೆ ಬರುತ್ತಿದೆ. ಕಾರ್ಮಿಕರಿಗೆ ಸಂಬಂಧಿಸಿದ ಯಾವದಾದರೂ ವಿಷಯ ತೆಗೆದುಕೊಂಡು ನೀವು ಆಳವಾಗಿ ಅಭ್ಯಾಸ ಮಾಡಿ ಬರೆದರೆ ಸಮಯೋಚಿತವಾಗುತ್ತದೆ. —ಇದರಲ್ಲಿ ಒಂದು ರಹಸ್ಯವಿದೆ. ಅದನ್ನು ನೀವು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು."

"ಹೇಳಿ."

"ಜರ್ನಲ್ ಹಿಂದಿರುವ ಶಕ್ತಿ ಬಂಡವಾಳಗಾರರದೆಂಬುದನ್ನು ನೀವು ಸದಾ ಲಕ್ಷ್ಯದಲ್ಲಿಟ್ಟಿರಬೇಕು. ಶ್ರಮಜೀವಿ – ಬಂಡವಾಳ ಗಾರರ ಹೋರಾಟ. ಅವರ ವಿಚಾರ ವೈವಿಧ್ಯ ವರ್ಣಿಸುವಾಗ ನೀವು ಬಹಳ ಜಾಗರೂಕತೆಯಿಂದ ಬಂಡವಾಳಗಾರರ ಪಕ್ಷವನ್ನು ಎತ್ತಿ ಹಿಡಿಯಬೇಕು. ಶ್ರಮಜೀವಿಗಳ ಜೀವನ ಸುಗಮಗೊಳಿಸಲು ಬಂಡ ವಾಳಗಾರರು ಎಂದಿಗೂ ಸಹಾಯ ಮಾಡುವುದಿಲ್ಲ. ಆದರೆ ತಾವು ಶ್ರಮಜೀವಿಗಳ ಹಿತೈಷಿಗಳೆಂದು ತೋರಿಸಿಕೊಳ್ಳುವ ಚಾಪಲ್ಯ ಬಂಡ ವಾಳಗಾರರಿಗೆ ಬಲವಾಗಿದೆ. ಅವರ ಚಾಪಲ್ಯವನ್ನು ನೀವು ಚೆನ್ನಾಗಿ ಉಪಯೋಗಿಸಿಕೊಳ್ಳಬೇಕು."

"ಶ್ರಮಜೀವಿಗಳ ಹಿತವನ್ನು ನಾನು ಹೇಗೆ ವಿರೋಧಿಸಲಿ ಪಾಂಡು ?"

"ವಿರೋಧಿಸಬೇಕಾಗಿಲ್ಲ. ಅಲ್ಲೇ ನಿಮ್ಮ ಬರವಣಿಗೆಯ ಜಾಣ್ಮೆ ವ್ಯಕ್ತವಾಗುವುದು. ದುಡಿಮೆ – ಬಂಡವಾಳ ಎರಡೂ ರಾಷ್ಟ್ರಪುರುಷನ ಎರಡು ಕಣ್ಣುಗಳು. ದುಡಿಮೆಯಿಲ್ಲದ ಬಂಡವಾಳ ನಿಷ್ಪ್ರಯೋಜಕ – ಬಂಡವಾಳವಿಲ್ಲದ ದುಡಿಮೆ ನಿರರ್ಥಕ. ಎರಡೂ ಸೌಹಾರ್ದದಿಂದ ನಡೆದರೇ ರಾಷ್ಟ್ರ ಏಳ್ಗೆಯಾಗುವುದು. ಇಬ್ಬರೂ ಪರಸ್ಪರ ಕಷ್ಟ ಸುಖವನ್ನರಿತು ಸಹಾನುಭೂತಿಯಿಂದ ವರ್ತಿಸಬೇಕು ಎನ್ನುವ ಪ್ರಸ್ತಾನದಿಂದ ಬರೆದರೆ, ಯಾರಿಗೂ ಮನಃಕ್ಲೇಶ ವುಂಟಾಗುವುದಿಲ್ಲ."

"ನೀವು ಅಸಾಧ್ಯರು ಪಾಂಡು."

" ಹಾಗಿಲ್ಲದಿದ್ದರೆ ಈ ಗುಜರಾತಿ, ಮಾರ್ವಾಡಿಗಳ ಮಧ್ಯೆ ನಾನು ಬಾಳುವುದಕ್ಕಾಗುತ್ತಿತ್ತೇ? ಪ್ಲೇಟೋ ಹೇಳಿರುವ 'ಸುವರ್ಣ ಮಾಧ್ಯಮ' ಮಾರ್ಗವೇ ನನ್ನ ಯಶಸ್ಸಿನ ಅಡಿಗಲ್ಲು."

" ನನ್ನನ್ನೂ ಪ್ಲೇಟೋ ಶಿಷ್ಯವರ್ಗಕ್ಕೆ ಸೇರಿಸುವಿರೇನು ? "

" ನಿಮ್ಮ ಹಿತೈಷಿಯಾದ ನಾನು ಸುಮ್ಮನಿರಲು ಸಾಧ್ಯವೇ ? "

" ನನ್ನ ಮೊದಲನೆಯ ಗ್ರಂಥ ನಿಮ್ಮ ಕಂಪೆನಿಯಿಂದಲೇ ಹೊರ ಬೀಳಬೇಕು ? "

" ಆಗಲಿ. ಅದಿನ್ನೂ ದೂರದ ಮಾತು. ನಿಮ್ಮ ನೆಲೆಯನ್ನು ನೀವು ಮೊದಲು ಸ್ಥಾಪಿಸಿಕೊಂಡರೆ ಪ್ರಕಾಶಕರಿಗೆ ಕೊರತೆಯಿರುವುದಿಲ್ಲ."

" ವಿಲಾಯಿತಿಯಲ್ಲಿ ಗ್ರಂಥ ಪ್ರಕಟಿಸುವುದಕ್ಕೆ ಏನು ಮಾಡಬೇಕು."

" ಹಾಸಿಗೆಯಿದ್ದಷ್ಟು ಕಾಲು ಚಾಚಬೇಕು ನಾರಾಯಣಸ್ವಾಮಿ. ಮೊದಲು ಸ್ವದೇಶದಲ್ಲಿ ಖ್ಯಾತಿ – ತರುವಾಯ ವಿದೇಶ."

ಎಂದು ಪಾಂಡು ಬುದ್ಧಿ ಹೇಳಿದ.

## ೨೨

ಮದುವೆಯ ಸಿದ್ಧತೆ ಹುರುಪಿನಿಂದ ನಾಗಿತು.

ರಾಮು, ಶ್ರೀದೇವಿ ಒಂದು ತಿಂಗಳ ಮುಂಚೆಯೇ ಬಂದು ರುಕ್ಮಿಣಿಗೆ ನೆರವಾದರು. ಪಂಕಜಮ್ಮ, ನಳಿನಿ ಮನೆಯವರಂತೆ ದುಡಿಯುತ್ತಿದ್ದರು. ಸುನಂದಮ್ಮ ದಿನಕ್ಕೊಂದೆರಡು ಬಾರಿಯಾದರೂ ಬಂದು ವಿಚಾರಿಸಿಕೊಂಡು ಹೋಗುತ್ತಿದ್ದರು.

ಚಪ್ಪರಕ್ಕೆ ಬೇಕಾಗುವ ಸಾಮಾನುಗಳನ್ನೆಲ್ಲಾ ಷರೀಫ್ ಸಾಹೇಬರು ಒದಗಿಸಿದರು. ಗೌಡರು ಜಮಖಾನ, ಪಾತ್ರೆ ಪದಾರ್ಥಗಳನ್ನೊದಗಿಸಿದರು.

ಲಗ್ನಕ್ಕೆ ಹದಿನೈದು ದಿವಸ ಮುಂಚಿತವಾಗಿಯೇ ಪಟ್ಟಣದಿಂದ ಭೈರವೇಗೌಡ, ಲಕ್ಕಿ ಬಂದರು. ಮೈಸೂರಿನಿಂದ ಕಮಲ, ಅಂಬುಜವಲ್ಲಿಯೊಂದಿಗೆ ಬಂದಿಳಿದಳು. ಮನೆ ಕಿಕ್ಕಿರಿದು ತುಂಬಿಹೋಯಿತು.

ಲಗ್ನಪತ್ರಿಕೆ ಅಚ್ಚು ಹಾಕಿಸಿ ಎಲ್ಲರಿಗೂ ಕಳಿಸಲಾಗಿತ್ತು. ರುಕ್ಮಿಣಿ ಮರೆಯದೆ ಪುಟ್ಟಸೋಮನಹಳ್ಳಿ, ಹುಲಿಯೂರು, ತುಮಕೂರು, ಚಿಕ್ಕರಾಯನಪುರ, ಆನೆಕೆರೆ ಮೈಸೂರುಗಳಲ್ಲಿದ್ದ ಎಲ್ಲ ಬಂಧು ಬಾಂಧವರಿಗೆ, ಇಷ್ಟಮಿತ್ರರಿಗೆ, ಪರಿಚಯಸ್ಥರಿಗೆ, ಮನೆತನದ ಅಭಿಮಾನಿಗಳಿಗೆ ಲಗ್ನಪತ್ರಿಕೆ ಬರೆಸಿ ಹಾಕಿಸಿದಳು. ರಂಗೂನಿಗೆ ಹೊರಟುಹೋಗಿದ್ದ ಅಣ್ಣಂದಿರ ನೆನಪು ಬಂದಿತು. ಅವರ ವಿಳಾಸ

ತಿಳಿಯದಿದ್ದುದಕ್ಕೆ ರುಕ್ಮಿಣಿ ಪರಿತಾಪಪಟ್ಟುಕೊಂಡಳು.

ಲಗ್ನಕ್ಕೆ ಒಂದೇ ವಾರ ಉಳಿಯಿತು – ಏರ್ಪಾಟುಗಳೆಲ್ಲವೂ ಅಚ್ಚುಕಟ್ಟಾಗಿದ್ದವು. ಬೀಗರನ್ನು ಇಳಿಸುವುದಕ್ಕೆ ಯಡತೊರೆ ವೆಂಕಟಪ್ಪನವರ ಮನೆ ಸಮೀಪವಾಗಿದ್ದುದರಿಂದ ಅದನ್ನೇ ಗೊತ್ತು ಮಾಡಲಾಗಿತ್ತು. ನರಸಿಂಹಮೂರ್ತ್ಯಾಚಾರ್ಯರು ಪೌರೋಹಿತ್ಯಕ್ಕೆ ಸಿದ್ಧವಾಗಿದ್ದರು. ಹಾಲು, ಮೊಸರು, ತರಕಾರಿ, ಬಾಳೆಯೆಲೆ ಪಟ್ಟಣದಿಂದ ನಿತ್ಯ ಕಳಿಸಿಕೊಡುವ ಜವಾಬ್ದಾರಿ ಗೌಡರು ಹೊತ್ತು ಕೊಂಡಿದ್ದರು.

ಯಾರು ಬಂದರೂ ನಾರಾಯಣಸ್ವಾಮಿ ಬರಲಿಲ್ಲ. ರುಕ್ಮಿಣಿಯ ಮನಸ್ಸಿಗೆ ಒಂದೇ ಸಮನೆ ಕಳವಳವಾಯಿತು. ಮಾಧವರಾಯ ಬರೆದಿದ್ದ ಕಾಗದಗಳಿಗೂ ಅವನಿಂದ ಮಾರುತ್ತರ ಬಂದಿರಲಿಲ್ಲ. ರುಕ್ಮಿಣಿಯೇ ಎರಡು ಕಾಗದಗಳನ್ನು ಬರೆದಿದ್ದಳು – ಅವಕ್ಕೂ ಮಾರುತ್ತರ ಬಂದಿರಲಿಲ್ಲ.

ನಾರಾಯಣಸ್ವಾಮಿ ವರ್ತನೆ ಮನೆಯಲ್ಲಿ ಎಲ್ಲರಿಗೂ ಬೇಸರ ವನ್ನುಂಟುಮಾಡಿತು.

ನಾಳೆ ಬೀಗರು ಬರುವರಿದ್ದರು. ನಾರಾಯಣಸ್ವಾಮಿಯಿಂದ ತಾರು ಬಂತು. ಕಮಲನೇ ಅವನ್ನೊಡೆದು ತಾಯಿಗೆ ಓದಿ ಹೇಳುತ್ತಾ

"ನಾಳೆ ಬರುತ್ತಾನಂತಮ್ಮ – ಬೀಗರ ಜತೆಯಲ್ಲಿಯೇ ಬರ ಬಹುದು. ನಾಣಿಯೂ ಬೀಗನಾಗಿಬಿಟ್ಟಿದ್ದಾನೆ." ಎಂದಳು.

ಮಾರನೆಯ ದಿನ ಬೀಗರು ಬೆಂಗಳೂರಿನಿಂದ ಹನ್ನೆರಡು ಗಂಟೆ ರೈಲಿನಲ್ಲಿ ಹೊರಟು ಬರುವುದೆಂದು ನಿಶ್ಚಯವಾಗಿತ್ತು. ಅದೇ ದಿನ ಬೆಳಿಗ್ಗೆಯ ಗಾಡಿಯಲ್ಲಿ ನಾರಾಯಣಸ್ವಾಮಿ ಬಂದಿಳಿದ. ರುಕ್ಮಿಣಿ ಸ್ವಲ್ಪವೂ ಅಸಮಾಧಾನ ವ್ಯಕ್ತಮಾಡದೆ ಮಗನನ್ನು ಸ್ವಾಗತಿಸಿ

"ಮಧ್ಯಾಹ್ನದ ಗಾಡಿಗೆ ಬೀಗರು ಬರುತ್ತಾರಪ್ಪ. ನೀನೂ, ರಾಮೂ ಸ್ಟೇಷನ್ನಿಗೆ ಹೋಗಿ ಅವರನ್ನೆದುರುಗೊಂಡು ಬರಬೇಕು"

ಎಂದು ಹೇಳಿದಳು.

ಮಧ್ಯಾಹ್ನದ ಬಸ್ಸಿನಲ್ಲಿ ಇಂದಿರಾಬಾಯಿ ಅವಳ ಮಗ ಬಂದುದನ್ನು ನೋಡಿ ಗೋದಮ್ಮನವರಿಗೆ ರುಕ್ಮಿಣಿಗೆ ಅತ್ಯಾನಂದವಾಯಿತು.

"ಎರಡು ದಿವಸ ಮುಂಚೆ ಬರಬೇಕೆಂದಿದ್ದೆ ಕಣ್ರೀ – ಸಾಧ್ಯವಾಗಲಿಲ್ಲ."

"ಚಿಂತೆಯಿಲ್ಲ ಇಂದಿರಾಬಾಯಿ. ಇವನು ಯಾರು? ಶ್ರೀನಿವಾಸನಲ್ಲವೇ?"

"ಹೌದಮ್ಮ."

"ಎಷ್ಟು ಬೆಳೆದುಬಿಟ್ಟಿದ್ದಾನಮ್ಮ."

ಸಕಾಲಕ್ಕೆ ಬೀಗರೂ ಬಂದಿಳಿದರು. ಅಂದೇ ಸಂಜೆಗೆ ವರಪೂಜೆ, ರಾತ್ರಿ ಬಿಸಿಲಡಿಗೆ ಊಟ.

ಮಾರನೆಯ ದಿನ ರಾಮಣ್ಣಾಚಾರ್ಯರು, ವೆಂಕಮ್ಮ ಬಂದರು. ಪಟ್ಟಣದಿಂದ ಇಷ್ಟಮಿತ್ರರೂ ಬಂದರು. ಶೇಷಪ್ಪ ಸಂಸಾರ ಸಮೇತನಾಗಿ ಬಂದ. ಮೈಸೂರಿನಿಂದ ಚಿನ್ನಸ್ವಾಮಿ ಬಂದು, ಮಾಧವರಾಯನ ಸಹಾಯಕನಾಗಿ ನಿಂತ. ಎಲ್ಲರ ಸಮ್ಮುಖದಲ್ಲಿ ಹರಿವಾಯುಪ್ರೇರಣೆಯಿಂದ ಇಟ್ಟ ಲಗ್ನಕ್ಕೆ ಸರಿಯಾಗಿ ಪದ್ಮನಿಗೂ ಸರ್ವೋತ್ತಮನಿಗೂ ವಿಜೃಂಭಣೆಯಿಂದ ವಿವಾಹ ಮಂಗಳ ನೆರವೇರಿತು.

ಐದು ದಿನ ಲಗ್ನ ಸಾಂಗವಾಗಿ ನೆರವೇರಿತು. ಉರುಟಣೆ ಉಯ್ಯಾಲೆ, ಔಪಾಸನೆ, ಸಿಟ್ಟಿಹಿಟ್ಟು, ಹಾಡು ಹಸೆ, ಬೀಗರ ಹಾಡಿನ ಹೋರಾಟಗಳೆಲ್ಲವೂ ತಡೆಯೆಡೆಯಿಲ್ಲದೆ ನಾಗಿತು.

ಆರನೆಯ ದಿನ ಬೆಳಿಗ್ಗೆ ಗಂಡಿನ ಬೀಗರ ಔತಣವಾಯಿತು. ರಾತ್ರಿ ಮಾಧವರಾಯ ಊರಿನ ಎಲ್ಲ ಪ್ರಮುಖರನ್ನೂ ಆಹ್ವಾನಿಸಿ ಭರ್ಜರಿ ಔತಣಮಾಡಿಸಿದ.

ಮಾರನೆಯ ದಿನವೇ ಬೀಗರು ಪ್ರಯಾಣ ಸನ್ನದ್ಧರಾದರು. ಬೀಗರು, ಬೀಗಿತ್ತಿ, ಅವರ ಕಡೆಯವರೆಲ್ಲರಿಗೂ ಉಡುಗೊರೆಯನ್ನಿತ್ತುದೂ ಆಯಿತು. ರಾಮು, ಶ್ರೀದೇವಿಯೂ ಹೊರಡಲೇಬೇಕಾಗಿತ್ತು. ರಾಮಣ್ಣಾಚಾರ್ಯರು, ವೆಂಕಮ್ಮ, ಚಿನ್ನಸ್ವಾಮಿ

ಇಂದಿರಾಬಾಯಿ, ಅವಳ ಮಗ, ಕಮಲ, ಅಂಬುಜವಲ್ಲಿಯೂ ಹೊರಟರು. ಯಾರಿಗೂ ಕೊರೆಯಾಗದಂತೆ ಎಲ್ಲರಿಗೂ ಉಡುಗೊರೆಗಳನ್ನು ಕೊಟ್ಟದ್ದಾಯಿತು.

ವಿವಾಹಕ್ಕೆ ಬಂದಿದ್ದವರೆಲ್ಲರೂ ಪ್ರಯಾಣ ಬೆಳಸಿದ್ದರು. ಮನೆಯಲ್ಲಿದ್ದವರಷ್ಟೇ ಉಳಿದರು. ಲಕ್ಕಿ, ಭರಮೇಗೌಡ ಇಬ್ಬರನ್ನೂ ರುಕ್ಮಿಣಿಯೇ ಉಳಿಸಿಕೊಂಡಳು.

ನಾರಾಯಣಸ್ವಾಮಿಯೂ ಹೊರಡಲು ಆತುರ ತೋರಿದ. ರುಕ್ಮಿಣಿ ನೊಂದ ದನಿಯಲ್ಲಿ

"ನೀನೂ ಹೊರಟುಬಿಡಬೇಕೇನಪ್ಪಾ ?" ಎಂದಳು.

"ಹೋಗಬೇಕಾಗಿದೆಯಮ್ಮ. ಕೆಲವು ಇಂಗ್ಲಿಷ್ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದೇನೆ. ಅವುಗಳನ್ನು ಅರ್ಧದಲ್ಲಿಯೇ ಕೈಬಿಡುವುದು ಸರಿಯಲ್ಲ."

"ಎರಡು ದಿನವಿದ್ದು ಎಣ್ಣೆನೀರು ಹಾಕಿಕೊಂಡು ಹೋಗಪ್ಪ."

"ಎಣ್ಣೆನೀರು ಹಾಕಿಕೊಳ್ಳುವ ಅಭ್ಯಾಸವೇ ತಪ್ಪಿಹೋಗಿದೆ ಅಮ್ಮ. ಪುನಃ ಅಭ್ಯಾಸಮಾಡಿಕೊಂಡರೆ ನನಗೇ ತೊಂದರೆ."

"ಸುನಂದಮ್ಮನವರ ಮಗ ರಘುನಾಥನನ್ನು ನೀನು ನೋಡುವುದೇ ಇಲ್ಲವಂತೆ!"

"ಪುರಸತ್ತೆಲ್ಲಿದೆಯಮ್ಮ. ಅವರಿರುವುದು ಖಾರ್‌ನಲ್ಲಿ, ನಾನಿರುವುದು ಮಾತುಂಗಾದಲ್ಲಿ. ಮುಂಬಯಿ ದೊಡ್ಡದಂಥಾ ಊರು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಬೇಕಾದರೆ ಅರ್ಧದಿನ ಹೋಗುತ್ತದೆ."

"ತಪ್ಪದೆ ಕಾಗದವಾದರೂ ಬರೆಯುತ್ತಿರುತ್ತೀಯಾ ?"

"ಬರೆಯುತ್ತೇನೆ."

"ದೇವರ ದಯೆಯಿಂದ ಪದ್ಮನ ಸಮಸ್ಯೆ ಬಗೆಹರಿಯಿತು. ಒಳ್ಳೆಯ ಕಡೆ ಸೇರಿದಳು. ನೀನೂ ನೆಲೆಯಾಗಿ ನಿಂತುದನ್ನು ನೋಡಿಬಿಟ್ಟರೆ ಮನಸ್ಸಿಗೆ ತೃಪ್ತಿಯಾಗುತ್ತದೆ. ಕಮಲನ ಸ್ಥಿತಿಯೊಂದು

ಮನಸ್ಸಿಗೆ ತುಂಬ ಪೇಚಾಟವಾಗಿದೆ. ನಿನ್ನ ಕಾಲೇಜ್ ಶಿಕ್ಷಣ ಮುಗಿದ ಕೂಡಲೆ ಊರಿಗೇ ಬಂದುಬಿಡುತ್ತೀಯಲ್ಲವೆ ?"

ತಾಯಿಯ ಪ್ರಶ್ನೆ ನಾರಾಯಣಸ್ವಾಮಿಗೆ ಬಾಯಿಕಟ್ಟಿತು.

"ಏಕಮ್ಮ ಹಾಗೆ ಕೇಳುತ್ತೀ ?"

"ನಿಮ್ಮ ತಂದೆಗೆ ನಿನ್ನ ನೆರವು ಬೇಕು ನಾರಾಯಣಸ್ವಾಮಿ. ಅವರ ದೇಹಸ್ಥಿತಿ ತುಂಬ ನಾಜೂಕಾಗಿದೆ. ಅವರಿಗೆ ವಿಶ್ರಾಂತಿ ಬೇಕು."

"ಹಾಗೇ ಆಗಲಮ್ಮ. ನನ್ನ ಪರೀಕ್ಷೆ ಮುಗಿಯಲಿ...."

ನಾರಾಯಣಸ್ವಾಮಿಯೂ ಪ್ರಯಾಣ ಬೆಳಸಿದ.

ಲಕ್ಕಿ, ಭರಮೇಗೌಡ ಬಂದು ಎರಡು ವಾರಗಳಾಗಿದ್ದವು. ರುಕ್ಮಿಣಿಯೇ ಒಂದು ದಿನ

"ಊರಿನ ಧ್ಯಾನವೇ ಮರೆತುಹೋಯಿತೇನೇ ಲಕ್ಕಿ"

ಎಂದು ಕೇಳಿದಳು.

"ಯಾಕ್ರವ್ವಾ, ನನ್ನ ಊರಿಗೆ ಕಳಿಸಿ ಬುಡ್ತೀರಾ ?"

"ಅಲ್ವೇ – ಮಕ್ಕಳನ್ನು ಬಿಟ್ಟು ಬಂದಿದ್ದೀ – ಅವು ತೊಳಲಲ್ಲ ವೇನೇ ?"

"ಮುದುಕಿ ನೊಡ್ಕೊಳ್ತಾಳವ್ವಾ – ಪರವಾಯಿಲ್ಲ. ಗೌಡನ್ನ ಊರಿಗೆ ಕಳಿಸಿಬಿಡ್ರವ್ವ. ನಾನು ನಾಲಕ್ಕು ದಿನ ಇದ್ದು ಓಯ್ತೀನಿ. ನಿಮ್ಮನ್ನ ನೋಡಿದ್ರೆ ಕಳ್ಳು ಕಿತ್ತು ಬತ್ತೈತ್ರವ್ವಾ. ಇಂಗೆ ನಿಮ್ಮನ್ನ ಬಿಟ್ಟು ಊರಿಗೆ ಹೋದ್ರೆ ಜೀವ ಸುಮ್ಕೆ ಇರತ್ತೈತ."

"ನನಗೇನೂ ಆಗಿಲ್ಲ ಲಕ್ಕಿ. ಮದುವೆ ಓಡಾಟ – ಸ್ವಲ್ಪ ಆಯಾಸ ವಾಗಿದೆ. ನಾಲ್ಕು ದಿವಸ ಸುಧಾರಿಸಿಕೊಂಡರೆ ಎಲ್ಲಾ ಸರಿಹೋಗುತ್ತದೆ."

ಎಂದು ಸಮಾಧಾನಪಡಿಸಿ ಅವಳನ್ನು ಊರಿಗೆ ಕಳಿಸಿಕೊಡ ಬೇಕಾಯಿತು.

ಮದುವೆ ಮುಗಿದಿದ್ದರೂ ಮದುವೆ ಕೆಲಸ ಮುಗಿದಿರಲಿಲ್ಲ. ಗಂಡ, ಹೆಂಡತಿ ಸಾವಕಾಶ ಕುಳಿತು ಮಾತನಾಡುವುದಕ್ಕೆ ಎರಡು ವಾರ ಕಾಯ ಬೇಕಾಯಿತು.

ಒಂದು ದಿನ ಚಿಂತೆಮಾಡುತ್ತ ಕುಳಿತಿದ್ದ ಮಾಧವರಾಯನೆದುರು ರುಕ್ಮಿಣಿ ಬಂದು ಕುಳಿತು

"ಏನೋ ಬಹಳ ಯೋಚನೆಮಾಡುತ್ತಿರುವಿರಿ." ಎಂದಳು.

"ಏನೂ ಇಲ್ಲ."

"ಮದುವೆ ಲೆಕ್ಕ ಮಾಡಿದಿರಾ?"

"ಸ್ಥೂಲವಾದ ಲೆಕ್ಕ ಮಾಡಿದ್ದೇನೆ."

"ಒಟ್ಟು ಖರ್ಚು ಎಷ್ಟಾಯಿತು?"

"ಈ ಚಿಂತೆಯನ್ನೂ ನೀನು ಹಚ್ಚಿಕೊಳ್ಳಬೇಕೇನು?"

"ಅದೂ ನನ್ನ ಚಿಂತೆಯಲ್ಲವೇ?"

"ಆ ಚಿಂತೆ ನನಗೆ ಬಿಟ್ಟುಬಿಡು."

"ಹಾಗನ್ನಬೇಡಿ – ಹೇಳಿ."

"ಬೇಡ ರುಕ್ಕೂ – ಮದುವೆ ಮುಂಜಿಯೆಂದರೆ ನಾಲ್ಕುಕಾಸು ಹೆಚ್ಚು ಖರ್ಚಾಗುವುದು ಸ್ವಾಭಾವಿಕ."

"ನನಗೆ ಹೇಳುವುದಕ್ಕೆ ನೀವು ಅನುಮಾನ ಪಡಬೇಕೇ?"

"ಅನುಮಾನವಲ್ಲ. ನೀನು ಅದನ್ನೇ ಮನಸ್ಸಿಗೆಲ್ಲಿ ಹಚ್ಚಿಕೊಳ್ಳುವೆಯೋ ಎಂದು ಭಯ."

"ಇಲ್ಲ ಹೇಳಿ."

"ಈಗಿನ ಲೆಕ್ಕದಂತೆ ಆರುಸಾವಿರ ಖರ್ಚಾಗಿದೆ."

"ಉಡುಗೊರೆಗಳ ಖರ್ಚು ಸ್ವಲ್ಪ ಹಿಡಿತ ಮೀರಿತು."

"ಹೌದು – ಆದರೆ ಯಾರನ್ನು ಬಿಡುವುದು."

"ಭಗವಂತ ನಮ್ಮ ಸಂಸಾರದ ಪ್ರಮಾಣಕ್ಕನುಗುಣವಾಗಿ ಅನುಕೂಲ ಕೊಡಲಿಲ್ಲ."

"ಅದಕ್ಕಾಗಿ ಯೋಚನೆ ಮಾಡುವೆಯಾ?"

"ಛೆ! ಛೆ! ಎಂದಿಗೂ ಇಲ್ಲ. ನೀವು...."

"ನಾನು ಕಲ್ಲು ಇದ್ದ ಹಾಗಿದ್ದೇನೆ. ಸುಮ್ಮನಿರು ಚಿಂತೆ ಮಾಡಬೇಡ."

" ಸಾಲವೆಷ್ಟಾಗಿದೆ ? "

" ಬಹಳವೇನೂ ಇಲ್ಲ. ಮೂರೇ ಸಾವಿರ."

" ಗೌಡರ ಹತ್ತಿರಲೇ ? '

" ಹೌದು."

" ಗೌಡರ ಉಪಕಾರ ನಾವು ಎಂದಿಗೆ ತೀರಿಸುವುದು ?"

" ಯಾವುದೋ ಜನ್ಮದಲ್ಲಿ ಅವರು ನನ್ನ ಅಣ್ಣನೋ ತಮ್ಮನೋ ಆಗಿರಬೇಕು ರುಕ್ಕೂ."

" ಈ ಜನ್ಮದಲ್ಲಿಯೇ ಆಗಿದ್ದಾರೆ."

" ರುಕ್ಕೂ – ಅವರ ಮನಸ್ಸಿಗೆ ನಾವು ವ್ಯಥೆಯನ್ನುಂಟು ಮಾಡಿದ್ದೇವೆ. ಅದನ್ನು ಯಾವಾಗಲಾದರೂ ಸರಿಪಡಿಸಬೇಕು."

" ಏನದು ? "

" ನಾವು ಮೈಸೂರಿನಿಂದ ಬರುವಾಗ ಪಟ್ಟಣದಲ್ಲಿಳಿದು ಬರಬೇಕಾಗಿತ್ತು. ನಿನ್ನನ್ನೊಮ್ಮೆ ತಮ್ಮ ಮನೆಗೆ ಬರಮಾಡಿಕೊಳ್ಳಬೇಕೆಂದು ಗೌಡರು, ಗೌಡಿತಿ ತುಂಬ ಆಸೆ ಪಡುತ್ತಿದ್ದಾರೆ."

" ಅವಶ್ಯಕವಾಗಿ ಹೋಗಿ ಬರೋಣ. ಗೌಡರ ಮನಸ್ಸಿಗೆ ನೋವುಂಟು ಮಾಡಲು ನನಗೆ ಸ್ವಲ್ಪವೂ ಇಷ್ಟವಿಲ್ಲ."

ಮಾಧವರಾಯ ರುಕ್ಮಿಣಿಯ ಅಭಿಪ್ರಾಯವನ್ನು ಹಾರ್ದಿಕವಾಗಿ ಒಪ್ಪಿಕೊಂಡ.

## ೨೩

ಸಕ್ಕರೆ ಕಾರ್ಖಾನೆಯನ್ನು ತಾತ್ಕಾಲಿಕವಾಗಿ ಮುಚ್ಚದೆ (Shut Down) ನಿರ್ವಾಹವೇ ಇರಲಿಲ್ಲ.

ಮಂಡ್ಯದಲ್ಲಿ ಸರ್ವಾಧಿಕಾರ ನಡೆಸುತ್ತಾ ಪ್ರತಿವರ್ಷ ನೂರಾರು ಜನಗಳನ್ನು ಆಹುತಿ ತೆಗೆದುಕೊಳ್ಳುತ್ತಿದ್ದ ಮಲೇರಿಯಾ ಬೇನೆಯನ್ನು ಸರ್ಕಾರ ಯಶಸ್ವಿಯಾಗಿ ಎದುರಿಸಿತ್ತು. ಸುತ್ತಮುತ್ತಲಿನ ಜೌಗು ಪ್ರದೇಶಗಳನ್ನು ನಿರ್ಮೂಲ ಮಾಡಿ, ಊರಿನ ನೈರ್ಮಲ್ಯ ಹೆಚ್ಚಿಸಿ, ಡಿ. ಡಿ. ಟಿಯನ್ನು ಧಾರಾಳವಾಗಿ ಪ್ರಯೋಗಿಸಿ ಮಲೇರಿಯಾ ಹುಟ್ಟಡಗುವಂತೆ ಸರ್ಕಾರ ಅಪಾರ ಶ್ರಮವಹಿಸಿತ್ತು.

ಮಲೇರಿಯಾ ಹತೋಟಿಗೆ ಬಂದುದು ಸಕ್ಕರೆಯ ಕಂಪೆನಿಯ ಅಭ್ಯುದಯಕ್ಕೆ ಪರ್ಯಾಯವಾಗಿ ಕಾರಣವಾಯಿತು. ಕಾರ್ಖಾನೆಯ ಕೆಲಸ ಮಾಡಲು ಕೂಲಿಗಳು ನಿರ್ಭಯದಿಂದ ಮಂಡ್ಯದಲ್ಲಿ ನೆಲಸಲು ಕಾರಣವಾಯಿತು.

ಚಳಿಗಾಲ ಕಳೆಯುತ್ತಿತ್ತು. ಇದ್ದಕ್ಕಿದ್ದಂತೆ ಮಂಡ್ಯದಲ್ಲಿ ಇನ್‌ಫ್ಲುಯಂಜಾ ಬೇನೆ ಆರಂಭವಾಯಿತು. ಆಸ್ಪತ್ರೆಗೆ ಬಂದ ಹತ್ತಾರು ರೋಗಿಗಳಿಗೆ ಡಾಕ್ಟರು ಚಿಕಿತ್ಸೆ ಮಾಡಿ ಕಳಿಸಿದರು. ಆದರೆ ಅವರೂ ಬೇನೆ ಇಷ್ಟು ವ್ಯಾಪಿಸಿಕೊಂಡು ಉಲ್ಬಣಾವಸ್ಥೆಗೆ ಬರುವುದೆಂದು ನಿರೀಕ್ಷಿಸಲಿಲ್ಲ.

ಊರಿನ ಒಳಗೆ ಬೇನೆ ಬೆಳೆದ ಪ್ರಮಾಣಕ್ಕಿಂತ ಅಧಿಕವಾಗಿ ಸಕ್ಕರೆ ಕಂಪೆನಿಯ ವಿಸ್ತರಣದಲ್ಲಿ ಬೆಳೆಯಿತು. ಪ್ರತಿ ಮನೆಯಲ್ಲಿಯೂ ರೋಗಿಗಳು. ಕೇವಲ ಕೆಳದರ್ಜೆಯ ಕೂಲಿಗಳು ವಾಸವಾಗಿದ್ದ ಗುಡಿಸಲುಗಳಲ್ಲಿ ಎಲ್ಲರೂ ರೋಗಿಗಳೇ. ನಿರ್ಭಾಗ್ಯ ಕೂಲಿಗಳಿಗೆ ಗಂಜಿ ಕಾಸಿ ಹುಯ್ಯುವವರಿಲ್ಲ; ಔಷಧ ಕುಡಿಸುವವರಿಲ್ಲ.

ಎಲ್ಲೆಲ್ಲಿಯೂ ಹಾಹಾಕಾರ. ವಿಸ್ತರಣದಲ್ಲಿಯೇ ಪ್ರತಿದಿನ ಮೂರು ನಾಲ್ಕು ಜನ ಸಾಯುತ್ತಿದ್ದರು.

ಸಕ್ಕರೆ ಕಂಪೆನಿಯ ಕೆಲಸ ಒಳ್ಳೆಯ ಭರಾಟೆಯಲ್ಲಿ ಸಾಗಿತ್ತು. ಎರಡು ಷಿಫ್ಟು (Shift)ಗಳು ಕೆಲಸ ಮಾಡಿದರೂ ಕಬ್ಬಿನ ದಾಸ್ತಾನು ಮುಗಿಸಲಾಗಿರಲಿಲ್ಲ. ಪರ್ವತದ ಹಾಗೆ ಕಬ್ಬು ಬಂದು ಬಿದ್ದಿದ್ದು ದಲ್ಲದೆ, ಪ್ರತಿದಿನವೂ ನೂರಾರು ಗಾಡಿ ಕಬ್ಬು ಸಂಗ್ರಹವಾಗುತ್ತಿತ್ತು.

ಬೇನೆಯ ವ್ಯಾಪ್ತಿಯನ್ನೂ ಅತಿಕ್ರಮಿಸಿ ಜನತೆಯಲ್ಲಿ ಭಯ ಹುಟ್ಟಿತು. ಕಬ್ಬಿನ ಗಾಡಿ ಹೊಡೆದುಕೊಂಡು ಬರುತ್ತಿದ್ದ ರೈತರಿಗೆ ಇನ್‌ಫ್ಲುಯಂಜಾ ಬೇನೆಯುಂಟಿಕೊಂಡು, ಅವರಲ್ಲಿ ಕೆಲವರು ಪ್ರಾಣ ಒಪ್ಪಿಸಿದ್ದರು.

ಕಾರ್ಖಾನೆ ಮುಚ್ಚುವುದರಿಂದ ಕಂಪೆನಿಗೆ ಅಪಾರ ನಷ್ಟವಾಗು ತ್ತಿತ್ತು. ಆದರೆ ಮುಚ್ಚದೆ ಗತ್ಯಂತರವೇ ಇಲ್ಲ. ಕೆಲಸಕ್ಕೆ ಕೂಲಿಗಳೇ ಬರದಿದ್ದರೆ ಕಾರ್ಖಾನೆ ನಡೆಸುವುದು ಹೇಗೆ?

ಈ ದುರ್ಘಟನೆ ಮ್ಯಾನೇಜ್‌ಮೆಂಟಿನವರ ಜಂಘಾಬಲವನ್ನು ಉಡುಗಿಸಿದುದಲ್ಲದೆ, ಕಾರ್ಮಿಕರ ಸಂಘದವರನ್ನೂ ಅಧೀರರನ್ನಾಗಿ ಮಾಡಿತು.

ಏನು ಮಾಡುವುದು? ಈ ಕುತ್ತನ್ನು ಹೇಗೆ ಎದುರಿಸುವುದು? ಬೇನೆಗೆ ತುತ್ತಾದವರ ಮನೆಯವರ ಗತಿಯೇನು? ಎಂಬ ದುಃಖ ಕಾರ್ಮಿಕ ಸಂಘದವರಿಗೆ.

ಬೇನೆಗೆ ಹೆದರಿ ಕೂಲಿಗಾರರೆಲ್ಲಾ ದೇಶಾಂತರ ಹೊರಟುಹೋದರೆ ಕಾರ್ಖಾನೆಯ ಗತಿಯೇನು? ಎಂಬ ದುಃಖ ಮ್ಯಾನೇಜ್‌ಮೆಂಟ್

ನವರಿಗೆ.

ಕಾರ್ಖಾನೆಯ ಮ್ಯಾನೇಜರು ಪೂರ್ವಾಪರಗಳನ್ನಾಲೋಚಿಸಿ, ಕಂಪೆನಿಯ ಅಧ್ಯಕ್ಷರ ನೇತೃತ್ವದಲ್ಲಿ ಒಂದು ಅವಸರ ಸಭೆ ಕರೆದರು.

ಕಾರ್ಮಿಕ ಸಂಘದ ಅಧ್ಯಕ್ಷರು, ಕಾರ್ಯದರ್ಶಿಗಳಿಗೆ ಕರೆ ಬಂದಿತ್ತು.

ಈ ಸಭೆಗೆ ಹೋಗಬಾರದು ಎಂಬ ಮೊಂಡು ವಾದವನ್ನು ಜಯದೇವಪ್ಪ ಹೂಡಿದ. ಕೃಷ್ಣಪ್ಪ ಅವನ ಬೆಂಬಲಿಗನಾದ.

" ಮ್ಯಾನೇಜ್‌ಮೆಂಟಿನವರ ಅಸಾಮರ್ಥ್ಯ ಬಯಲಿಗೆಳೆಯು ವುದಕ್ಕೆ ಇದೇ ಉತ್ತಮ ಅವಕಾಶ. ರೋಗಸಂತ್ರಸ್ತರನ್ನು ಸಮಾಧಾನ ಗೊಳಿಸಿ, ಅವರು ಊರು ಬಿಟ್ಟು ಹೋಗದಂತೆ ಮಾಡಲು, ಮ್ಯಾನೇಜ್ ಮೆಂಟಿನವರು ನಮ್ಮ ಸಹಾಯ ಕೇಳುತ್ತಾರೆ. ಅದಕ್ಕೇ ಈ ಸಭೆ ಕರೆದಿರುವುದು. ನಾವು ಸಹಕಾರ ನಿರಾಕರಿಸಿದರೆ ಮ್ಯಾನೇಜ್‌ಮೆಂಟ್ ಕುಸಿದುಬೀಳುತ್ತದೆ."

" ಮುಂದೆ....? "

"ಕಂಪೆನಿಯನ್ನು ನಾವೇ ವಹಿಸಿಕೊಳ್ಳಬಹುದು."

" ಮ್ಯಾನೇಜ್‌ಮೆಂಟಿನವರು ಇನ್ನೂ ಕೆಲವು ದಿನ ಕಾರ್ಖಾನೆ ಮುಚ್ಚಿ, ಈಗಿರುವ ಕೂಲಿಗಾರರನ್ನೂ ಕೆಲಸದಿಂದ ನಿವೃತ್ತಿಮಾಡಿ ಆಂಧ್ರ, ತಮಿಳುನಾಡು, ಕೇರಳದಿಂದ ಕೂಲಿಗಳನ್ನು ಕರೆಸಿಕೊಂಡರೇನು ಮಾಡುವುದು ? "

" ಕ್ರಾಂತಿ – ಮುಷ್ಕರ ಹೂಡುವುದು."

" ಮುಷ್ಕರ ಕಾಲದಲ್ಲಿ ಕೂಲಿಗಾರರ ಗತಿಯೇನು ? ಅವರನ್ನು ಪೋಷಿಸುವ ಸಾಮರ್ಥ್ಯ ನಮ್ಮ ಸಂಘಕ್ಕಿದೆಯೇ ? "

" ಊರಿನಲ್ಲಿ ಭಿಕ್ಷವೆತ್ತೋಣ."

" ಮ್ಯಾನೇಜ್‌ಮೆಂಟಿನವರ ಸಹಾಯಹಸ್ತ ನಿರಾಕರಿಸಿದ ನಮ್ಮ ಬಗ್ಗೆ ಊರಿನವರು ಸಹಾನುಭೂತಿ ತೋರಿಸುತ್ತಾರೆಯೇ ? "

" ತೋರಿಸದಿದ್ದರೆ ಅದರ ಫಲ ಅನುಭವಿಸುತ್ತಾರೆ."

" ಏನು ಫಲ ? "

" ಬಟ್ಟೆ, ಆಹಾರಸಾಮಗ್ರಿಗಳ ಅಂಗಡಿಗಳನ್ನು ಲೂಟಿ ಮಾಡುವುದು."

"ಬೆಂಗಳೂರಿನಿಂದ ರಿಸರ್ವ್ ಪೋಲೀಸಿನವರೂ, ಮಿಲಿಟ್ರಿಯವರೂ ಬಂದು ಗೋಳೀಬಾರ್ ಮಾಡಲು ನಾವೇ ಅವಕಾಶ ಕಲ್ಪಿಸಿ ಕೊಟ್ಟಂತಾಗುತ್ತದೆ."

" ಅದೂ ಒಳ್ಳೆಯದೇ. ರಕ್ತ ಹರಿದಲ್ಲದೆ ಕ್ರಾಂತಿ ಸಿದ್ಧಿಸುವುದಿಲ್ಲ ಗೌಡರೇ."

" ಅದು ಯಾರ ರಕ್ತ. ನಿಮ್ಮ ರಕ್ತ – ನನ್ನ ರಕ್ತವಲ್ಲ ; ನಿರ ಪರಾಧಿಗಳಾದ ಬಡ ಕೂಲಿಗಾರರ ರಕ್ತ. ಇದು ಕ್ರಾಂತಿಯಲ್ಲ ಜಯದೇವಪ್ಪ – ಕಗ್ಗೊಲೆ."

" ನೀವಿನ್ನೂ ಗಾಂಧಿಯುಗದಲ್ಲಿಯೇ ಇದ್ದೀರಿ ಗೌಡರೆ. ಗಾಂಧಿ ಯುಗ ಮುಗಿದು ಲೆನಿನ್‌ಯುಗ ಆರಂಭವಾಗಿದೆಯೆಂಬ ಕಲ್ಪನೆಯೇ ನಿಮಗಿಲ್ಲ. ನಿಮ್ಮ ತಾಮಸರೀತಿ ಅನುಸರಿಸುತ್ತ ಹೋದರೆ ಇನ್ನು ಹತ್ತು ಶತಮಾನಗಳಾದರೂ ನಾವು ಕ್ರಾಂತಿಕಾರೀ ಜನಪದ ರಾಜ್ಯ (Revolutionary People's Government) ಸ್ಥಾಪಿಸಲಾಗು ವುದಿಲ್ಲ."

" ರಕ್ತಪಾತ, ಸುಲಿಗೆ, ದರೋಡೆಗಳಿಂದ ಯಾವ ರಾಜ್ಯ ಸ್ಥಾಪಿ ಸುವುದಕ್ಕೂ ನಾನು ಒಪ್ಪಲಾರೆ."

ಜಯದೇವಪ್ಪನಿಗೂ ಕಾವೇರಿತ್ತು. ಮುಖ ಕೆಂಪಗೆ ಮಾಡಿ ಕೊಂಡು

" ಕಾರ್ಮಿಕ ಸಂಘದ ಅಧ್ಯಕ್ಷರಾಗಿರಲು ನೀವು ಅನರ್ಹರು ಗೌಡರೇ" ಎಂದ.

ಗೌಡರ ಶಾಂತಪ್ರವೃತ್ತಿಗೆ ಬಲವಾದ ಥಕ್ಕೆ ತಗುಲಿತು. ಅವರು ಸ್ಥೈರ್ಯ ಕಳೆದುಕೊಳ್ಳದೆ

" ಅನರ್ಹನನ್ನು ಕಾರ್ಮಿಕರು ಎಂದಿಗೂ ತಮ್ಮ ಸಂಘದ

ಅಧ್ಯಕ್ಷನನ್ನಾಗಿಟ್ಟುಕೊಳ್ಳಬಾರದು. ನಾನೀಗಲೇ ರಾಜೀನಾಮೆ ಕೊಟ್ಟು ಬಿಡುತ್ತೇನೆ" ಎಂದರು.

ಮಾತು ಬಹಳ ದೂರ ಬೆಳೆಯಿತೆಂದು ಕೃಷ್ಣಪ್ಪ ಪರಿಗ್ರಹಿಸಿದ. ಗೌಡರು ರಾಜೀನಾಮೆ ಕೊಟ್ಟರೆ ಸಂಘ ಹೇಳ ಹೆಸರಿಲ್ಲವಾಗುತ್ತದೆ ಎಂಬುದೂ, ಪುನಃ ಸಂಘ ಸ್ಥಾಪಿಸುವುದು ದುಸ್ಸಾಧ್ಯವಾಗುತ್ತದೆ ಎಂಬುದೂ ಕೃಷ್ಣಪ್ಪನಿಗೆ ಚೆನ್ನಾಗಿ ಗೊತ್ತಿತ್ತು.

"ನೀವೂ ದುಡುಕುತ್ತಿದ್ದೀರಿ ಜಯದೇವಪ್ಪ. ಗೌಡರಿರುವುದ ರಿಂದಲೇ ಈ ಸಂಘ ಬದುಕಿರುವುದು. ಅವರನ್ನು ನೀವು ಅನರ್ಹರು ಎನ್ನಬಾರದಾಗಿತ್ತು."

"ನಾನು ಆಡಿದ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಲು ಸಿದ್ಧನಾಗಿದ್ದೇನೆ. ಆದರೆ ಮ್ಯಾನೇಜ್‌ಮೆಂಟಿನವರು ಕರೆದಿರುವ ಸಭೆಗೆ ನಮ್ಮ ಪ್ರತಿನಿಧಿಗಳು ಹೋಗಕೂಡದು."

"ಈಗ ನಾವು ಗಮನಿಸಬೇಕಾದುದು ನಮ್ಮ ಶ್ರೀಮದ್ಗಾಂಭೀರ್ಯ ವನ್ನಲ್ಲ – ಕೂಲಿಕಾರರ ಹಿತವನ್ನು. ಈಗಿನ ಪರಿಸ್ಥಿತಿಯಲ್ಲಿ ನಾವು ಸಹಾಯಶೂನ್ಯರಾಗಿದ್ದೇವೆ. ಮ್ಯಾನೇಜ್‌ಮೆಂಟನಲ್ಲಿ ಹಣವಿದೆ, ಡಾಕ್ಟರುಗಳಿದ್ದಾರೆ, ಸರ್ಕಾರದ ಸಹಾಯವಿದೆ. ನಾವು ಅದನ್ನು ಉಪಯೋಗಿಸಿಕೊಳ್ಳಬೇಕಾದುದು ನಮ್ಮ ಧರ್ಮ. ಮ್ಯಾನೇಜ್‌ಮೆಂಟಿ ನವರು ಕರೆದ ಸಭೆಗೆ ನಾವು ಹೋಗಬೇಕು – ಮತ್ತು ಅವರು ನಮ್ಮ ಸಹಕಾರ ಅಪೇಕ್ಷಿಸಿದರೆ ಅದನ್ನು ನಿರ್ವಂಚನೆಯಾಗಿ ನೀಡಬೇಕು. ಈ ಅಭಿಪ್ರಾಯ ನೀವೆಲ್ಲಾ ಒಪ್ಪುವ ಹಾಗಿದ್ದರೇ ನಾನು ಅಧ್ಯಕ್ಷಸ್ಥಾನ ದಲ್ಲಿರಲು ಸಾಧ್ಯ. ನಿಮಗೆ ಒಪ್ಪಿಗೆಯಿಲ್ಲದಿದ್ದರೆ ದಯೆಯಿಟ್ಟು ನನ್ನ ರಾಜೀನಾಮೆ ಸ್ವೀಕರಿಸಿ."

ಕೃಷ್ಣಪ್ಪನಿಗೆ ಉಭಯಸಂಕಟಕ್ಕಿಟ್ಟುಕೊಂಡಿತು. ತತ್ತ್ವನಿಷ್ಠರಾದ ಗೌಡರು ತಮ್ಮ ನಿಲುವನ್ನು ಬದಲಾಯಿಸುವಂತಿರಲಿಲ್ಲ; ಅಗ್ನಿಭಕ್ಷಕ ನಾದ ಜಯದೇವಪ್ಪ ಕ್ರಾಂತಿಮಂತ್ರ ಪಠಿಸುತ್ತಿದ್ದ. ಈ ಇಜ್ಜೋಡು ಅಶ್ವಗಳನ್ನು ರಥಕ್ಕೆ ಮತ್ತೆ ಹೂಡಿ, ಹೇಗೆ ಸಾರಥ್ಯ ನಡೆಸುವುದೆಂದು

ಯೋಚಿಸುತ್ತಾ

"ನಾವು ನಾವು ಕಾದಾಡುವುದು ನ್ಯಾಯವಲ್ಲ. ನಮ್ಮಲ್ಲಿ ಒಡಕು ಹುಟ್ಟಿದರೆ ಮ್ಯಾನೇಜ್‌ಮೆಂಟಿನವರು ಸಸೇಮಿರರಾಗುತ್ತಾರೆ. ನಾನೊಂದು ಪರಿಹಾರ ಸೂಚಿಸುತ್ತೇನೆ. ಅದಕ್ಕೆ ನೀವಿಬ್ಬರೂ ದೊಡ್ಡ ಮನಸ್ಸು ಮಾಡಿ ಒಪ್ಪಿಕೊಳ್ಳಬೇಕು."

"ಹೇಳಿ."

"ನಾನೂ ಗೌಡರೂ ಮ್ಯಾನೇಜ್‌ಮೆಂಟಿನವರು ಕರೆದ ಸಭೆಗೆ ಹೋಗಿ ಅಲ್ಲಿ ನಡೆಯುವುದನ್ನು ತಿಳಿದುಕೊಂಡು ಬರುತ್ತೇವೆ. ಮ್ಯಾನೇಜ್‌ಮೆಂಟಿಗೆ ಸಹಕಾರ ಕೊಡುವ ವಿಷಯ ನಾವು ಚರ್ಚಿಸಿ ನಿರ್ಧರಿಸೋಣ."

"ಆಗಬಹುದು."

ಎಂದು ಜಯದೇವಪ್ಪ ಉತ್ಸಾಹದಿಂದ ನುಡಿದ. ಗೌಡರು ಅರೆಮನಸ್ಸಿನಿಂದ ಕೃಷ್ಣಪ್ಪನ ರಾಜಿಗೆ ಒಪ್ಪಿಗೆಯನ್ನಿತ್ತರು.

ಸಕ್ಕರೆ ಕಂಪೆನಿಯ ಮ್ಯಾನೇಜರು ಕರೆದಿದ್ದ ಸಭೆ ಕಂಪೆನಿಯ ಅಧ್ಯಕ್ಷರ ಕಛೇರಿಯಲ್ಲಿ ಸೇರಿತು.

ಸಕ್ಕರೆ ಕಂಪೆನಿಯ ಪರವಾಗಿ ಅಧ್ಯಕ್ಷರು, ಮ್ಯಾನೇಜರು, ಕಾರ್ಮಿಕ ಸಂಘದ ಪರವಾಗಿ ಅದರ ಅಧ್ಯಕ್ಷರು, ಕಾರ್ಯದರ್ಶಿಗಳು, ನಗರ ಸಭೆಯ ಅಧ್ಯಕ್ಷರು, ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರ್ ಸೇರಿದ್ದರು.

ಕಂಪೆನಿಯ ಅಧ್ಯಕ್ಷರು ಪರಿಸ್ಥಿತಿಯನ್ನು ವರ್ಣಿಸಿ ಕೂಡಲೇ ಪರಿಹಾರೋಪಾಯ ಹುಡುಕದಿದ್ದರೆ ಅನಾಹುತವಾಗುತ್ತದೆ ಎಂದರು. ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರು

"ಬೇನೆಯ ವ್ಯಾಪ್ತಿ ನಮ್ಮ ಹತೋಟಿ ಮೀರಿದೆ. ಆಸ್ಪತ್ರೆಯ ಎಲ್ಲ ನೌಕರರೂ ಹಗಲಿರುಳೂ ದುಡಿಯುತ್ತಿದ್ದಾರೆ. ಆದರೆ ನಾವೇನೂ ಮಾಡಲು ಸಾಧ್ಯವಾಗಿಲ್ಲ. ಈಗಾಗಲೇ ಬೇನೆಗೆ ತುತ್ತಾಗಿರುವವರ ಚಿಕಿತ್ಸೆಯಾಗಬೇಕಲ್ಲದೆ, ಬೇನೆ ಬೆಳೆಯದಂತೆ ಮುಂಜಾಗ್ರತೆ ವಹಿಸಬೇಕಾದುದೂ ಅವಶ್ಯಕ" ಎಂದರು.

" ಈ ಪರಿಸ್ಥಿತಿಯನ್ನೆದುರಿಸಲು ನಮ್ಮಿಂದ ಸಾಧ್ಯವಿಲ್ಲವೆಂದು ನೀವು ಸ್ಪಷ್ಟವಾಗಿ ಹೇಳುತ್ತಿರುವಿರಲ್ಲವೇ ಡಾಕ್ಟರೇ? "

" ಹೌದು. "

" ಪರಿಹಾರಮಾರ್ಗ ಇನ್ನು ಯಾವುದಿದೆ ನೀವೇ ಹೇಳಿ."

" ಮೊದಲು ಕ್ಯಾಂಪುಗಳನ್ನು ವ್ಯವಸ್ಥೆಮಾಡಿ, ರೋಗಗ್ರಸ್ತರನ್ನು ನಿರೋಗಿಗಳಿಂದ ಬೇರ್ಪಡಿಸಬೇಕು"

" ಕ್ಯಾಂಪುಗಳಿಗೆ ತುಂಬ ಜನಬಲಬೇಕು – ಸ್ವಯಂಸೇವಕರು ಬೇಕು. ಕಾರ್ಮಿಕ ಸಂಘದವರು ಈ ಜವಾಬ್ದಾರಿ ಹೊರುವುದಾದರೆ ಸಾಧ್ಯ. "

" ಅದನ್ನು ಸಾವಕಾಶವಾಗಿ ಯೋಚನೆಮಾಡೋಣ. ಸ್ವಯಂ ಸೇವಕರು ಉಪಚಾರಮಾಡಬಲ್ಲರೇ ವಿನಾ ಚಿಕಿತ್ಸೆಮಾಡಲಾರರು. ಚಿಕಿತ್ಸಾಕ್ರಮವೇನು ? "

ಎಂದು ಕೃಷ್ಣಪ್ಪ ಕೇಳಿದ.

" ಆಲೋಪತಿಯ ಮೂಲಕ ಈ ಬೇನೆಯನ್ನು ಕೂಡಲೆ ಹತೋಟಿಗೆ ತರಲು ಸಾಧ್ಯವಾಗುವುದಿಲ್ಲ. "

" ನೀವು ಹತೋಟಿಗೆ ತರುವವೇಳೆಗೆ ನೂರಾರು ಜನ ನಾವಿ ಗೀಡಾಗಿರುತ್ತಾರೆ. "

" ಹೌದು. "

" ಹಾಗಾದರೆ ! "

" ಕ್ಯಾಂಪುಗಳನ್ನು ನಡೆಸುವುದಕ್ಕೆ ಬೇಕಾಗುವ ಕಟ್ಟಡಗಳು, ವ್ಯಾನ್‌ಗಳು, ರೋಗಿಗಳಿಗೆ ತಗಲುವ ಖರ್ಚು ಸಮಸ್ತವನ್ನೂ ನಾನು ವಹಿಸಿಕೊಳ್ಳಲು ಸಿದ್ಧವಾಗಿದ್ದೇನೆ "

ಎಂದು ಅಧ್ಯಕ್ಷರು ಅಪ್ಪಣೆ ಕೊಟ್ಟರು.

"ಮ್ಯಾನೇಜ್‌ಮೆಂಟಿನವರ ಜತೆ ಕಾರ್ಮಿಕ ಸಂಘದವರು ಸಹ ಕರಿಸಿ ಕೆಲಸ ಮಾಡಿದರೇ ಈ ಉಪದ್ರವವನ್ನು ಹತೋಟಿಗೆ ತರಲು ಸಾಧ್ಯ. ನಗರ ಸಭೆಯ ಸಕಲ ಸೌಲಭ್ಯವನ್ನೂ ನಿಮ್ಮ ವಶಪಡಿಸಲು

ನಾನು ಸಿದ್ಧನಾಗಿದ್ದೇನೆ."

" ಚಿಕಿತ್ಸೆ ನಡೆಸುವುದು ಹೇಗೆ ಎನ್ನುವ ವಿಷಯವೇ ಸಿರ್ಧಾರ ವಾಗಿಲ್ಲ. ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರು ಆ ಜವಾಬ್ದಾರಿ ಹೊರಲು ಏಕೋ ಹಿಂಜರಿಯುತ್ತಿದ್ದಾರೆ."

ಎಂದು ಗೌಡರು ಸೂಚಿಸಿದರು.

" ನಾನು ಹಿಂಜರಿಯುತ್ತಿಲ್ಲ ಗೌಡರೇ. ದಿನಕ್ಕೆ ಇಪ್ಪತ್ತು ನಾಲ್ಕು ಗಂಟೆ ದುಡಿಯುವುದಕ್ಕೆ ನಾನೂ, ನನ್ನ ನೌಕರರೂ ಸಿದ್ಧ ರಾಗಿದ್ದೇವೆ. ನಮ್ಮ ಚಿಕಿತ್ಸೆಯಿಂದ ಎಷ್ಟು ಪ್ರಯೋಜನವಾದೀತು ಎನ್ನುವುದನ್ನು ನಾನು ಯೋಚಿಸುತ್ತಿದ್ದೇನೆ."

" ನೀವೇ ಹೀಗೆ ಹೇಳಿಬಿಟ್ಟರೆ ನಮ್ಮ ಗತಿ? "

ಎಂದು ಭಯಗ್ರಸ್ತರಾದ ನಗರ ಸಭಾಧ್ಯಕ್ಷರು ಹನುಮಯ್ಯ ಕೇಳಿದರು.

" ಸ್ವಲ್ಪ ಕ್ರಮಬಾಹಿರವಾದ ಮಾರ್ಗವೊಂದಿದೆ – ಅಪ್ಪಣೆ ಯಾದರೆ ಅರಿಕೆ ಮಾಡಿಕೊಳ್ಳುತ್ತೇನೆ."

" ಕ್ರಮವೋ – ಅಕ್ರಮವೋ. ಮಂಡ್ಯದಿಂದ ಇನ್‌ಫ್ಲುಯಂಜಾ ಹೋಗಬೇಕು. ಅದಕ್ಕನುಕೂಲಿಸುವ ಯಾವ ವಿಧಾನ ನೀವು ಸೂಚಿ ಸಿದರೂ ನಾವು ಒಪ್ಪಲು ಸಿದ್ಧ "

ಎಂದು ಅಧ್ಯಕ್ಷರು ಕಳಕಳಿಯಿಂದ ನುಡಿದರು.

" ನಮ್ಮ ಬಾರ್ ಅಸೋಸಿಯೇಷನ್ ಅಧ್ಯಕ್ಷರು ಮಾಧವ ರಾಯರ ಪರಿಚಯ ತಮಗಿದೆ. ಅವರ ಕುಟುಂಬ ರುಕ್ಮಿಣಮ್ಮನವರು ದೊಡ್ಡ ಮನಸ್ಸು ಮಾಡಿದರೆ ನಮ್ಮ ಸಂಕಟ ಪರಿಹಾರವಾಗುತ್ತದೆ."

ಡಾಕ್ಟರ ಸಲಹೆ ಕೇಳಿದ ಅಧ್ಯಕ್ಷರೇ ನಗುತ್ತಾ

"ತಮ್ಮಂಥ ಪ್ರಸಿದ್ಧ ಡಾಕ್ಟರುಗಳ ಕೈಯಲ್ಲಿ ಸಾಧ್ಯವಾಗದಿರುವುದು ಒಬ್ಬ ಹೆಣ್ಣು ಮಗಳಿಂದ ಸಾಧ್ಯವಾಗುತ್ತದೆಯೇ ಡಾಕ್ಟರೇ? ನಾನು ಅವರನ್ನು ಹಳಿಯುತ್ತಿದ್ದೇನೆಂದು ಭಾವಿಸಬೇಡಿ. ಮಾಧವರಾಯರು ನಮಗೆ ಬೇಕಾದವರು – ನಮ್ಮ ಕಂಪೆನಿಯ ಲೀಗಲ್ ಅಡ್ವೈಸರ್.

ಆದರೆ ಇಷ್ಟು ದೊಡ್ಡ ಜವಾಬ್ದಾರಿಯನ್ನು ಒಬ್ಬ ಹೆಣ್ಣು ಮಗಳಿಗೆ ಒಪ್ಪಿಸಲು ನಾನು ಸಮ್ಮತಿಸಲಾರೆ. ಅವರಿಗೆ ಅಲ್ಪಸ್ವಲ್ಪ ವೈದ್ಯ ಬರುತ್ತದೆಂದು ಕೇಳಿದ್ದೇನೆ. ಕೆಲವು ರೋಗಿಗಳನ್ನು ಅವರು ಗುಣ ಪಡಿಸಿದ್ದಾರೆಂದೂ ಕೇಳಿದ್ದೇನೆ. ಆದರೆ ಸಹಸ್ರಾರು ಜನಗಳ ಪ್ರಾಣ ವನ್ನು ಅವರ ಕೈಯಲ್ಲಿಡುವುದು ಸಾಹಸವಾಗುತ್ತದೆ."

" ಅಧ್ಯಕ್ಷರ ಮಾತಿಗೆ ನನ್ನ ಸಂಪೂರ್ಣ ಒಪ್ಪಿಗೆಯಿದೆ. "

ಎಂದು ಕೃಷ್ಣಪ್ಪ ಸೂಚಿಸಿದ.

ಕರಿಯಪ್ಪಗೌಡರು ಮೆಲ್ಲನೆ ಡಾಕ್ಟರಿಗೆ

" ಈಗ ತಾವೇನೂ ಮಾಡುವುದಕ್ಕಾಗುವುದಿಲ್ಲವೇ ಸ್ವಾಮಿ. ? "

" ಏನೂ ಸಾಧ್ಯವಿಲ್ಲ ಗೌಡರೇ. "

" ನಿಮಗೇ ಸಾಧ್ಯವಾಗದುದನ್ನು ಅಮ್ಮಾವರು ನಿರ್ವಹಿಸ ಬಲ್ಲರೆಂಬ ಧೈರ್ಯ ನಿಮಗಿದೆಯೇ ? "

" ನನಗಿದೆ. "

ಗೌಡರು ಅಧ್ಯಕ್ಷರ ಕಡೆ ತಿರುಗಿ

" ಡಾಕ್ಟರ್ ಸಾಹೇಬರು ಹೇಳಿದಂತೆ ಮಾಡುವುದೇ ಸರಿಯೆಂದು ನನಗೆ ತೋರುತ್ತದೆ. ಅಮ್ಮಾವರು ವೈದ್ಯದಲ್ಲಿ ತುಂಬ ದಕ್ಷರೆಂದು ನಾನು ಕೇಳಿದ್ದೇನೆ. ಅದಕ್ಕಿಂತ ಹೆಚ್ಚಾಗಿ ಅವರು ಭಗವದ್ಭಕ್ತರು, ಪರಮ ಸಾತ್ವಿಕರು. ಭಗವಂತನ ಸಹಾಯದಿಂದಲೇ ನಾವು ಈ ಕುತ್ತನ್ನು ಪರಿಹರಿಸಿಕೊಳ್ಳಬೇಕಾಗಿದೆ. ಅದಕ್ಕೆ ಭಗವದ್ಭಕ್ತರಾದ ಅಮ್ಮಾವರ ಸಹಾಯ ಕೋರುವುದೇ ಉತ್ತಮ – ಹೇಗಾದರೂ ಈ ಬೇನೆ ಪರಿಹಾರವಾಗಿ ಜನ ಬದುಕಿದರೆ ಸಾಕಾಗಿದೆ. ಕಾರ್ಮಿಕ ಸಂಘ ಈ ವಿಷಯದಲ್ಲಿ ಮ್ಯಾನೇಜ್‌ಮೆಂಟಿಗೆ ಪೂರ್ಣ ಸಹಕಾರ ಕೊಡುವುದಕ್ಕೆ ಸಿದ್ಧವಾಗಿದೆ " ಎಂದರು.

ಅಧ್ಯಕ್ಷರು ಸಂತೋಷಭರಿತರಾಗಿ ಎದ್ದುನಿಂತು ಕರಿಯಪ್ಪಗೌಡರ ಕೈಕುಲಕಿ

" ಥ್ಯಾಂಕ್ ಯು ಮಿ. ಪ್ರೆಸಿಡೆಂಟ್ (Thank you

Mr. President)" ಎಂದರು.

ಕೃಷ್ಣಪ್ಪನಿಗೆ ಅಡಿಕೆಕತ್ತರಿಗೆ ಸಿಕ್ಕುಬಿದ್ದಂತಾಗಿತ್ತು. ಜಯದೇವಪ್ಪನ ಜತೆಮಾಡಿಕೊಂಡಿದ್ದ ಕರಾರನ್ನು ಗೌಡರು ಮುರಿದಿದ್ದುದಲ್ಲದೆ ಕಾರ್ಮಿಕ ಸಂಘದ ಪರಮವಿರೋಧಿಗಳಿಗೆ ಸಹಕಾರ ನೀಡಲು ವಾಗ್ದಾನ ಮಾಡಿಬಿಟ್ಟಿದ್ದರು.

"ಸರಿ. ಮುಂದಿನ ಕ್ರಮ ಹೇಗೆ ಡಾಕ್ಟರೇ?"

ಎಂದು ಅಧ್ಯಕ್ಷರು ಕೇಳಿದರು.

"ನಾವು ಒಂದು ನಿಯೋಗ ತೆಗೆದುಕೊಂಡು ರುಕ್ಮಿಣಮ್ಮನವರನ್ನು ಕಂಡು ಅವರನ್ನು ಒಪ್ಪಿಸಬೇಕು."

"ನಿಯೋಗದಲ್ಲಿ ಯಾರಿರಬೇಕು?"

"ತಾವು, ಕರಿಯಪ್ಪಗೌಡರು, ನಗರಸಭಾಧ್ಯಕ್ಷರು, ನಾನು ಇದ್ದರೆ ಸಾಕು."

"ನಿಯೋಗ ಯಾವಾಗಹೋಗುವುದು?"

ಎಂದು ಕರಿಯಪ್ಪಗೌಡರು ಕೇಳಿದರು.

"ಈಗಲೇ ಹೋಗಿ ಬರೋಣ. ಕಾಲಹರಣಕ್ಕೆ ಅವಕಾಶವೆಲ್ಲಿದೆ. ನನ್ನ ಕಾರಿದೆ – ಡಾಕ್ಟರ ಕಾರಿದೆ."

ಕರಿಯಪ್ಪಗೌಡರು ಕೃಷ್ಣಪ್ಪನ ಕಡೆ ತಿರುಗಿ

"ಗೋಷ್ಠಿಯೊಂದಿಗೆ ಹೋಗಿ ನಾನು ಸಂಘಕ್ಕೆ ಬರುತ್ತೇನೆ. ನೀವು ಅಲ್ಲಿಯೇ ಇರಿ ಕೃಷ್ಣಪ್ಪನವರೇ"

ಎಂದು ಹೇಳಿದರು. ಕೃಷ್ಣಪ್ಪ ಮೆಲ್ಲನೆ

"ಜಯದೇವಪ್ಪನವರಿಗೆ ಏನು ಹೇಳುವುದು ಗೌಡರೇ?" ಎಂದ.

"ನಾವೀಗ ಗಮನಿಸಬೇಕಾದುದು ಜಯದೇವಪ್ಪನವರ ಪ್ರತಿಷ್ಠೆಯನ್ನಲ್ಲ – ನಾವಿರಾರು ಜನರ ಪ್ರಾಣವನ್ನು. ಇದನ್ನೇ ಅವರಿಗೆ ಹೇಳಿಬಿಡಿ"

ಎಂದು ಗೌಡರು ಖಂಡಿತವಾಗಿ ನುಡಿದರು.

ಮನೆಯ ಹೊರಬಾಗಿಲಿನಲ್ಲಿ ಕುಳಿತು ಕಸೂತಿ ಹಾಕುತ್ತಿದ್ದ

ಪದ್ಮ, ಕಾರು ಬಂದು ನಿಂತುದನ್ನು ಕಂಡು, ಕೂಡಲೇ ಒಳಗೆ ಹೋಗಿ ತಾಯಿಗೆ ತಿಳಿಸಿದಳು. ಎಲ್ಲರನ್ನೂ ಒಳಗೆ ಕರೆದು, ತೊಟ್ಟಿಯಲ್ಲಿ ಕೂಡಿಸೆಂದು ರುಕ್ಮಿಣಮ್ಮ ಮಗಳಿಗೆ ತಿಳಿಸಿದಳು.

ನಿಯೋಗಗೋಷ್ಠಿ ತೊಟ್ಟಿಯಲ್ಲಿ ಕುಳಿತಮೇಲೆ ಡಾಕ್ಟರು ಪದ್ಮನನ್ನು

"ಅಣ್ಣ ಮನೆಯಲ್ಲಿ ಇಲ್ಲವೇನಮ್ಮ ?" ಎಂದು ಕೇಳಿದರು.

"ಇಲ್ಲ ಡಾಕ್ಟರೇ. ಕೋರ್ಟಿಗೆ ಹೋಗಿದ್ದಾರೆ."

"ಅಮ್ಮ ಇದ್ದಾರೆಯೇ ?"

"ಇದ್ದಾರೆ. ಕರೆಯಲೇ ?"

"ಸ್ವಲ್ಪ ಕರೆಯಮ್ಮ–ನಾವು ಅವರನ್ನೇ ಕಾಣಲು ಬಂದಿದ್ದೇವೆ."

ರುಕ್ಮಿಣಿ ಅದೇ ಪೂಜೆ ಮುಗಿಸಿ ಎದ್ದಿದ್ದಳು. ಎಲ್ಲರಿಗೂ ಕಾಫಿ ತಂದುಕೊಡೆಂದು ಪದ್ಮನಿಗೆ ತಿಳಿಸಿ ತಾನು ಹೊರಗೆ ಬಂದಳು.

ಎಲ್ಲರೂ ಎದ್ದು ರುಕ್ಮಿಣಿಗೆ ಕೈಮುಗಿದು ಕುಳಿತರು. ಡಾಕ್ಟರು ನಿಂತುಕೊಂಡೇ

"ಎಲ್ಲರ ಪರಿಚಯವೂ ಅಮ್ಮನವರಿಗಿರಬೇಕು."

"ಇದೆಯಪ್ಪ – ಇವರು ನಮ್ಮ ಕರಿಯಪ್ಪಗೌಡರಲ್ಲವೇ ?"

"ಹೌದು ತಾಯಿ" ಎಂದರು ಗೌಡರು.

"ನೀವು ನಮ್ಮ ಮನೆ ಮದುವೆಗೆ ಬರಲೇ ಇಲ್ಲ."

"ಆಗಲಿಲ್ಲ ತಾಯಿ. ಹಳ್ಳಿಯ ಕಡೆ ಹೋಗಿದ್ದೆ."

"ನಿಮಗೆ ಅನುಕೂಲವಾದಾಗ ಬಂದು ತಾಂಬೂಲ ತೆಗೆದು ಕೊಂಡು ಹೋಗಬೇಕು."

"ಅಪ್ಪಣೆ ತಾಯಿ."

ಪದ್ಮ ಎಲ್ಲರಿಗೂ ಕಾಫಿ ತಂದುಕೊಟ್ಟಳು. ಡಾಕ್ಟರು ಕಾಫಿ ಮುಗಿಸಿ ಲೋಟ ಕೆಳಗಿಟ್ಟು,

"ನಾವು ಒಂದು ಕಾರ್ಯಾರ್ಥವಾಗಿ ನಿಮ್ಮಲ್ಲಿ ಬಂದಿದ್ದೇವೆ ತಾಯಿ."

"ದೊಡ್ಡವರು – ತಾವುಗಳೆಲ್ಲಾ ದಯಮಾಡಿಸಿ ನಮ್ಮ ಮನೆ

ಪಾವನಮಾಡಿದಿರಿ."

"ನೀವು ಈಗ ಊರನ್ನೇ ಪಾವನಗೊಳಿಸಬೇಕಾಗಿದೆ."

"ಎಷ್ಟು ದೊಡ್ಡ ಮಾತಾಡುವಿರಿ ಡಾಕ್ಟರೇ. ಊರನ್ನು ಪಾವನ ಮಾಡುವುದಕ್ಕೆ ನಾನು ಯಾರು? – ಒಬ್ಬ ಸಾಮಾನ್ಯ ಹೆಂಗಸು ಏನು ಮಾಡಬಲ್ಲಳು."

"ಅದನ್ನು ಅರಿಕೆಮಾಡಿಕೊಳ್ಳುವುದಕ್ಕೇ ನಾವು ಬಂದಿದ್ದೇವೆ. ಈಗ ಸಕ್ಕರೆ ಕಂಪೆನಿಯ ಅಧ್ಯಕ್ಷರ ಕಛೇರಿಯಲ್ಲಿ ಸಭೆ ಸೇರಿ ಒಂದು ಇತ್ಯರ್ಥಕ್ಕೆ ಬಂದು, ನಿಮ್ಮ ಕಡೆ ಬಂದಿದ್ದೇವೆ."

"ಜನತಾಜನಾರ್ಧನನ ಸೇವೆಮಾಡಲು ನೀವು ಅವಕಾಶಕೊಡುವುದಾದರೆ ಬೇಡವೆನ್ನಲೇ?"

"ಇಫ್ಲುಯಂಜಾ ಬೇನೆಗೆ ತುತ್ತಾಗಿ ಮಂಡ್ಯ ನಾಶವಾಗುತ್ತಿದೆ. ಲೇಬರ್ ಕಾಲೋನಿಯಲ್ಲಂತೂ ಜನ ಲೆಕ್ಕವಿಲ್ಲದೆ ಸಾಯುತ್ತಿದ್ದಾರೆ."

"ನಾನು ಬಲ್ಲೆ."

"ಇದಕ್ಕೆ ತೀವ್ರ ಕಾರ್ಯಕ್ರಮ ಕೈಗೊಳ್ಳದಿದ್ದರೆ ಅನರ್ಥವಾಗುತ್ತದೆ."

"ತಮ್ಮಂಥ ಮೇಧಾವಿಗಳಾದ ಡಾಕ್ಟರು ಇರುವಾಗ ಭಯವೇನು?"

"ನಮ್ಮ ಕಥೆ ಮುಗಿದುಹೋಗಿದೆ ತಾಯಿ. ಬೇನೆ ನಮ್ಮ ಕೈಮೀರಿಬಿಟ್ಟಿದೆ."

"ಇದಕ್ಕೆ ನಾನೇನು ಮಾಡಬಲ್ಲೆ?"

"ಚಿಕಿತ್ಸೆಯ ಜವಾಬ್ದಾರಿ ನೀವು ಹೊತ್ತುಕೊಳ್ಳಬೇಕು."

"ನಾನೇ .... ...."

ಎನ್ನುತ್ತ ರುಕ್ಮಿಣಿ ಥರಥರನೆ ನಡುಗಿದಳು.

"ಹೌದು ತಾಯಿ. ನೀವು ದೊಡ್ಡಮನಸ್ಸುಮಾಡದಿದ್ದರೆ ಮಂಡ್ಯ ಬರಿದಾಗುತ್ತದೆ. ಮನುಷ್ಯ ಪ್ರಯತ್ನ ಮೀರಿಹೋಗಿದೆ. ನಿಮ್ಮ ದಯೆಯಿಂದಲಾದರೂ ಭಗವಂತ ಕಣ್ಣುಬಿಟ್ಟು ನೋಡಿದರೆ ಜನ

ಬದುಕಿಕೊಳ್ಳುತ್ತಾರೆ. ”

ಎಂದು ಕರಿಯಪ್ಪಗೌಡರು ಅಂಗಲಾಚಿದರು.

“ ಗೌಡರೇ. ನಾನು ಧನ್ವಂತರಿಯಲ್ಲ– ಒಬ್ಬ ಸಾಮಾನ್ಯ ಹೆಂಗಸು. ಅಲ್ಪಸ್ವಲ್ಪ ಔಷಧೋಪಚಾರ ತಿಳಿದುಕೊಂಡಿದ್ದೇನೆಂದು ಇಂಥ ಸಾಹಸಕ್ಕೆ ಕೈ ಹಾಕಲೇ ? ನನ್ನ ಶಕ್ತಿಗಳವಡುವ ಕೆಲಸ ಹೇಳಿ. ಶಿರಸಾವಹಿಸಿ ಪಾಲಿಸುತ್ತೇನೆ. ”

“ ನೀವಲ್ಲದೆ ನಮಗೆ ಯಾರೂ ದಿಕ್ಕಿಲ್ಲ ತಾಯಿ. ನೀವು ಆಶೀರ್ವಾದಮಾಡಿ ನೀರು ಕೊಟ್ಟರೂ ಅದೇ ಅಮೃತವಾಗುತ್ತದೆ ”

ಎಂದು ಡಾಕ್ಟರು ಹೇಳಿದರು.

“ ನೀವು ಯಾಜಮಾನ್ಯ ವಹಿಸಿಕೊಂಡು ಸೂಚನೆ ಕೊಡಿಯಮ್ಮ. ನಾವೆಲ್ಲಾ ನಿಮ್ಮ ಸೇವಕರ ಹಾಗೆ ದುಡಿಯಲು ಸಿದ್ಧರಾಗಿದ್ದೇವೆ. ”

ಎಂದು ನಗರ ಸಭಾಧ್ಯಕ್ಷರು ವಿನಂತಿಮಾಡಿಕೊಂಡರು.

“ ಅಮ್ಮ – ಇದು ಸಾವಿರಾರು ಜನರ ಬದುಕು ಸಾವಿನ ಪ್ರಶ್ನೆ. ನೀವು ಧೈರ್ಯಮಾಡದಿದ್ದರೆ ನಾವು ನಿರ್ಗತಿಕರಾಗುತ್ತೇವೆ. ”

ಎಂದು ಕಂಪೆನಿಯ ಅಧ್ಯಕ್ಷರು ಪ್ರಾರ್ಥಿಸಿಕೊಂಡರು.

ರುಕ್ಮಿಣಿಯ ಎರಡು ಕಣ್ಣುಗಳಲ್ಲಿಯೂ ನೀರು ತುಂಬಿತು.

“ ಜನರ ಕಷ್ಟ ನಾನು ನೋಡಲಾರೆ. ಭಗವಂತ ನನಗೇಕೆ ಹೆಚ್ಚು ಶಕ್ತಿ ಕೊಟ್ಟಿಲ್ಲ. ನನ್ನ ದೇಹ ಕತ್ತರಿಸಿ ಕೊಡುವುದರಿಂದ ಜನಕ್ಕೆ ಶುಭವಾಗುವುದಿದ್ದರೆ ಅದಕ್ಕೂ ನಾನು ಸಿದ್ಧಳಾಗಿದ್ದೇನೆ. ”

“ ಯೋಚನೆ ಮಾಡಿ ಬೇಕಾದರೂ ತಿಳಿಸಿಯಮ್ಮ ”

ಎಂದು ಡಾಕ್ಟರು ಸೂಚಿಸಿದರು.

ರುಕ್ಮಿಣಿ ಅಲ್ಲಿ ನಿಲ್ಲದೆ ಒಳಕ್ಕೆ ಬಂದಳು. ಅವಳ ಕಣ್ಣುಗಳಿಂದ ಧಾರೆ ಹೊರಟಿತ್ತು. ಗೋದಮ್ಮನವರು ಸೊಸೆಯ ಬಳಿಗೆ ಬಂದು

“ ಏಕೇ ತಾಯಿ ಇಷ್ಟು ಯೋಚಿಸುತ್ತಿರುವೆ ?”

“ ಅವರು ಹೇಳಿದ್ದು ಕೇಳಿದಿರಾಮ್ಮ ?”

“ ಕೇಳಿದೆ.”

" ಭಗವಂತ ನನ್ನ ಪರೀಕ್ಷಿಸುತ್ತಿದ್ದಾನೆ."

" ಇಲ್ಲ – ತನ್ನ ಕೆಲಸ ನಿನ್ನ ಕೈಯಿಂದ ಮಾಡಿಸಬೇಕೆಂದಿದ್ದಾನೆ."

" ನೀವೂ........"

" ರುಕ್ಕೂ – ಮಾಧುವನ್ನು ಮೃತ್ಯುದವಡೆಯಿಂದ ನೀನು ಹೇಗೆ ಪಾರುಮಾಡಿದೆ ಜ್ಞಾಪಿಸಿಕೋ. ಭಗವಂತ ಆಗ ನಿನಗೆ ಯಾವ ಶಕ್ತಿ ಕೊಟ್ಟ. ಅದರ ನೂರುಪಟ್ಟು ಶಕ್ತಿ ಈಗ ಕೊಡುತ್ತಾನೆ. ದೇವರ ತಲೆಯ ಮೇಲೆ ಒಂದು ಹೂ ಹಾಕಿ, ಪ್ರಾರ್ಥಿಸಿಕೊಂಡು, ಒಪ್ಪಿಕೊಂಡು ಬಿಡು" ಎಂದರು.

ರುಕ್ಮಿಣಿ ದೇವಮಂದಿರಕ್ಕೆ ಬಂದು, ಬೊಗಸೆ ತುಂಬ ಹೂ ಹಿಡಿದು

" ಸ್ವಾಮಿ. ನಾನು ಅಜ್ಞಳು, ನಿನ್ನ ಒಲಿಸಿಕೊಳ್ಳುವ ಪರಿಯನ್ನರಿಯದ ಮೂಢಳು. ಆದರೆ ಧರ್ಮಮಾರ್ಗದಲ್ಲಿ ಹೋಗಲು ಪ್ರಯತ್ನಿಸಿದ್ದೇನೆ. ನಾನು ಗಳಿಸಿರುವ ಪುಣ್ಯವನ್ನೆಲ್ಲಾ ಜನತೆಯ ಕಲ್ಯಾಣಕ್ಕೆ ಮುಡಿಪಾಗಿಡಲು ಸಿದ್ಧಳಾಗಿದ್ದೇನೆ – ನೀನು ನನಗೆ ಮಾರ್ಗ ತೋರಿಸು "

ಎಂದು ಭಗವಂತನ ಮೇಲೆ ಹೂವೆರಚಿದಳು.

ರುಕ್ಮಿಣಿ, ಗೋದಮ್ಮ ಇಬ್ಬರೂ ಎವೆಹಾಕದೆ ನೋಡುತ್ತ ನಿಂತಿದ್ದಂತೆ ದೇವರ ಬಲ ಭಾಗದಲ್ಲಿದ್ದ ಹೂಗಳು ಕೆಳಗುರುಳಿದವು. ರುಕ್ಮಿಣಿ ಅವುಗಳನ್ನೆತ್ತಿಕೊಂಡು ಭಕ್ತಿಯಿಂದ ಕಣ್ಣಿಗೊತ್ತಿಕೊಂಡಳು.

" ಸ್ವಾಮಿ ಆಜ್ಞೆ ತಿಳಿಯಿತೇ ತಾಯಿ" ಎಂದರು ಗೋದಮ್ಮ.

" ತಿಳಿಯಿತಮ್ಮ "

ಎಂದು ರುಕ್ಮಿಣಿ ಅತ್ತೆಯ ಪಾದಗಳಿಗೆ ನಮಸ್ಕರಿಸಿದಳು.

ಗೋದಮ್ಮನವರೇ ರುಕ್ಮಿಣಿಯನ್ನು ಕೈಹಿಡಿದು ಹೊರಗೆ ಕರೆದುಕೊಂಡು ಬಂದು

" ರುಕ್ಮಿಣಿ ಒಪ್ಪಿಕೊಂಡಿದ್ದಾಳಪ್ಪಾ – ಧೈರ್ಯವಾಗಿರಿ "

ಎಂದು ಹೇಳಿದರು.

ನಿಯೋಗ ಗೋಷ್ಠಿಯವರ ಬಾಯಿ ಕಟ್ಟಿ ಹೋಯಿತು. ಔಪಚಾರಿಕವಾಗಿ ಒಂದು ಮಾತು ಆಡುವುದಕ್ಕೂ ಯಾರಿಗೂ ಸಾಧ್ಯವಾಗಲಿಲ್ಲ. ಎಲ್ಲರೂ ಕೈಮುಗಿದು ನಿಶ್ಶಬ್ದವಾಗಿ ಅಲ್ಲಿಂದ ತೆರಳಿದರು.

೨೪

ಇನ್‌ಫ್ಲುಯಂಜಾ ಕ್ಯಾಂಪುಗಳಿಗೆ ಸಕ್ಕರೆ ಕಂಪೆನಿಯ ಅಧ್ಯಕ್ಷರು ತಮ್ಮ ಎರಡು ಭವ್ಯವಾದ ಗೋಡೌನ್‌ಗಳನ್ನು ತೆರವು ಮಾಡಿಕೊಟ್ಟರು. ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರು ರೋಗಿಗಳಿಗೆ ಅವಶ್ಯಕವಾದ ಸಾಮಾನುಗಳನ್ನೊದಗಿಸಿದರು. ನಗರಸಭಾಧ್ಯಕ್ಷರು ಮತ್ತು ಕಾರ್ಮಿಕ ಸಂಘದ ಅಧ್ಯಕ್ಷರು ಎರಡು ಸ್ವಯಂಸೇವಕ ತಂಡಗಳನ್ನು ವ್ಯವಸ್ಥೆಮಾಡಿದರು. ರುಕ್ಮಿಣಿಯ ಸಹಾಯಕರಾಗಿ ಕರಿಯಪ್ಪಗೌಡರು, ಹನುಮಯ್ಯನವರು ನಿಂತರು.

ಗಂಜಿ ಕಾಸುವುದಕ್ಕೆ ಕೆಲವರು ನಿಯೋಜಿಸಲ್ಪಟ್ಟರು. ರುಕ್ಮಿಣಿ ತಾನೇ ನಿಂತುಕೊಂಡು ಕಷಾಯ ಸಿದ್ಧಗೊಳಿಸುತ್ತಿದ್ದಳು.

ಬೆಳಿಗ್ಗೆ ಐದು ಗಂಟೆಗೆದ್ದು ರುಕ್ಮಿಣಿ ಸ್ನಾನ ಪೂಜೆ ತೀರಿಸಿಕೊಂಡು ಕ್ಯಾಂಪಿಗೆ ಬಂದು ಅಲ್ಲಿ ಕೆಲಸ ಕಾರ್ಯ ನೋಡಿಕೊಂಡು ಮಧ್ಯಾಹ್ನ ಒಂದು ಗಂಟೆಗೆ ಮನೆಗೆ ಹೋಗಿ ಸ್ನಾನ, ಊಟ ತೀರಿಸಿಕೊಂಡು ಮೂರು ಗಂಟೆಗೆ ಮತ್ತೆ ಕ್ಯಾಂಪಿಗೆ ಬರುತ್ತಿದ್ದಳು. ರಾತ್ರಿ ಅವಳು ಹಿಂದಿರುಗುವ ವೇಳೆಗೆ ಹತ್ತು ಹನ್ನೊಂದು ಗಂಟೆಯಾಗುತ್ತಿತ್ತು. ರಾತ್ರಿ ಸ್ನಾನ ಮಾಡಿ, ಸ್ವಲ್ಪ ಉಪಾಹಾರ ತೆಗೆದುಕೊಳ್ಳಲೂ ರುಕ್ಮಿಣಿಗೆ ಚೈತನ್ಯವಿರುತ್ತಿರಲಿಲ್ಲ. ಒಂದೊಂದು ದಿನ ಗೋದಮ್ಮನವರು ಬಲವಂತ ಮಾಡಿ ಅವಳಿಗೆ ಸ್ವಲ್ಪ ಹಾಲು ಕುಡಿಸುತ್ತಿದ್ದರು.

ರುಕ್ಮಿಣಿ ಕೈಗೊಂಡ ಸೇವೆ ಕೇಳಿ ಜವರೇಗೌಡರು, ಷರೀಫ್ ಸಾಹೇಬರು ಚಕಿತರಾದರು. ಇಂಥ ಉದ್ಯಮ ಕೈಗೊಳ್ಳಲು ಅನುಮತಿ ಯಿತ್ತ ಮಾಧವರಾಯನ ಮೇಲೆ ಅವರಿಗೆ ಕೋಪವೂ ಬಂದಿತ್ತು.

" ನಾನು ಅನುಮತಿ ಕೊಡಲೇ ಇಲ್ಲ ಗೌಡರೇ. ನಾನು ಮನೆಗೆ ಬರುವ ವೇಳೆಗೆ ಕಂಪೆನಿ ಅಧ್ಯಕ್ಷರೂ ಇತರರೂ ಬಂದು ಅವಳಿಂದ ಮಾತು ತೆಗೆದುಕೊಂಡು ಹೋಗಿದ್ದರು. ನನಗೆ ವಿಷಯ ತಿಳಿದ ಮೇಲೆ ಸಿಟ್ಟುಮಾಡಿಕೊಂಡೆ. ರುಕ್ಮಿಣಿ ಏನು ಹೇಳಿದಳು ಬಲ್ಲಿರಾ ?"

" ಏನು ಹೇಳಿದರು ? "

" ' ದೇಹ ಶಾಶ್ವತವಲ್ಲ – ಜೀವ ಶಾಶ್ವತ. ದೇಹಕ್ಕೆ ಮುಪ್ಪು, ಸಾವು ಅಡರುತ್ತದೆ. ಜೀವ ಒಂದು ದೇಹ ಬಿಟ್ಟು ಇನ್ನೊಂದು ದೇಹಕ್ಕೆ ಹೋಗುತ್ತದೆ. ನನ್ನ ಪಾರ್ಥಿವ ಶರೀರವೂ ಒಂದಲ್ಲ ಒಂದು ದಿನ ಹೋಗತಕ್ಕದ್ದೆ. ಅದು ಭಗವಂತನ ಸೇವೆಯಲ್ಲಿ – ಭಗವತ್ಸ್ವ ರೂಪಿಯಾದ ಜನತಾ ಜನಾರ್ಧನನ ಸೇವೆಯಲ್ಲಿ ಬಿದ್ದುಹೋದರೆ ಅದಕ್ಕೆ ನೀವು ವ್ಯಸನಪಡಬೇಕೇ? ಅಮ್ಮನ ಅಪ್ಪಣೆ ಪಡೆದೇ ಈ ಕೆಲಸಕ್ಕೆ ಒಪ್ಪಿಕೊಂಡೆ ' ಎಂದಳು. ನಾನು ಅಮ್ಮನ ಮೇಲೆ ಸಿಟ್ಟು ಮಾಡಿಕೊಂಡೆ. ಈ ಸೊಸೆಯನ್ನು ಅಮ್ಮ ಬಿಟ್ಟುಕೊಡುತ್ತಾಳೆಯೇ ?– ' ಹುಚ್ಚಾ, ರುಕ್ಕೂ ನಿನ್ನ ನನ್ನ ಸೊತ್ತು ಮಾತ್ರವೇ ಅಲ್ಲಪ್ಪಾ. ಸೂರ್ಯ ಹೇಗೆ ಲೋಕದ ಸೊತ್ತೋ ಹಾಗೇ ರುಕ್ಕೂನೂ ಲೋಕದ ಸೊತ್ತು. ಸಾವಿರಾರು ಜನಗಳನ್ನು ಉದ್ಧರಿಸುವ ಚೇತನ ಭಗವಂತ ಅವಳಿಗೆ ಕೊಟ್ಟಿರುವುದು ನಿರರ್ಥಕವಾಗಿ ಹೋಗಲು ಸಾಧ್ಯವೇ ' ಎಂದಳು."

" ಬಿಡಿ ಸ್ವಾಮಿ – ಏತರ ಸಮಾಧಾನದ ಮಾತಿದು."

ಎಂದು ಜವರೇಗೌಡರು ಅಸಂತೋಷ ವ್ಯಕ್ತಮಾಡಿದರು. ರುಕ್ಮಿಣಿಯನ್ನು ಕ್ಯಾಂಪಿನಲ್ಲಿ ಕಾಣಲು ಹೋದ ಗೌಡರನ್ನೂ, ಸಾಹೇಬ ರನ್ನೂ ಅವಳು ಮಾತನಾಡಿಸುವುದಕ್ಕೇ ಸಾಧ್ಯವಾಗಲಿಲ್ಲ. ಅಲ್ಲಿನ ದೃಶ್ಯ, ರುಕ್ಮಿಣಿಯ ದೈವಿಕ ಸೇವೆ ನೋಡುತ್ತ ನಿಂತಿದ್ದ ಇಬ್ಬರೂ ಅವಾಕ್ಕಾದರು.

ಹಿಂದಿರುಗುತ್ತಾ ದಾರಿಯಲ್ಲಿ ಗೌಡರು

" ನೋಡಿದಿರಾ ಸಾಹೇಬರೇ " ಎಂದರು.

ಸಾಹೇಬರು ಕೈಗಳಲ್ಲಿ ಮುಖ ಮುಚ್ಚಿಕೊಂಡು ಗಳಗಳನೆ ಅತ್ತುಬಿಟ್ಟರು.

" ಏಕೆ ಜನಾಬ್ – ಏನಾಯಿತು ? "

" ಅಮ್ಮಾಜಿಯವರ ಮುಖ ನೋಡಿದಿರಾ ? "

" ನೋಡಿದೆ."

" ನಿಮಗೇನನ್ನಿಸಿತು ? "

" ಆ ಮಹಾತಾಯಿ – ನಮ್ಮ ರಾಜ್ಯಲಕ್ಷ್ಮಿ ಮನುಷ್ಯ ವೇಷ ಧರಿಸಿ ತನ್ನ ಮಕ್ಕಳನ್ನು ಲಾಲಿಸಿ ಪಾಲಿಸುತ್ತಿದ್ದಂತೆ ನನಗೆ ಭಾಸವಾಯಿತು."

" ನಿಜ – ಆ ಮಹಾತಾಯಿ ಬೇಗ ನಮ್ಮ ಕೈಬಿಡುತ್ತಾರೆ ಗೌಡರೇ "

" ಏಕೆ ಜನಾಬ್ ?"

" ಅಮ್ಮಾಜಿ ರೋಗಿಗಳಿಗೆ ಹುಯ್ಯುತ್ತಿದ್ದುದು ಗಂಜಿಯಲ್ಲ – ತಮ್ಮ ಪ್ರಾಣಶಕ್ತಿಯನ್ನು. ತಮ್ಮ ಆಯುಸ್ಸನ್ನು ಅವರು ಹಂಚುತ್ತಿದ್ದಾರೆ."

ಊರಿಗೆ ಹಿಂದಿರುಗಿದ ಮೇಲೆ ಸಾಹೇಬರು ದೊಡ್ಡ ಮಸೀದಿಯ ಮೌಲ್ವಿಯವರನ್ನು ಬರಮಾಡಿಕೊಂಡು

" ಮೌಲ್ವಿ ಸಾಹೇಬ್ – ನಾನು ಸಾಕು ಎಂದು ಹೇಳುವವರೆಗೂ ನಿತ್ಯ ಮಸೀದಿಯಲ್ಲಿ ಸತತ ಪ್ರಾರ್ಥನೆ ನಡೆಯಲಿ. ನಿತ್ಯವೂ ಭಿಕ್ಷುಕರಿಗೆ ಅನ್ನದಾನವಾಗಲಿ " ಎಂದರು.

ಗೌಡರು ರಂಗನಾಥಸ್ವಾಮಿಗೆ ನಿತ್ಯ ಪೂಜೆ ಏರ್ಪಡಿಸಿ, ಪ್ರತಿದಿನ ಪ್ರಸಾದವನ್ನು ಮಂಡ್ಯಕ್ಕೆ ಕಳಿಸಿಕೊಡುವ ವ್ಯವಸ್ಥೆಮಾಡಿದರು.

ಹದಿನೈದು ದಿನಗಳಲ್ಲಿ ಇಫ್ಲುಯಂಜಾ ಬೇನೆ ಸ್ವಲ್ಪ ಹತೋಟಿಗೆ ಬಂದಿತು.

ಮಂಡ್ಯಕ್ಕೆ ಮಂಡ್ಯವೇ ರುಕ್ಮಿಣಿಯ ಸೇವೆಗೆ ಮಾರುಹೋಗಿತ್ತು.

ರುಕ್ಮಿಣಿ ತನ್ನ ಮಡಿ, ಮೈಲಿಗೆಯನ್ನೂ ಮರೆತುಬಿಟ್ಟಿದ್ದಳು. ರೋಗಿಗಳನ್ನು ಆದರಿಸಿ, ಸಂತೈಸುವಳು. ಸಣ್ಣ ಮಕ್ಕಳನ್ನು ತಾನೇ ಎತ್ತಿಕೊಂಡು ಸಮಾಧಾನ ಮಾಡುವಳು. ರುಕ್ಮಿಣಿಯನ್ನು ಕಂಡೊಡನೆಯೇ ನರಳಾಟ ನಿಲ್ಲುತ್ತಿತ್ತು. ರೋಗಿಗಳು ಉತ್ಸಾಹದಿಂದ 'ಅಮ್ಮ ಬಂದರು – ಅಮ್ಮ ಬಂದರು' ಎಂದು ಸಂತೋಷಭರಿತರಾಗುತ್ತಿದ್ದರು.

ರುಕ್ಮಿಣಿಗಾಗುತ್ತಿದ್ದ ಆಯಾಸವನ್ನು ಕರಿಯಪ್ಪಗೌಡರು ನೋಡುತ್ತಿದ್ದರು. ಒಮ್ಮೊಮ್ಮೆ ರೋಗಿಗಳಿಗೆ ಗಂಜಿ ಕುಡಿಸುವಷ್ಟು ತ್ರಾಣವೂ ರುಕ್ಮಿಣಿಗೆ ಇಲ್ಲವಾಗುತ್ತಿತ್ತು. ಕರಿಯಪ್ಪಗೌಡರು ಮಮ್ಮಲ ಮರುಗುತ್ತಾ

"ಅಮ್ಮ – ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಿ. ನಾವು ನೋಡಿಕೊಳ್ಳುತ್ತೇವೆ."

"ಎಲ್ಲಿಯಾದರೂ ಉಂಟೇ ಗೌಡರೇ. ನಾನು ವಿಶ್ರಮಿಸಿಕೊಳ್ಳುವ ಕಾಲ ಮುಂದಿದೆ. ಪ್ರತಿಯೊಬ್ಬ ರೋಗಿಯೂ ಗುಣಪಡೆದಲ್ಲದೆ ನನಗೆ ಶಾಂತಿಯೆಲ್ಲಿಂದ ಬರಬೇಕು?"

ನಲವತ್ತು ದಿನ ಕಳೆಯುವುದರಲ್ಲಿ ಇನ್‌ಫ್ಲುಯಂಜಾ ಬೇನೆ ಮಂಡ್ಯಬಿಟ್ಟು ಮುಂದಕ್ಕೆ ಪ್ರಯಾಣಮಾಡಿತು. ಕ್ಯಾಂಪುಗಳು ಮುಚ್ಚಲ್ಪಟ್ಟವು. ರೋಗಿಗಳು, ಸ್ವಯಂಸೇವಕರು, ಕಾರ್ಯಕರ್ತರು ಮನೆಗಳಿಗೆ ಹಿಂದಿರುಗಿದರು.

ರುಕ್ಮಿಣಿಯೂ ಮನೆಗೆ ಬಂದಳು.

ಅವಳ ದೇಹ ಪೂರ್ಣವಾಗಿ ಸೋತು ಹೋಗಿತ್ತು; ಆದರೆ ಮನಸ್ಸು ಪ್ರಫುಲ್ಲವಾಗಿತ್ತು.

ಸಕ್ಕರೆ ಕಂಪೆನಿಯಲ್ಲಿ ಮತ್ತೆ ಸಭೆ ಸೇರಿತು. ಕಂಪೆನಿಯ ಅಧ್ಯಕ್ಷರು ಎಲ್ಲರಿಗೂ ವಂದನೆಯನ್ನರ್ಪಿಸಿ, ಕರಿಯಪ್ಪಗೌಡರ ಸಹಕಾರವನ್ನು ವಿಶೇಷವಾಗಿ ಪ್ರಶಂಸಿಸಿದರು.

ಅಧ್ಯಕ್ಷರ ಪ್ರಶಂಸೆಯನ್ನು ಗೌಡರು ಅಂಗೀಕರಿಸದೆ

" ಇದರ ಎಲ್ಲಾ ಕೀರ್ತಿ ಅಮ್ಮಾವರಿಗೆ ಸೇರಬೇಕು ಸ್ವಾಮಿ. ನಾವೆಲ್ಲಾ ನಿಮಿತ್ತಮಾತ್ರದವರು " ಎಂದರು.

ರುಕ್ಮಿಣಿಯ ಸೇವೆಯನ್ನು ಯುಕ್ತರೀತಿಯಲ್ಲಿ ಪುರಸ್ಕರಿಸಬೇಕೆಂಬ ಹನುಮಯ್ಯನವರ ಸಲಹೆಗೆ ಎಲ್ಲರೂ ಹಾರ್ದಿಕ ಬೆಂಬಲ ನೀಡಿದರು.

" ಮುನಿಸಿಪಾಲಿಟಿಯಿಂದ ಅವರಿಗೆ ಅಡ್ರೆಸ್ಸು ಕೊಡಿಸಲು ನಿರ್ಧರಿಸಿದ್ದೇನೆ "

ಎಂದು ಹನುಮಯ್ಯ ಹೇಳಿದುದಕ್ಕೆ ಎಲ್ಲರ ಅಭಿಪ್ರಾಯ ತಿಳಿದು ಕೊಂಡ ಕರಿಯಪ್ಪಗೌಡರು

" ನನ್ನ ಒಂದೂವರೆ ತಿಂಗಳ ಅನುಭವಕ್ಕೆ ತೀಿದು ಬಂದಿರುವ ಒಂದು ವಿಷಯ ಅರಿಕೆ ಮಾಡಿಕೊಳ್ಳುತ್ತೇನೆ. ಅಮ್ಮಾವರು ಯಾವ ಮಾನ, ಸನ್ಮಾನವನ್ನೂ ಸ್ವೀಕರಿಸುವುದಿಲ್ಲ. ಈ ವಿಷಯ ನಾವು ಅವರಲ್ಲಿ ಪ್ರಸ್ತಾಪಿಸಿದರೆ ಅವರ ಮನಸ್ಸಿಗೆ ತುಂಬ ನೋವುಂಟಾಗುತ್ತದೆ."

" ಅವರು ಮಾಡಿರುವ ಉಪಕಾರ ಸ್ಮರಿಸದಿರುವುದು ನಮಗೆ ಶೋಭಾಯಮಾನವಲ್ಲ ಗೌಡರೇ "

ಎಂದು ಡಾಕ್ಟರು ಹೇಳಲು ಗೌಡರು

" ನಿಜ ಸ್ವಾಮಿ. ನಮ್ಮ ತೃಪ್ತ್ಯರ್ಥವಾಗಿ ನಾವು ಏನಾದರೂ ಮಾಡಿಕೊಳ್ಳಬೇಕು. ಇದಕ್ಕೆ ನಾನೊಂದು ಸಲಹೆ ಕೊಡುತ್ತೇನೆ. ತಾವುಗಳೆಲ್ಲಾ ದೊಡ್ಡ ಮನಸ್ಸುಮಾಡಿ ಒಪ್ಪಿಕೊಳ್ಳಬೇಕು. "

" ಹೇಳಿ. "

" ಕೂಲಿಕಾರರಿಗೆ ಪ್ರತ್ಯೇಕವಾದ ಆಸ್ಪತ್ರೆಯಿಲ್ಲ. ಇದರಿಂದ ಹೆಣ್ಣುಮಕ್ಕಳಿಗೆ ತುಂಬ ತೊಂದರೆಯಾಗುತ್ತಿದೆ. ಸಕ್ಕರೆ ಕಂಪೆನಿ, ನಗರ ಸಭೆ ಖರ್ಚಿನ ಮೂರು ಭಾಗ ಒಪ್ಪಿಕೊಂಡರೆ ನಾನು ಕೂಲಿ ಕಾರರಿಂದ ಒಂದು ಭಾಗ ಸಂಗ್ರಹಿಸಿಕೊಡುತ್ತೇನೆ. ಪ್ರತಿಯೊಬ್ಬ ಕೂಲಿ ನಾಲ್ಕಾಣೆ ಕೊಟ್ಟರೂ ಚಿಂತೆಯಿಲ್ಲ. ಈ ಆಸ್ಪತ್ರೆ ತನ್ನದು – ತನ್ನ ಕಾಣಿಕೆಯೂ ಸಂದಿದೆ ಎಂಬ ಅಭಿಮಾನ ಬೆಳೆಯಬೇಕಾದುದು ಅವಶ್ಯಕ. ಈ ಆಸ್ಪತ್ರೆಯನ್ನು ಅಮ್ಮಾವರ ಹೆಸರಿನಲ್ಲಿ ಸ್ಥಾಪಿಸಿದರೆ

ಲೋಕೋಪಕಾರವೂ ಆಗುತ್ತದೆ. ಅಮ್ಮಾವರ ಮನಸ್ಸಿಗೆ ಸಂತೋಷವೂ ಆಗುತ್ತದೆ. ”

“ ಆಸ್ಪತ್ರೆಯೆಂದರೆ ಅಲ್ಪಸ್ವಲ್ಪದಲ್ಲಿ ಮುಗಿಯುವುದಿಲ್ಲವಲ್ಲ ಗೌಡರೇ. ”

ಎಂದು ಡಾಕ್ಟರು ಅನುಮಾನ ಸೂಚಿಸಲು

“ ಸರಕಾರದವರು ಒಂದು ಭಾಗ ಕೊಟ್ಟೇಕೊಡುತ್ತಾರೆ. ಅಧ್ಯಕ್ಷರು ಮನಸ್ಸು ಮಾಡಿದರೆ ಕಂಪೆನಿಯಿಂದಲೂ ಸಾಕಷ್ಟು ಹಣ ಕೊಡಿಸಬಹುದು. ಉಳಿದ ಹಣ ನಾವು ಸಂಗ್ರಹಮಾಡೋಣ. ಇದು ಬಹಳ ಅಗತ್ಯವಾಗಿ ಆಗಬೇಕಾಗಿರುವ ಕೆಲಸ ಸ್ವಾಮಿ. ಅಮ್ಮಾವರು ಮಾಡಿರುವ ಅದ್ಭುತಸೇವೆಯನ್ನು ಗೌರವಿಸಬೇಕಾದರೆ ಇದಕ್ಕಿಂತಲೂ ಉತ್ತಮ ಮಾರ್ಗವಿಲ್ಲ. ”

ಅಧ್ಯಕ್ಷರು ಧೈರ್ಯ ತಂದುಕೊಂಡು

“ ಗೌಡರು ಹೇಳುವ ಮಾತು ನಿಜ. ಒಂದು ವರ್ಷ ಇದಕ್ಕಾಗಿ ಶ್ರಮಪಟ್ಟರೂ ಚಿಂತೆಯಿಲ್ಲ. ನಾವುಗಳೆಲ್ಲಾ ಕೂಡಿ ದುಡಿದರೆ ಆಸ್ಪತ್ರೆ ಸ್ಥಾಪನೆ ಕಷ್ಟವಾಗಲಾರದು.” ಎಂದರು.

ಗೌಡರು ಆನಂದಭರಿತರಾಗಿ

“ ಒಂದು ವರ್ಷದಲ್ಲಿ ಆಸ್ಪತ್ರೆಯೇ ಆಗಿ ಹೋಗುತ್ತದೆ ಸ್ವಾಮಿ. ಆ ಮಹಾತಾಯಿ ಹೆಸರು ಹೇಳಿ ಬೆಟ್ಟವನ್ನು ಕೂಡ ಹುಲ್ಲಿನಂತೆ ಎತ್ತಬಹುದು. ಒಳ್ಳೆಯ ದಿನ ನೋಡಿ ಶಂಕುಸ್ಥಾಪನೆ ಮಾಡಿಸಿಬಿಡಿ.”

ಇನ್‌ಫ್ಲುಯಂಜಾ ರೋಗ ನಿವಾರಣಾ ಸಮಿತಿಯನ್ನೇ ವಿಸ್ತಾರಗೊಳಿಸಿ ಆಸ್ಪತ್ರೆ ಸಮಿತಿಯನ್ನಾಗಿ ಮಾರ್ಪಡಿಸಲು ಅಧ್ಯಕ್ಷರು ಒಪ್ಪಿಕೊಂಡರು. ಕಂಪೆನಿಯ ಅಧ್ಯಕ್ಷರೇ ಸಮಿತಿಯ ಅಧ್ಯಕ್ಷರಾಗಿರಬೇಕೆಂದೂ, ನಗರ ಸಭಾಧ್ಯಕ್ಷರು ಕಾರ್ಯದರ್ಶಿಗಳಾಗಿರಬೇಕೆಂದೂ ತೀರ್ಮಾನವಾಯಿತು.

೨೫

ನಾರಾಯಣಸ್ವಾಮಿಯ ಲೇಖನಗಳು ಮುಂಬಯಿಯ ಇಂಗ್ಲಿಷ್ ವಾರಪತ್ರಿಕೆಗಳಲ್ಲಿಯೂ ದಿನ ಪತ್ರಿಕೆಗಳ ವಾರಾಂತ್ಯ ಸಂಚಿಕೆಗಳಲ್ಲಿಯೂ ಪ್ರಕಟವಾಗತೊಡಗಿದವು. ಅವನ 'ಸಂಡೆ ಕ್ರಾನಿಕಲ್' ಲೇಖನ ವಿವಾದಾಸ್ಪದವಾಗಿ, ಹಲವು ವಿದ್ವಾಂಸರ ಲಕ್ಷ್ಯ ಸೆಳೆದಿತ್ತು.

'ಜರ್ನಲ್ ಆಫ್ ಸೋಷಿಯಾಲಜಿ'ಯಲ್ಲಿ ಅವನು ಬರೆದ 'ಕೂಲಿ – ಬಂಡವಾಳ ಸಮಸ್ಯೆಯ ಸಾಮಾಜಿಕ ಹಿನ್ನೆಲೆ' ಲೇಖನ ಅವನಿಗೆ ಪಂಡಿತ ವರ್ಗದಲ್ಲಿ ಮಾನ್ಯತೆ ಗಳಿಸಿಕೊಟ್ಟಿತ್ತು.

ನಾರಾಯಣಸ್ವಾಮಿ ಪ್ರಗತಿ ಕಂಡು ಪಾಂಡುವಿಗೆ ಆನಂದವೂ ಆಯಿತು, ಆಶ್ಚರ್ಯವೂ ಆಯಿತು.

"ನೀವು ಪರವಾಯಿಲ್ಲಪ್ಪ. ಬೆರಳು ತೋರಿಸಿದರೆ ಹಸ್ತ ನುಂಗುತ್ತೀರಿ" ಎಂದ.

"ಏಕೆ ಹಾಗನ್ನುವಿರಿ ಪಾಂಡು?"

"ನಿಮ್ಮ ಲೇಖನ ಇಷ್ಟು ಬೇಗ 'ಜರ್ನಲ್'ನಲ್ಲಿ ಪ್ರಕಟವಾಗುವುದೆಂದು ನಾನು ನಿರೀಕ್ಷಿಸಿರಲಿಲ್ಲ. ಜರ್ನಲ್ ಬಳಗ ಸ್ವಲ್ಪ ಪ್ರತಿಗಾಮಿ ಮನೋಭಾವದವರು. ಹೊಸ ವಿಚಾರ, ಅಭಿಪ್ರಾಯಗಳನ್ನು ಸ್ವಾಗತಿಸಲು ಅವರು ಹಿಂಜರಿಯುತ್ತಾರೆ."

"ನನ್ನ ಲೇಖನ ಓದಿದಿರಾ?"

"ಇನ್ನೂ ಓದಿಲ್ಲ. ಸ್ಥೂಲವಾಗಿ ಹಾಳೆ ಮಗುಚಿದೆ."

"ನಿಮ್ಮ ಸಲಹೆ ಅನುಸರಿಸಿ ಬಂಡವಾಳ, ಕೂಲಿಗಳಿಗೆ ಮೈತ್ರಿ ಕಲ್ಪಿಸಲು ಪ್ರಯತ್ನಿಸಿದ್ದೇನೆ ಪಾಂಡು."

"ಬಹಳ ಸಂತೋಷ. ನಮ್ಮ ಛೇರ್ಮನ್ ಮಾಣಿಕಜೀ ಲೇಖನ ನೋಡಿದರೆ ತುಂಬ ಸಂತೋಷ ಪಟ್ಟುಕೊಳ್ಳುತ್ತಾರೆ. ಇಂದೇ ಅವರಿಗೆ ಜರ್ನಲ್ ಕಳಿಸಿ ಕೊಡುತ್ತೇನೆ."

"ನೀವು ನನಗೆ ಬಹಳ ಉಪಕಾರ ಮಾಡುತ್ತಿರುವಿರಿ ಪಾಂಡು."

"ನಮ್ಮವರಿಗೆ ನಾವು ಸಹಾಯ ಮಾಡುವುದೂ ಒಂದು ಉಪಕಾರವೇ?"

ನಾರಾಯಣಸ್ವಾಮಿಯ ಲೇಖನಗಳನ್ನು ಮೆಚ್ಚಿಕೊಳ್ಳುತ್ತಿದ್ದವರಲ್ಲಿ ಇಂದುಮತಿಯೂ ಒಬ್ಬಳಾಗಿದ್ದಳು. ತನ್ನ ಸಹಪಾಠಿ ಇಷ್ಟು ಕೀರ್ತಿವಂತನಾಗುತ್ತಿರುವನಲ್ಲಾ ಎಂದು ಇಂದುಮತಿ ಸಂತೋಷ ಗೊಂಡಿದ್ದಳು.

'ಮುಟ್ಟಿದರೆ ಮುನಿ'ಯಾಗಿದ್ದ ನಾರಾಯಣಸ್ವಾಮಿ ತನ್ನ ಸಹಪಾಠಿಗಳ ಜತೆಯಲ್ಲಿಯೂ ಹೆಚ್ಚು ಸಖ್ಯವನ್ನು ಬೆಳಸಿಕೊಂಡಿರಲಿಲ್ಲ. ಪಾಠ ಪ್ರವಚನಗಳಿಗೆ ಸಂಬಂಧಪಟ್ಟ ಮಾತುಗಳಷ್ಟನ್ನೇ ಆಡಿ ಅವನು ಸಂಭಾಷಣೆ ಮುಗಿಸುತ್ತಿದ್ದ.

'ಜರ್ನಲ್'ನಲ್ಲಿ ಪ್ರಕಟವಾಗಿದ್ದ ಲೇಖನ ಇನ್‌ಸ್ಟಿಟ್ಯೂಟಿನಲ್ಲಿ ಕೋಲಾಹಲವನ್ನೆಬ್ಬಿಸಿತು. ಅವನ ಪ್ರೊಫೆಸರು ಲಿಮಯೆ ಕ್ಲಾಸಿನಲ್ಲೇ ಲೇಖನದ ಬಗ್ಗೆ ಪ್ರಸ್ತಾಪಿಸಿ ನಾರಾಯಣಸ್ವಾಮಿಗೆ ಅಭಿನಂದನೆ ಅರ್ಪಿಸಿದರು. ಕ್ಲಾಸು ಮುಗಿದೊಡನೆಯೇ ವಿದ್ಯಾರ್ಥಿಗಳು ನಾರಾಯಣ ಸ್ವಾಮಿಯನ್ನು ಸುತ್ತುಗಟ್ಟಿ ಅವನಿಗೆ 'ಕನ್‌ಗ್ರ್ಯಾಜುಲೇಷನ್ಸ್' (Congratulations) ತಿಳಿಸಿದರು.

ಇಂದುಮತಿ ಎಲ್ಲವನ್ನೂ ನೋಡುತ್ತಾ ದೂರದಲ್ಲಿಯೇ ನಿಂತಿದ್ದಳು. ಇಂದುಮತಿ ತನ್ನೊಂದಿಗೆ ಮಾತನಾಡಲು ಕಾಯುತ್ತಿದ್ದುದನ್ನು ಗ್ರಹಿಸಿದ ನಾರಾಯಣಸ್ವಾಮಿ, ವಿದ್ಯಾರ್ಥಿಮಿತ್ರರಿಂದ ಬಿಡುಗಡೆ

ಹೊಂದಿ, ಅವಳಿದ್ದಲ್ಲಿಗೆ ಬಂದು

" ನೀವು ನನಗೆ ಕನ್‌ಗ್ರ್ಯಾಜುಲೇಷನ್ಸ್ ಹೇಳುವುದಿಲ್ಲವೇ ಮಿಸ್. ಇಂದುಮತಿ " ಎಂದ.

" ಅದಕ್ಕಾಗಿಯೇ ನಾನು ಕಾಯುತ್ತಿದ್ದೇನೆ. ಕಟ್ಟರೆಯಾಗು ವಷ್ಟು ಕನ್‌ಗ್ರ್ಯಾಜುಲೇಷನ್ಸ್ ನಿಮಗೀಗಾಗಲೇ ಬಂದಿದೆ. ಪ್ರೊಫೆಸರೇ ಮೆಚ್ಚಿಕೊಂಡ ಮೇಲೆ ಇತರರ ಮಾತೇನು ? "

" ಇಷ್ಟು ಮೆಚ್ಚುಗೆಗೆ ಸ್ವಾಭಿಮಾನವೂ ಕಾರಣ. ನಮ್ಮ ಇನ್‌ಸ್ಟಿಟ್ಯೂಟಿನ ವಿದ್ಯಾರ್ಥಿ ಎಂದು ಹೆಮ್ಮೆ ಪಡುವುದು ಸ್ವಾಭಾವಿಕ."

" ಹಾಗಲ್ಲ ಮಿ. ಸ್ವಾಮಿ. ನಮ್ಮ ತಂದೆಯವರು ಕೂಡ ನಿಮ್ಮ ಲೇಖನ ಓದಿ ಬಹಳ ಸಂತೋಷಪಟ್ಟರು."

" ನಿಮ್ಮ ತಂದೆಯವರೂ ನನ್ನ ಲೇಖನ ಓದಿದರೇ ? "

" ಏಕೆ ? ಓದಬಾರದೇ ? "

" ಪುಸ್ತಕಗಳನ್ನು, ಪತ್ರಿಕೆಗಳನ್ನು ಓದುವುದಕ್ಕೆ ಶ್ರೀಮಂತರಿಗೆ ಪುರಸತ್ತೆಲ್ಲಿದೆ ? "

" ಶ್ರೀಮಂತರೆಂದರೆ ಕೇವಲ ಹಣ ಎಣಿಸುವ ಯಂತ್ರಗಳೆಂದು ಭಾವಿಸಿರುವಿರೇನು ? "

" ನಮ್ಮ ಕಡೆ ಶ್ರೀಮಂತರನ್ನು ನೋಡಿದರೆ ಆ ನಿರ್ಧಾರ ಅನಿವಾರ್ಯವಾಗುತ್ತದೆ. ಮುಂಬಯಿಯ ಶ್ರೀಮಂತರು ಹಾಗಿಲ್ಲ ವೆಂದು ಒಪ್ಪಿಕೊಳ್ಳಲು ನಾನು ಸಿದ್ಧವಾಗಿದ್ದೇನೆ."

"ಸೋಷಿಯಾಲಜಿ ಜರ್ನಲ್ ಪ್ರಕಟವಾಗುವ ಕಂಪೆನಿ ಸ್ಥಾಪಿಸು ವುದಕ್ಕೆ ನನ್ನ ತಂದೆಯೇ ಕಾರಣ. ಇಂದಿಗೂ ಅವರು ಕಂಪೆನಿಯ ಡೈರೆಕ್ಟರಾಗಿದ್ದಾರೆ."

ನಾರಾಯಣಸ್ವಾಮಿಯ ಕಿವಿ ನಿಮಿರಿತು. ಕಣ್ಣುಗಳನ್ನರಳಿಸಿ ಇಂದುಮತಿಯನ್ನು ನೋಡಿದ.

" ಏಕಿಷ್ಟು ಆಶ್ಚರ್ಯಪಡುತ್ತಿರುವಿರಿ ? "

" ನನ್ನ ಒರಟುತನಕ್ಕೆ ಪಶ್ಚಾತ್ತಾಪ ಪಡುತ್ತಿದ್ದೇನೆ."

"ಒರಟುತನವೆಲ್ಲಿಂದ ಬಂತು ?"

"ನೀವು ಇಷ್ಟು ಸುಸಂಸ್ಕೃತ ಕುಟುಂಬಕ್ಕೆ ಸೇರಿದವರೆಂದು ನನಗೆ ತಿಳಿದಿರಲಿಲ್ಲ.

"ಮುಂಬಯಿಯಲ್ಲಿ ಸಂಸ್ಕೃತಿಯೇ ಇಲ್ಲವೆಂದುಕೊಂಡಿದ್ದಿರಾ ?"

"ನಿಜ ಹೇಳಬೇಕಾದರೆ ಅದೇ ನನ್ನ ಅಭಿಪ್ರಾಯವಾಗಿತ್ತು. ಇಲ್ಲಿ ಎಲ್ಲರ ಬಾಯಲ್ಲಿಯೂ ಬರೀ ದುಡ್ಡಿನ ಮಾತು ಕೇಳಿ ಕೇಳಿ ಬೇಸರ ವಾಗಿತ್ತು."

"ನಮ್ಮ ತಂದೆಯವರೂ ದುಡ್ಡು ಗಳಿಸುವುದರಲ್ಲಿ ಆಸಕ್ತರಾಗಿದ್ದಾರೆ. ಆದರೆ ಅವರ ಆಸಕ್ತಿ ಕೇವಲ ದುಡ್ಡಿಗೇ ಮುಗಿದಿಲ್ಲ. ಸಾಹಿತ್ಯ, ಸಂಗೀತದಲ್ಲಿಯೂ ಅವರಿಗೆ ಅಭಿರುಚಿಯಿದೆ. ಸಹಸ್ರಾರು ರೂಪಾಯಿಗಳನ್ನು ಉತ್ತಮ ಸಂಸ್ಥೆಗಳಿಗೆ ದಾನ ಮಾಡಿದ್ದಾರೆ. ವಿದ್ಯಾದಾನದ ಬಗ್ಗೆ ಅವರು ತುಂಬ ಗೌರವವುಳ್ಳವರಾಗಿದ್ದಾರೆ."

"ಅವರ ಪರಿಚಯ ಮಾಡಿಕೊಳ್ಳಬೇಕು."

"ಅವರೂ ನಿಮ್ಮ ಪರಿಚಯ ಮಾಡಿಕೊಳ್ಳಬೇಕೆಂದಿದ್ದಾರೆ. ಮನೆಗೆ ಬರುವಿರೇನು ?"

"ಈಗವರಿಗೆ ಪುರಸತ್ತಿರುತ್ತದೆಯೇ ?"

"ನೀವು ಬಂದರೆ ಪುರಸತ್ತು ಮಾಡಿಕೊಳ್ಳುತ್ತಾರೆ."

ಇಂದುಮತಿಯ ಕಾರು ಇಬ್ಬರನ್ನೂ ಕಾಲ್ಬಾದೇವಿಗೆ ಕರೆತಂದಿತು. ಅಂದಚೆಂದವಿಲ್ಲದ, ಭೂತಾಕಾರದ, ನಾಲ್ಕು ಅಂತಸ್ತಿನ ಮನೆಯೊಂದರ ಮುಂದೆ ಕಾರು ನಿಂತಿತು. ಬಾಗಲಿನಲ್ಲಿ ಒಂದು ಕಂಚಿನ ಬೋರ್ಡ್ – 'ಮಂಗಳದಾಸ್ ಪಾರೀಖ್, ಇಂಡೋ – ಫಾರಿನ್ ಇಂಪೋರ್ಟ್ಸ್, ಎಕ್ಸ್‌ಪೋರ್ಟ್ಸ್ (Indo-Foreign Imports, Exports)' ಎಂದಿತ್ತು. ಬಾಗಿಲಿನಲ್ಲಿದ್ದ ಗುರ್ಖಾಸಿಪಾಯಿ, ಸಲಾಮು ಹೊಡೆದ.

ಒಳಗೆ ಪ್ರವೇಶಮಾಡಿದೊಡನೆಯೇ ಅಮೃತಶಿಲೆ ಹಾಸಲ್ಪಟ್ಟಿದ್ದ ನೆಲ – ಅದರ ಬದಿಗೆ ಎಲೆಕ್ಟ್ರಿಕ್ ಲಿಫ್ಟ್ – ಲಿಫ್ಟ್‌ಬಾಯ್ ಗೂಡಿನ ಬಾಗಿಲು ತೆಗೆದ. ಇಂದುಮತಿ ನಾರಾಯಣಸ್ವಾಮಿಯೊಂದಿಗೆ

ನಾಲ್ಕನೆಯ ಅಂತಸ್ತಿಗೆ ಹೋದಳು.

ಪಾರೀಖರ ದಿವಾನಖಾನೆ ದಿವ್ಯವಾಗಿ ಅಲಂಕೃತವಾಗಿತ್ತು. ಇತ್ತೀಚಿನ ಮಾದರಿಯ ಫರ್ನೀಚರುಗಳು, ದೊಡ್ಡ ರೇಡಿಯೋಗ್ರಾಮ್, ನೆಲದ ಮೇಲೆ ರತ್ನಗಂಬಳಿಗಳು. ಪ್ರಚ್ಛನ್ನ ದೀಪಾಲಂಕಾರ ದಿವಾನ ಖಾನೆಗೆ ವಿಶೇಷ ಶೋಭೆಯನ್ನುಂಟುಮಾಡಿತ್ತು.

ಇಂದುಮತಿ ನಾರಾಯಣಸ್ವಾಮಿಯನ್ನು ಕೂಡ ಹೇಳಿ ಒಂದೇ ನಿಮಿಷ ಒಳಗೆ ಹೋಗಿ ಬಂದು ಸೋಫಾದ ಪಕ್ಕದಲ್ಲಿದ್ದ ನಿಲುಫ್ಯಾನಿನ ಸ್ವಿಚ್ ಹಾಕಿ

"ತಂದೆಯವರಿದ್ದಾರೆಯೇ ನೋಡುತ್ತೇನೆ"

ಎನ್ನುತ್ತಾ ಎದುರಿನ ಮೇಜಿನ ಮೇಲಿದ್ದ ಫೋನ್‌ಗಳಲ್ಲಿ ಒಂದನ್ನು ಕೈಗೆ ತೆಗೆದುಕೊಂಡಳು.

ಘಂಟಾಭಾಜನವಾದಮೇಲೆ ಇಂದುಮತಿಯೇ ಗುಜರಾತಿಯಲ್ಲಿ ಮಾತನಾಡತೊಡಗಿದಳು. ಅತ್ತಕಡೆಯೂ ಯಾರೋ ಮಾತನಾಡು ತ್ತಿದ್ದರು. ಎರಡು ಮೂರು ನಿಮಿಷಗಳ ತರುವಾಯ ಇಂದುಮತಿ ಫೋನ್ ಕೆಳಗಿಟ್ಟು ಬಂದು

"ಇದ್ದಾರೆ. ಈಗಲೇ ಬರುತ್ತಾರಂತೆ" ಎಂದಳು.

"ಇದೇನು. ಎರಡು ಫೋನ್‌ಗಳಿವೆಯಲ್ಲ?"

"ಒಂದು ಒಳಫೋನ್ (Internal phone) ಇನ್ನೊಂದು ಹೊರಫೋನ್(External Phone). ತಂದೆಯವರ ಕಛೇರಿ ಮೊದಲನೆಯ ಅಂತಸ್ತಿನಲ್ಲಿದೆ."

"ನಿಮಗೆ ಸೋದರ ಸೋದರಿಯರೆಷ್ಟು ಮಂದಿ ಇದ್ದಾರೆ?"

"ಒಬ್ಬ ಅಣ್ಣ ಇದ್ದಾರೆ – ಒಬ್ಬ ಅಕ್ಕ ಇದ್ದಾಳೆ. ಕಲ್ಕತ್ತೆಯಲ್ಲಿ ತಂದೆಯವರ ಕಂಪೆನಿಯ ಬ್ರ್ಯಾಂಚ್ ಇದೆ. ಅಣ್ಣ ಅದರ ಮೇಲ್ವಿ ಚಾರಣೆ ನೋಡಿಕೊಳ್ಳುತ್ತಿದ್ದಾರೆ. ಮದರಾಸಿನಲ್ಲಿಯೂ ನಮ್ಮದೊಂದು ಬ್ರ್ಯಾಂಚ್ ಇದೆ. ಅದರ ಮೇಲ್ವಿಚಾರಣೆ ನನ್ನ ಭಾವ ನೋಡಿ ಕೊಳ್ಳುತ್ತಿದ್ದಾರೆ."

“ ತಾಯಿ .... ? ”

“ ಇದ್ದಾರೆ. ”

“ ನೀವು ಕಾಲ್ಬಾದೇವಿಯಲ್ಲಿರಬಹುದೆಂದು ನಾನು ನಿರೀಕ್ಷಿಸಿರಲಿಲ್ಲ.”

“ ಏಕೆ ? ”

“ ಶ್ರೀಮಂತರು ವಾಸಮಾಡುವುದು ಮಲಬಾರ್ ಹಿಲ್ಸ್‌ನಲ್ಲಿಯಲ್ಲವೇ ? ”

“ ತಂದೆಯವರು ಒಣ ಆಡಂಬರಪ್ರಿಯರಲ್ಲ. ಈ ಮನೆಯಲ್ಲಿ ಅವರ ವ್ಯಾಪಾರ ಆರಂಭಿಸಿದರಂತೆ. ಅವರ ಯಶಸ್ಸು ಇಲ್ಲಿಯೇ ಸಾಧಿಸಿದುದರಿಂದ ಈ ಮನೆ ಬಿಡಲು ಅವರ ಮನಸ್ಸೊಪ್ಪಲಿಲ್ಲ. ಹಳೆಯ ಮನೆಯನ್ನೇ ಕೊಂಡು ವಿಶಾಲವಾಗಿ ಕಟ್ಟಿಸಿದರು. ಮನೆ ಈಗ ತಂದೆಯವರ ಕಛೇರಿ, ಗೋಡೌನ್ ಆಗಿದೆ. ಮನೆ, ಕಛೇರಿ ಒಂದೇ ಕಡೆಗಿರುವುದರಿಂದ ವಿಶೇಷ ಅನುಕೂಲವಾಗಿದೆ.”

“ ಇಷ್ಟು ದೊಡ್ಡಮನೆಯನ್ನು ನೀವೇ ಸ್ವಂತಕ್ಕೆ ಇಟ್ಟುಕೊಂಡಿರುವಿರಾ ? ”

“ ಹೌದು – ಒಂದು ಫ್ಲೋರೆಲ್ಲಾ ತಂದೆಯವರ ಕಛೇರಿಗೇ ಮೀಸಲಾಗಿದೆ” ಎಂದಳು.

ಇಂದುಮತಿ ತಂದೆ ಮಂಗಳದಾಸರು ಬಂದರು. ತಂದೆಗೆ ನಾರಾಯಣಸ್ವಾಮಿಯ ಪರಿಚಯವನ್ನು ಇಂದುಮತಿ ಮಾಡಿಕೊಟ್ಟಳು. ಮಂಗಳದಾಸರು

“ ಚಹಾ ಆಯಿತೇ ? ” ಎಂದು ಕೇಳಿದರು.

“ ಇಲ್ಲ ದಾದಾ. ನೀವೂ ಬರಲಿ ಎಂದು ಕಾದಿದ್ದೇವೆ. ”

“ ಬನ್ನಿ ಒಳಗೇ ಹೋಗೋಣ. ”

ಎಂದು ನಾರಾಯಣಸ್ವಾಮಿ, ಇಂದುಮತಿಯೊಡನೆ ಭೋಜನ ಗೃಹಕ್ಕೆ ನಡೆದರು.

ಮೇಜಿನ ಮೇಲೆ ಬಗೆಬಗೆಯ ಹಣ್ಣುಗಳು, ಹಲವಾರು ಸಿಹಿ

ಪದಾರ್ಥಗಳು, ಸೇವು, ಫಾಟಿಯಾ, ಚೂಡಾ, ಬಿಸ್ಕತ್ತು ಇಡಲ್ಪಟ್ಟಿದ್ದವು.

ಮಂಗಳದಾಸರು ಅಗ್ರಸ್ಥಾನದಲ್ಲಿ ಕುಳಿತು

" ತೆಗೆದುಕೊಳ್ಳಿ " ಎಂದರು.

ಇಂದುಮತಿ ತಂದೆಯಮುಂದೆ ಬಿಸ್ಕತ್ತಿನ ತಟ್ಟೆ ಹಿಡಿದಳು

" ನನಗೆ ಸ್ವಲ್ಪ ಚಹಾ ಕೊಡು ಇಂದು. ನೀವು ಉಪಹಾರ ತೆಗೆದು ಕೊಳ್ಳಿ " ಎಂದರು.

ಇಂದುಮತಿ ತಂದೆಗೆ ಚಹಾ ಬೆರಸಿಕೊಟ್ಟಳು.

ಮಂಗಳದಾಸರು ನಾರಾಯಣಸ್ವಾಮಿ ಕಡೆ ತಿರುಗಿ

" ನೀವು ಬಂದದ್ದು ಬಹಳ ಸಂತೋಷವಾಯಿತು. ಜರ್ನಲ್‌ನಲ್ಲಿ ಬಂದ ನಿಮ್ಮ ಲೇಖನ ನೋಡಿ ನನಗೆ ಆನಂದವಾಯಿತು."

" ತಮ್ಮ ಆಶೀರ್ವಾದ."

" ಇಂದು ನಿಮ್ಮ ವಿಷಯ ಬಹಳ ಹೇಳಿ, ನಿಮ್ಮನ್ನು ಸುಪರಿಚಿತರನ್ನಾಗಿ ಮಾಡಿದ್ದಾಳೆ. ಆಗಾಗ್ಗೆ ಬರುತ್ತಿರಿ. ನನ್ನದೂ ಸಣ್ಣ ಪುಸ್ತಕ ಭಂಡಾರವಿದೆ. ನಿಮಗೆ ಪ್ರಯೋಜನವಾಗುವ ಹಾಗಿದ್ದರೆ ಉಪಯೋಗಿಸಿಕೊಳ್ಳಿ."

" ತುಂಬ ಉಪಕಾರವಾಯಿತು ಸರ್."

" ಜರ್ನಲ್‌ನಲ್ಲಿ ನೀವು ಬರೆದಿರುವ ಲೇಖನವನ್ನೇ ವಿಸ್ತರಿಸಿ ಗ್ರಂಥ ಬರೆಯಿರಿ. ಗಾಂಧೀಜಿಯವರ ಟ್ರಸ್ಟಿಥಿಯರಿಯನ್ನು (Trusty theory) ನೀವು ವಿಮರ್ಶೆಮಾಡುವುದೊಳ್ಳೆಯದು. ಅವರ ಸೂತ್ರ ಸಾರ್ವತ್ರಿಕವಾಗಿ ಒಪ್ಪಿಗೆಯಾದರೆ ಕೂಲಿಗಾರ, ಬಂಡವಾಳಗಾರ ಸಮಸ್ಯೆ ಬಗೆಹರಿಯುತ್ತದೆ."

" ತಮ್ಮ ಸಲಹೆ ಯೋಗ್ಯವಾಗಿದೆ."

ಮಂಗಳದಾಸರು ಚಹಾ ಕಪ್ಪು ಕೆಳಗಿಟ್ಟು ಗಡಿಯಾರ ನೋಡಿ ಕೊಂಡು

" ಕ್ಷಮಿಸಿ ನಾನು ಹೋಗಬೇಕಾಗಿದೆ. ಲಾಂಗ್ ಡಿಸ್ಟೆನ್ಸ್ ಕಾಲ್ (Long distance call) ನಿರೀಕ್ಷಿಸುತ್ತಿದ್ದೇನೆ. ಇಂದೂ,

ಅತಿಥಿಗಳನ್ನು ಸರಿಯಾಗಿ ನೋಡಿಕೋ "

ಎಂದು ಹೇಳಿ ಹೊರಟು ಹೋದರು. ಇಂದುಮತಿ ನಾರಾಯಣ ಸ್ವಾಮಿಯ ಕಡೆ ತಿರುಗಿ

"ತಂದೆಯವರು ಹೆಚ್ಚು ಮಾತನಾಡುವ ಸ್ವಭಾವದವರಲ್ಲ. ಅವರ ನಡವಳಿಕೆ ನಿಮಗೆ ಸೋಜಿಗವನ್ನುಂಟುಮಾಡಿರಬೇಕು."

"ಇಲ್ಲ. ಮಿಸ್. ಇಂದುಮತಿ. ಕಾಲದ ಬೆಲೆಯನ್ನವರು ಅರಿತಿರುವುದರಿಂದಲೇ ಇಷ್ಟು ಯಶಸ್ವಿಗಳಾಗಿರುವುದು. ಅವರ ಸಾರಳ್ಯ ನನ್ನ ಮನಸ್ಸಿಗೆ ತುಂಬ ಸಂತೋಷವನ್ನುಂಟುಮಾಡಿತು. ಅವರ ಮಾತುಕತೆ, ಉಡುಪುಗಳೆಲ್ಲದರಲ್ಲಿಯೂ ಸೌಜನ್ಯ ವ್ಯಕ್ತ ವಾಗುತ್ತದೆ."

"ತಂದೆಯವರು ನಿಜವಾದ ಗಾಂಧೀಭಕ್ತರು. ಟ್ರಸ್ಟಿ ಥಿಯರಿ ಯನ್ನು ಅವರು ಮನಃಪೂರ್ವಕವಾಗಿ ಆದರಿಸುವುದಲ್ಲದೆ ಅದರಂತೆ ಆಚರಿಸುತ್ತಾರೆ. ತಂದೆಯವರು ಹೇಳಿದ ಕೆಲಸವೇನುಮಾಡುವಿರಿ?"

"ಯಾವುದು? ಪುಸ್ತಕ ಬರೆಯುವುದೇ?"

"ಹೌದು."

"ಅವಶ್ಯಕವಾಗಿ ಕೈಗೊಳ್ಳುತ್ತೇನೆ."

"ಅದರ ಪ್ರಕಟನೆಯ ಬಗ್ಗೆ ನೀವು ಯೋಚಿಸಬೇಡಿ. ಜರ್ನಲ್ ನಡಸುತ್ತಿರುವ ಕಂಪನಿಯೇ ಅದನ್ನು ಪ್ರಕಟಿಸುವಂತೆ ಮಾಡೋಣ."

"ಆಗಬಹುದು' ಮಿಸ್. ಇಂದುಮತಿ. ಇನ್ನು ನಾನು ಹೊರಡಲಪ್ಪಣೆಯೇ?"

"ಪುನಃ ಯಾವಾಗ ಬರುವಿರಿ?"

"ನೀವು ಬಾರೆಂದಾಗ ಬರುತ್ತೇನೆ."

"ಶನಿವಾರ ರಾತ್ರಿ ಇಲ್ಲಿಯೇ ಊಟಕ್ಕೆ ಬಂದುಬಿಡಿ. ತಂದೆ ಯವರಿಗೂ ಪುರಸತ್ತಿರುತ್ತದೆ. ಸಾವಕಾಶವಾಗಿ ಮಾತನಾಡಬಹುದು."

"ಆಗಬಹುದು"

ಎಂದು ನಾರಾಯಣಸ್ವಾಮಿ ಒಪ್ಪಿಕೊಂಡ.

ಇಂದುಮತಿ ತನ್ನ ಕಾರಿನಲ್ಲೇ ನಾರಾಯಣಸ್ವಾಮಿಯನ್ನು ಮನೆಗೆ ಕಳುಹಿಸಿಕೊಟ್ಟಳು.

ನಾರಾಯಣಸ್ವಾಮಿಯ ಆನಂದಕ್ಕೆ ಪಾರವೇ ಇರಲಿಲ್ಲ. ತನ್ನ ಆಶೆಯಗೋಪುರ ಮೇಲಕ್ಕೇಳುತ್ತಿದ್ದುದನ್ನು ಕಂಡು ಅವನ ಮನಸ್ಸಿಗೆ ತೃಪ್ತಿಯಾಯಿತು.

ಅಂದು ಪಾಂಡುವನ್ನು ನಾರಾಯಣಸ್ವಾಮಿ ಕಂಡರೂ ಅವನಿಗೆ ತಾನು ಇಂದುಮತಿಯ ಮನೆಗೆ ಹೋಗಿ ಮಂಗಳದಾಸರನ್ನು ಕಂಡ ವಿಷಯ ಹೇಳಲಿಲ್ಲ.

ನಾರಾಯಣಸ್ವಾಮಿಯ ಮನೋಭಾವದಲ್ಲಿ ಸೂಕ್ಷ್ಮವಾದ ಬದಲಾವಣೆ ಉಂಟಾಗಿತ್ತು. ತನ್ನ ಅಭ್ಯುದಯಕ್ಕೆ ಪಾಂಡುವಿನ ಅಗತ್ಯ ಅನಿವಾರ್ಯವಲ್ಲವೆಂಬುದು ಅವನ ಮನವರಿಕೆಯಾಗಿತ್ತು. ಮಂಗಳದಾಸರ ಕಟಾಕ್ಷ ದೊರಕಿಸುವ ಚಿಂತಾಮಗ್ನನಾದ ಅವನಿಗೆ ಪಾಂಡುವಿನ ಸ್ನೇಹಸಂಬಂಧ ಅಷ್ಟು ಗಣ್ಯವಾದುದಾಗಿ ಕಂಡುಬರಲಿಲ್ಲ.

ಆದರೆ ನಾರಾಯಣಸ್ವಾಮಿ ತನ್ನ ವರ್ತನೆಯಲ್ಲಿ ಸ್ವಲ್ಪವೂ ವ್ಯತ್ಯಾಸ ತೋರಿಸಲಿಲ್ಲ. ಪಾಂಡುವಿನೊಂದಿಗೆ ಯಥಾಕ್ರಮದಂತೆ ಇಸ್ಪೇಟಿಗೆ ಕೂಡುವನು, ಹರಟುವನು, ನಗುವನು, ಕಾಫಿ ಕುಡಿಯುವನು. ಅವನಲ್ಲಿ ಉಂಟಾಗಿದ್ದ ಸೂಕ್ಷ್ಮ ವ್ಯತ್ಯಾಸವನ್ನು ಪಾಂಡು ಗಮನಿಸಲು ಸಾಧ್ಯವಾಗಲಿಲ್ಲ.

ಪರೀಕ್ಷೆ ಮುಗಿಸಿಕೊಂಡು ಬೇಸಿಗೆಯ ರಜಕ್ಕೆ ಕಮಲ ಊರಿಗೆ ಬಂದಳು. ತಾನು ಮುಂಬಯಿ ಬಿಡುವುದು ಸಾಧ್ಯವಿಲ್ಲವೆಂದು ನಾರಾಯಣಸ್ವಾಮಿ ಬರೆದಿದ್ದ. ಕೂಲಿಗಾರರ ಆಸ್ಪತ್ರೆಯ ಪಾಯದ ಕೆಲಸ ಸಾಗಿತ್ತು. ಹನುಮಯ್ಯನವರೂ, ಕರಿಯಪ್ಪಗೌಡರೂ ಆಸ್ಪತ್ರೆಯ ನಿರ್ಮಾಣಕ್ಕಾಗಿ ತಮ್ಮ ಸಂಪೂರ್ಣ ವೇಳೆಯನ್ನು ನಿವೇದಿಸಿದ್ದರು.

ಮಾಧವರಾಯನ ಆರೋಗ್ಯ ರುಕ್ಮಿಣಿಗೂ ಗೋದಮ್ಮನವರಿಗೂ ಚಿಂತೆಗೆ ಕಾರಣವಾಯಿತು. ಮೂಲವ್ಯಾಧಿ ಕಾಣಿಸಿಕೊಂಡು

ರಕ್ತಸ್ರಾವ ಆರಂಭವಾಗಿತ್ತು. ಕೂಡುವುದಕ್ಕಾಗದು, ನಿಲ್ಲುವುದಕ್ಕಾಗದು. ಕೋರ್ಟಿಗೆ ಹೋಗಿಬಂದರೆ ಮಾಧವರಾಯ ಹಣ್ಣಾಗಿ ಬಿಡುತ್ತಿದ್ದ. ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರೇ ಚಿಕಿತ್ಸೆ ಕೈಗೊಂಡರು. ಅವರ ಇಂಜಕ್ಷನ್ನುಗಳಿಗೆ ಬೇನೆ ಮಣಿಯಲಿಲ್ಲ.

ಬೇಸಿಗೆ ಕಳೆಯುವುದರೊಳಗಾಗಿ ಮಾಧವರಾಯ ಅಸ್ವಾವಸ್ಥೆಗೊಂಡು ತುಂಬ ದುರ್ಬಲನಾದ. ರುಕ್ಮಿಣಿಯ ಮನಸ್ಸಿಗೆ ವ್ಯಥೆಯಾಗುತ್ತದೆಂದು ಅವನು ತನ್ನ ರೋಗದ ಸ್ವರೂಪವನ್ನು ಬಹಿರಂಗಪಡಿಸಿರಲಿಲ್ಲ. ಪ್ರತಿನಿತ್ಯ ಒಂದು ಪಾವಿನಷ್ಟು ರಕ್ತ ಕಳೆದುಕೊಂಡು ಮಾಧವರಾಯ ಅರೆಜೀವ ಕೊರೆಜೀವವಾಗಿಬಿಟ್ಟಿದ್ದ.

ಕಾಲೇಜ್ ಬಾಗಿಲು ತೆಗೆದುದರಿಂದ ಕಮಲ ಮೈಸೂರಿಗೆ ಹೋಗಲೇಬೇಕಾಯಿತು. ಅವಳು ಪ್ರಯಾಣ ಮಾಡಿದ ಎಂಟೇ ದಿವಸಕ್ಕೆ ಮಾಧವರಾಯ ಹಾಸಿಗೆ ಹಿಡಿದು ಮಲಗಿಬಿಟ್ಟ.

' ಮುಂದೇನು ಗತಿ ' ಎಂಬ ಚಿಂತೆ ರುಕ್ಮಿಣಿಯನ್ನು ಕಬಳಿಸಿತು.

' ಮುಂದೇನು ಗತಿ ' ಎಂದು ಮಾಧವರಾಯ ಒಳಗೇ ಕುದಿಯಲಾರಂಭಿಸಿದ.

' ಆಸ್ತಿ ಮಾಡುವುದಂತಿರಲಿ. ಸಾಲ ಮಾಡಿಟ್ಟಿರುವೆನಲ್ಲಾ. ನಾಳೆ ರುಕ್ಮಿಣಿಯ ಗತಿಯೇನು – ಅಮ್ಮನ ಗತಿಯೇನು – ಕಮಲನ ಗತಿಯೇನು '

ಎಂದು ಚಿಂತಿಸಿ ಚಿಂತಿಸಿ ಮಾಧವರಾಯ ಮತ್ತಷ್ಟು ಮೆತ್ತಗಾಗುತ್ತ ಬಂದ.

' ಶಸ್ತ್ರ ಚಿಕಿತ್ಸೆ ಆಗಲೇಬೇಕು ' ಎಂದು ಡಾಕ್ಟರು ಹೇಳಿದರು. ಮಾಧವರಾಯ, ರುಕ್ಮಿಣಿ ಇಬ್ಬರೂ ಅವರ ಸಲಹೆಯನ್ನು ಸುತರಾಂ ಒಪ್ಪಲಿಲ್ಲ.

ಸೊಸೆಗೆ ಧೈರ್ಯ ಹೇಳುತ್ತಾ ಗೋದಮ್ಮನವರು

" ಡಾಕ್ಟರುಗಳ ಕೈಯಲ್ಲಿ ಏನಾಗುತ್ತದೆಂಬುದು ನಮಗೆ ಚೆನ್ನಾಗಿ ತಿಳಿದಿದೆಯಲ್ಲ ರುಕ್ಕೂ. ನೀನೂ ಏಕೆ ಡಾಕ್ಟರುಗಳನ್ನು ಅವಲಂಬಿ

ಸುತ್ತೀ ? ”

“ ಇನ್ನೇನು ಮಾಡಲಿ ಅಮ್ಮ ? ”

“ ಮಾಧೂಗೆ ನೀನೇ ಔಷಧ ಏಕೆ ಕೊಡಬಾರದು ? ”

“ ನನಗೆ ಧೈರ್ಯವಾಗದು ಅಮ್ಮ.”

“ ಅವನ ಪ್ಕೃಗೆ ನಿನ್ನ ಔಷಧವಲ್ಲದೆ ಇನ್ನು ಯಾವದೂ ಹಿಡಿಯುವುದಿಲ್ಲ ರುಕ್ಕೂ.”

“ ಡಾಕ್ಟರು ತುಂಬ ಮುತುವರ್ಜಿ ವಹಿಸುತ್ತಿದ್ದಾರೆ.”

“ ಡಾಕ್ಟರು ಒಳ್ಳೆಯವರು. ಆದರೆ ಅವರೇನು ಮಾಡಬಲ್ಲರು. ಇದು ಅವರ ಔಷಧಗಳಿಗೆ ಮಣಿಯುವ ವ್ಯಾಧಿಯಲ್ಲ.”

“ ಇನ್ನೂ ಕೆಲವು ದಿವಸ ನೋಡೋಣ.”

ಎಂದು ರುಕ್ಮಿಣಿ ಅತ್ತೆಗೆ ಸಮಾಧಾನ ಹೇಳಿದಳು. ಡಾಕ್ಟರ ಚಿಕಿತ್ಸೆಯೂ ಮುಂದುವರಿಯಿತು. ಮೂರು ತಿಂಗಳ ಸತತ ಪ್ರಯತ್ನದಿಂದ ಡಾಕ್ಟರು ರಕ್ತಸ್ರಾವವನ್ನು ಕಡಿಮೆಮಾಡಿದ್ದರು. ಆದರೆ ರೋಗದ ಬೇರು ಸುಭದ್ರವಾಗಿತ್ತು.

ಕೊನೆಗೆ ಡಾಕ್ಟರು ಸಿಧಾ೯ರವಾಗಿ

“ ಆಪರೇಷನ್ ಮಾಡದೆ ಬರೀ ಚಿಕಿತ್ಸೆಯಿಂದ ಏನೂ ಪ್ರಯೋಜನವಿಲ್ಲ. ಔಷಧಗಳೆಲ್ಲಾ ತಾತ್ಕಾಲಿಕ ಉಪಶಾಂತಿಯನ್ನು ಮಾಡುತ್ತವೆ. ರೋಗ ನಿವಾರಣೆ ಅವುಗಳಿಂದ ಆಗುವುದಿಲ್ಲ ” ಎಂದುಬಿಟ್ಟರು.

ರುಕ್ಮಿಣಿ ತಾನೇ ಚಿಕಿತ್ಸೆ ಕೈಗೊಳ್ಳುವುದು ಅಪರಿಹಾರ್ಯವಾಯಿತು.

ತನ್ನ ಶುಕ್ರವಾರದ ಪೂಜೆ ಸಾಂಗವಾಗಿ ಮುಗಿಸಿ, ದೇವರಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸಿಕೊಂಡು ರುಕ್ಮಿಣಿ ಅತ್ತೆಗೆ

“ ಅಮ್ಮ ಇವತ್ತಿನಿಂದ ನಾನೇ ಚಿಕಿತ್ಸೆ ಕೈಗೊಳ್ಳುತ್ತೇನೆ” ಎಂದಳು.

“ ಇನ್ನು ನೋಡುವೆಯಂತೆ. ಮಾಧೂ ಆರೋಗ್ಯ ಹೇಗೆ ಸುಧಾರಿಸುತ್ತೆಂಬುದನ್ನು.”

“ ನಿಮ್ಮಲ್ಲಿ ಒಂದು ಅರಿಕೆಮಾಡಿಕೊಳ್ಳಬೇಕಾಗಿದೆ.”

"ಹೇಳು ತಾಯಿ."

"ನನ್ನ ಕೆಲವು ಹರಕೆಗಳಿವೆ. ಅವುಗಳನ್ನು ನೀವು ನಡೆಸಿ ಕೊಡಬೇಕು."

"ನಿನ್ನ ಮಾತಿಗೆ ನಾನು ಪ್ರತಿ ಹೇಳುವನೇನೇ ರುಕ್ಕೂ."

"ಇಲ್ಲಮ್ಮ – ಯಾವದಕ್ಕೂ ನಿಮ್ಮನ್ನು ನಾನು ಆಕ್ಷೇಪಿಸುವುದಿಲ್ಲ. ಪೂರ್ವಜನ್ಮದಲ್ಲಿ ನಾನು ಮಾಡಿದ ಪುಣ್ಯವೇ ಅತ್ತೆಯ ರೂಪು ಹೊತ್ತಿದೆ. — ಆದರೆ ನನ್ನ ಹರಕೆಗೆ ನೀವು ಅಡ್ಡಿಪಡಿಸುವಿರೇನೋ ಎಂಬ ಅಧೈರ್ಯವಿರುವುದರಿಂದ ನಾನು ಆ ಮಾತು ಆಡಬೇಕಾಯಿತು."

"ಹರಕೆಯೇನು ?"

"ಇಂದಿನಿಂದ ನಾನು ಉಪವಾಸವ್ರತ ಪರಿಗ್ರಹಿಸುತ್ತೇನೆ."

"ಹಾ ! ಇದು ಉಪವಾಸವಲ್ಲ – ಪ್ರಾಯೋಪವೇಶ. ನಿನ್ನ ಜೀವಕೊಟ್ಟು ಮಾಧು ಜೀವ ಉಳಿಸಬೇಕೆಂದಿರುವೆಯಾ ?"

"ಹಾಗಲ್ಲಮ್ಮ – ಹಾಲು ಹಣ್ಣು ಸ್ವೀಕರಿಸುತ್ತೇನೆ. ಈಗಲೇ ಪ್ರಾಣ ಒಪ್ಪಿಸಲು ನಾನು ಸಿದ್ಧವಾಗಿಲ್ಲ."

"ರುಕ್ಕೂ. ಉಪವಾಸಮಾಡಿಯೇ ನೀನು ಭಗವಂತನನ್ನು ಮೆಚ್ಚಿಸಬೇಕೇ ? ನಿನ್ನ ಉಪವಾಸಕ್ಕಿಂತಲೂ ನಿನ್ನ ಭಕ್ತಿ, ತ್ಯಾಗ, ಶ್ರದ್ಧೆ, ದೊಡ್ಡದೆಂದು ತಿಳಿಯಲಾರದ ಮೂಢನೇ ಭಗವಂತ. ಬೇಡ ತಾಯಿ – ಉಪವಾಸವ್ರತ ಹಿಡಿಯಬೇಡ."

"ಭಗವತ್ಪ್ರೇರಣೆಗೆ ವಿರುದ್ಧವಾಗಿ ಹೋಗಲೇ ?"

"ಸಂಕಲ್ಪ ಮಾಡಿರುವೆಯಾ ?"

"ಸಂಕಲ್ಪ ಮಾಡಿಯೇ ಚಿಕಿತ್ಸೆಯ ಜವಾಬ್ದಾರಿ ಹೊತ್ತು ಕೊಂಡುದು."

"ಶ್ರೀಹರಿಯ ಇಚ್ಛೆ. ನಿನಗೆ ತಿಳಿದಂತೆ ಮಾಡು ತಾಯಿ."

"ಅವರ ಕಿವಿಗೆ ಈ ವಿಷಯ ಬೀಳಬಾರದು."

"ಅವನಿಗೆ ಗುಣವಾದಮೇಲೆ ...."

"ಆಗ ತಿಳಿದರೆ ಚಿಂತೆಯಿಲ್ಲ."

" ನಿನ್ನ ಮಾತಿಗೆ ಒಪ್ಪದೆ ವಿಧಿಯೇ ಇಲ್ಲ."

" ಹೌದಮ್ಮಾ – ವಿಧಿಯಿಲ್ಲ."

ಗೋದಮ್ಮನವರು ಮೌನ ಸಮ್ಮತಿ ಸೂಚಿಸಿದರು.

ರುಕ್ಮಿಣಿ ಚಿಕಿತ್ಸೆ ಆರಂಭಿಸಿದ ಕೂಡಲೇ ರಕ್ತಸ್ರಾವ ಪೂರ್ವ ಸ್ಥಿತಿಗೆ ಬಂದಿತು. ಗಾಬರಿಯಾದ ಗೋದಮ್ಮನವರಿಗೆ ರುಕ್ಮಿಣಿ ಸಮಾಧಾನ ಹೇಳುತ್ತಾ

" ಕೆಲವು ದಿವಸ ಹೀಗಾಗುತ್ತದಮ್ಮ. ಡಾಕ್ಟರ ಔಷಧ, ಇಂಜಕ್ಷನ್ನುಗಳಪ್ರಭಾವ ಹೋದಮೇಲೆ ನನ್ನ ಔಷಧ ಹಿಡಿಯುವುದು" ಎಂದಳು.

ರುಕ್ಮಿಣಿಯ ನಿರೀಕ್ಷೆ ವಿಫಲವಾಗಲಿಲ್ಲ. ಎರಡು ವಾರಗಳಲ್ಲಿ ರಕ್ತಸ್ರಾವ ಸಂಪೂರ್ಣವಾಗಿ ನಿಂತು ಹೋಯಿತು. ಆದರೆ ಬಾಧೆ ಇಳಿಯಲಿಲ್ಲ. ಒಮ್ಮೊಮ್ಮೆ ಯಾತನೆ ಬಂದಾಗ ಮಾಧವರಾಯ ಗಟ್ಟಿಯಾಗಿ ಚೀರುವನು. ಅವನ ಸಂಕಟ ನೋಡುವುದು ದುಸ್ಸಾಧ್ಯ ವಾಗಿತ್ತು.

ಊರು ಊರುಗಳಿಂದ ಬಂಧುಗಳು, ಇಷ್ಟ ಮಿತ್ರರು ಬಂದು ನೋಡಿಕೊಂಡು ಹೋಗುತ್ತಿದ್ದರು.

ಬಂದವರು

' ಸಮಾಧಾನ ಹೇಳುತ್ತಿದ್ದರು.

ಧೈರ್ಯ ಹೇಳುತ್ತಿದ್ದರು.

ಸಹಾನುಭೂತಿ ವ್ಯಕ್ತಮಾಡುತ್ತಿದ್ದರು.

ವಿಶ್ವಾಸ ತೋರಿಸುತ್ತಿದ್ದರು.'

ಆದರೆ ಯಾರೂ ಮಾಧವರಾಯನ ಯಾತನೆ ಕಡಿಮೆಮಾಡಲಿಲ್ಲ.

ಗೌಡರು, ಷರೀಫ್ ಸಾಹೇಬರು, ಸುಂದರಂ, ಶೇಷಪ್ಪ ಪ್ರತಿನಿತ್ಯ ಬಂದು ಮಾಧವರಾಯರನ್ನು ನೋಡಿಕೊಂಡು ಹೋಗುತ್ತಿದ್ದರು.

ಒಂದು ದಿನ ಮಾಧವರಾಯ ಶೇಷಪ್ಪನೊಬ್ಬನನ್ನೇ ಬರಮಾಡಿ ಕೊಂಡು

"ನಿಮ್ಮಲ್ಲಿ ನಾನು ಕೆಲವು ಗೃಹಕೃತ್ಯದ ವಿಷಯಗಳನ್ನು ಗೋಪ್ಯವಾಗಿ ಮಾತನಾಡಬೇಕಾಗಿದೆ ಶೇಷಪ್ಪ" ಎಂದ.

"ಹೇಳಿ ಸರ್."

"ನಮ್ಮ ಮಾತು ನಮ್ಮಲ್ಲಿಯೇ ಇರಬೇಕು. ಹೊರಗೆ ಯಾರ ಕಿವಿಗೂ ಬೀಳಬಾರದು."

"ಹಾಗೇ ಆಗಲಿ."

"ಈ ಸಾರೆ ನಾನು ಹಾಸಿಗೆ ಬಿಟ್ಟು ಏಳುವ ಸಂಭವವಿಲ್ಲ ಶೇಷಪ್ಪ."

"ಹಾಗನ್ನಬೇಡಿ ಸರ್. ಅಮ್ಮಾವರ ಚಿಕಿತ್ಸೆಯಿಂದ ನಿಮಗೆ ಪೂರ್ಣ ಗುಣವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ."

"ಇದು ಎಂಥ ಬಾಳು ಶೇಷಪ್ಪ. ಈ ವಯಸ್ಸಿಗೇ ನಾನು ಇಷ್ಟು ಜೀರ್ಣವಾಗಿ ಅಸ್ವತಂತ್ರನಾಗಿಬಿಟ್ಟೆ."

"ಚಿಂತೆ ಮಾಡಿ ಏನು ಸಾರ್ಥಕ ಸರ್. ನೀವು ಅಧೀರರಾದರೆ ಅಮ್ಮಾವರ ಜಂಘಾಬಲವೇ ಉಡುಗಿಹೋಗುತ್ತದೆ. ಅವರಿಗಾಗಿ ಯಾದರೂ ನೀವು ಧೈರ್ಯ ತಂದುಕೊಳ್ಳಬೇಕು."

"ನನ್ನ ಸ್ಥಿತಿ ಏನಾದರೂ ಆಗಲಿ. ರುಕ್ಮಿಣಿಯನ್ನು ಪರಾಧೀನ ಮಾಡಲು ನನಗಿಷ್ಟವಿಲ್ಲ ಶೇಷಪ್ಪ."

"ವಯಸ್ಸಿಗೆ ಬಂದ ಮಗನಿರುವಾಗ ಪರಾಧೀನದ ವಿಷಯ ನೀವು ಯೋಚಿಸಬೇಕಾಗಿಲ್ಲ."

"ಎಂಥ ಮಗ ಬಿಡಿ ಶೇಷಪ್ಪ. ಮಕ್ಕಳಿಗೆ ತಂದೆಯ ದುಡ್ಡು ಒಂದು ಬೇಕಲ್ಲದೆ ಇನ್ನೇನೂ ಬೇಕಾಗಿಲ್ಲ. ದುಡ್ಡು ಕೇಳದೆ ನಾರಾಯಣಸ್ವಾಮಿ ಒಂದು ಕಾಗದವನ್ನೂ ಬರೆಯುವುದಿಲ್ಲ."

"ಮುಂಬಯಿಯಲ್ಲಿ ಬಹಳ ಖರ್ಚು ಬರುತ್ತದೆ ಸರ್."

"ಖರ್ಚು ಮಾಡಿಕೊಂಡು ಇವನನ್ನು ಮುಂಬಯಿಯಲ್ಲಿ ಕುಳಿತುಕೊಳ್ಳೆಂದವರು ಯಾರು ?"

"ಅವನ ಜೀವನ ಅವನು ರೂಪಿಸಿಕೊಳ್ಳಬೇಕಾಗಿದೆ."

"ಹೌದು. ಮನೆ ಮಂದಿಯ ಪ್ರೇತಗಳ ಮೇಲಲ್ಲ. ತಿಂಗಳು ತಿಂಗಳಿಗೆ ಅವನಿಗೆ ಇನ್ನೂರು, ಮುನ್ನೂರು ರೂಪಾಯಿ ಒದಗಿಸ ಬೇಕೆಂದರೆ ನನ್ನ ಕಣ್ಣಲ್ಲಿ ರಕ್ತ ಬರುತ್ತದೆ. ಮದುವೆಯ ಸಾಲ ಹಾಗೇ ಕೂತಿದೆ. ನಾರಾಯಣಸ್ವಾಮಿ ಮುಂಬಯಿಯಲ್ಲಿ ಕಡಿದು ಕಟ್ಟಿ ಹಾಕುವುದಕ್ಕೆ ಸಾಕಷ್ಟು ಸಾಲವಾಗಿದೆ. ಇವಿಷ್ಟು ಸಾಲದೆಂದು ಈ ರೋಗ ಬೇರೆ ನನ್ನನ್ನು ಕಿತ್ತುಕೊಂಡು ತಿನ್ನುತ್ತಿದೆ. ನಾನೊಂದು ನಿರ್ಧಾರಕ್ಕೆ ಬಂದಿದ್ದೇನೆ – ಅದಕ್ಕೆ ನಿಮ್ಮ ಸಹಾಯಬೇಕು."

"ಹೇಳಿ ಸರ್."

"ಹೆಂಡತಿ ಮಕ್ಕಳಿಗೆ ನಾನು ಆಸ್ತಿಯಿಡದಿದ್ದರೂ ಚಿಂತೆಯಿಲ್ಲ – ಸಾಲವಿರದಿದ್ದರೆ ಸಾಕು. ನನ್ನ ಚೇತನ ಸಂಪೂರ್ಣವಾಗಿ ಉಡುಗಿ ಹೋಗುವುದಕ್ಕೆ ಮುಂಚೆ ಸಾಲಗಳನ್ನು ತೀರಿಸಿಬಿಡಲು ಆತುರ ಪಡು ತ್ತಿದ್ದೇನೆ. ಪಟ್ಟಣದಲ್ಲಿರುವ ನನ್ನ ಮನೆಗೆ ಒಂದು ಗಿರಾಕಿ ಕುದುರಿಸಿ ಮಾರಿ ಬಿಡಿ – ನೀವೇ ತೆಗೆದುಕೊಂಡರೂ ಸಂತೋಷ. ಜವರೇ ಗೌಡರಿಗೆ ಮಾತ್ರ ಈ ವಿಷಯ ತಿಳಿಸಬೇಡಿ. ಈಗಲೇ ಅವರ ಋಣ ಪುತ್ರನಾಗಿದ್ದೇನೆ —ಮತ್ತಷ್ಟು ಋಣಿಯಾಗಲು ಬಯಸೆ."

"ಮನೆ ಮಾರಬೇಡಿ ಸರ್ – ಇರಲಿ. ಕಾಲ ಒಂದೇ ರೀತಿ ಯಿರುವುದಿಲ್ಲ. ನಾಳೆ ಸ್ಥಿತಿಗತಿ ಸುಧಾರಿಸುವುದು ಅಸಂಭವವಲ್ಲ."

"ಇಲ್ಲ ಶೇಷಪ್ಪ – ಈ ವಿಷಯ ನಾನು ಬಹಳ ವಿಚಾರ ಮಾಡಿ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಹೆಚ್ಚು ಚರ್ಚೆ ಮಾಡಿ ಏನೂ ಪ್ರಯೋಜನವಿಲ್ಲ."

"ತಾವು ಏನು ಹೇಳಿದರೂ ಮಾಡಲು ನಾನು ಸಿದ್ಧನಾಗಿದ್ದೇನೆ ಸರ್."

"ನೋಡಿ – ಮನೆಗೆ ನಾನು ಒಟ್ಟು ಹನ್ನೆರಡು ಸಾವಿರ ಖರ್ಚು ಮಾಡಿದೆ. ಈಗ ಅದು ಎಷ್ಟು ಬಾಳುವುದೋ ಕಾಣೆ. ಹನ್ನೆರಡು ಸಾವಿರ ಬಂದರೂ ಸರಿ – ಸ್ವಲ್ಪ ಕಡಿಮೆ ಬಂದರೂ ಸರಿ. ಆ ಹಣದಲ್ಲಿ ಮೊದಲು ಗೌಡರ ಮೂರು ಸಾವಿರ ಕೊಟ್ಟು, ಇಲ್ಲಿಯ ಮೂರು ಸಾವಿರ

ಸಾಲ ತೀರಿಸಿ ಬಿಟ್ಟರೆ ನಾನು ನಿರಾತಂಕವಾಗಿ ಮಲಗಿ ನಿದ್ರಿಸಲು ಸಾಧ್ಯವಾಗುತ್ತದೆ. ಯಾವುದೋ ವ್ಯವಹಾರದಲ್ಲಿ ಮೂರು ಸಾವಿರ ಬಂದಿತೆಂದು ಹೇಳಿ ನೀವೇ ಜವರೇಗೌಡರಿಗೆ ಹಣ ಮುಟ್ಟಿಸಬೇಕು."

"ಹಾಗೇ ಆಗಲಿ ಸ್ವಾಮಿ. ಹಣ ಜೋತೆಮಾಡುತ್ತೇನೆ. ತಾವು ನಿಶ್ಚಿಂತರಾಗಿ ಆರೋಗ್ಯ ನೋಡಿಕೊಳ್ಳಿ."

"ಬಹಳ ವಿಳಂಬವಾಗಬಾರದು ಶೇಷಪ್ಪ."

"ಒಂದು ವಾರದಲ್ಲಿ ಎಲ್ಲಾ ಇತ್ಯರ್ಥಮಾಡಿಸುತ್ತೇನೆ ಸ್ವಾಮಿ."

"ಈಗ ನಿಮ್ಮ ಪ್ರ್ಯಾಕ್ಟೀಸ್ ಹೇಗಿದೆ ?"

"ಪರವಾಗಿಲ್ಲ. ತಮ್ಮ ಆಶೀರ್ವಾದದಿಂದ ಕುದುರಿಕೊಳ್ಳು ತ್ತಿದ್ದೇನೆ."

"ನನ್ನ ಮಾತು ಕೇಳುವಿರಾ ?"

"ಅಪ್ಪಣೆಯಾಗಲಿ."

"ಮನೆ ಕಂಡವರ ಕೈಗೆ ಹೋಗುವುದು ನನಗೂ ಇಷ್ಟವಿಲ್ಲ. ನೀವೇ ತೆಗೆದುಕೊಂಡು ಬಿಡಿ. ಸದ್ಯಕ್ಕೆ ಜವರೇಗೌಡರ ಮೂರು ಸಾವಿರ, ಇಲ್ಲಿನ ಸಾಲದ ಮೂರು ಸಾವಿರ, ಮೇಲೆ ಎರಡು ಸಾವಿರ – ಒಟ್ಟು ಎಂಟು ಸಾವಿರ ಕೊಟ್ಟರೆ ಸಾಕು. ಉಳಿದ ಹಣ ನಿಮ್ಮ ಅನುಕೂಲ ವಿದ್ದಾಗ ಕೊಡಿ."

"ಯಾವುದಕ್ಕೂ ನಾನು ಮುಂದಿನವಾರ ತಮ್ಮನ್ನು ಕಾಣು ತ್ತೇನೆ."

ಎಂದು ಶೇಷಪ್ಪ ಹೇಳಿದ.

ಮಾಧವರಾಯನಿಗೆ ಮೂಲವ್ಯಾಧಿ ಬಾಧೆಗಿಂತಲೂ ಹೆಚ್ಚಾಗಿ ಮನೋರೋಗ ಕಾಡತೊಡಗಿತು. ತನ್ನ ದುಃಖ ತೋರಿಸಿಕೊಳ್ಳ ಬಾರದೆಂದು ವಿಶ್ವಪ್ರಯತ್ನ ಮಾಡುವನು. ಅದು ಒಮ್ಮೊಮ್ಮೆ ಅವನ ಹಿಡಿತ ತಪ್ಪಿ ಹೊರಗೆ ಕಾಣಿಸಿಕೊಳ್ಳುತ್ತಿತ್ತು.

ಒಂದು ದಿನ ರಾಮಣ್ಣಾಚಾರ್ಯರು, ಮಾಧವರಾಯನನ್ನು ನೋಡಲು ಬಂದಿದ್ದರು. ಅವನ ಹಾಸಿಗೆಯ ಬಳಿ ಕುರ್ಚಿಯ ಮೇಲೆ

ಆಚಾರ್ಯರು ಕುಳಿತಿದ್ದರು. ರುಕ್ಮಿಣಿ ಗೋದಮ್ಮ ಸಮೀಪದಲ್ಲಿ ನೆಲದಮೇಲೆ ಕುಳಿತಿದ್ದರು. ಮಾಧವರಾಯ ಹಾಸಿಗೆಯ ಮೇಲೇ ದಿಂಬು ಒರಗಿಕೊಂಡು ಕುಳಿತಿದ್ದ.

"ತಾವು ಇಷ್ಟರಮಟ್ಟಿಗಾದುದನ್ನು ನೋಡಿ ಎಷ್ಟೋ ಸಂತೋಷ ವಾಗಿದೆ ಸ್ವಾಮಿ" ಎಂದರು ಆಚಾರ್ಯರು.

"ಇದು ಎಂಥ ಬಾಳ್ವೆ ಆಚಾರ್ಯರೇ ಸಾಯಲೂ ಇಲ್ಲ, ಬದುಕಲೂ ಇಲ್ಲ. ಈ ಐದು ತಿಂಗಳು ರುಕ್ಮಿಣಿಗೆ ನಾನು ಕೊಟ್ಟಿರುವ ಕಾಟ ನೆನಸಿಕೊಂಡರೆ ಮೈ ಜುಮ್ಮೆನ್ನುತ್ತದೆ."

"ಕುಜದೋಷವಿತ್ತು. ಪರಿಹಾರವಾಗುವ ಕಾಲ ಬಂದಿದೆ. ಇನ್ನು ಮುಂದೆ ನಿಮ್ಮ ಜೀವನ ಸೂರ್ಯಪ್ರಕಾಶದಂತೆ ಬೆಳಗುತ್ತದೆ."

"ಇತರರಿಗೆ ನನ್ನಿಂದ ಹಿಂಸೆಯಾಗದಂತೆ ಬದುಕಿದ್ದು ಕಣ್ಣು ಮುಚ್ಚಿಕೊಂಡರೆ ಸಾಕಾಗಿದೆ ಆಚಾರ್ಯರೇ. ಜಲಮಲಕ್ಕೆ ಕೂಡ ನಾನು ರೂಮು ಬಿಟ್ಟು ಹೊರಗೆ ಹೋಗಲು ಸಾಧ್ಯವಾಗಲಿಲ್ಲ. ನನ್ನ ಹೊಲಸನ್ನೆಲ್ಲಾ ರುಕ್ಮಿಣಿ ಬಾಚಿತೊಳೆದಿದ್ದಾಳೆ. ಅವಳು ಮಾಡಿರುವುದು ಹೆಂಡತಿ ಗಂಡನಿಗೆ ಮಾಡುವ ಸೇವೆಯಲ್ಲ ಆಚಾರ್ಯರೆ, ತಾಯಿ ಮಗುವಿಗೆ ಮಾಡುವ ಸೇವೆ. ಯಾವುದೋ ಜನ್ಮದಲ್ಲಿ ಅವಳು ನನ್ನ ತಾಯಿಯಾಗಿದ್ದಳೋ ಏನೋ?"

"ಸದ್ಗೃಹಿಣಿ ತನ್ನ ಪತಿಯನ್ನು ಪ್ರಥಮಪುತ್ರನೆಂದು ಭಾವಿಸ ಬೇಕೆಂದು ಮನುಮಹರ್ಷಿಯೇ ಅಪ್ಪಣೆ ಕೊಡಿಸಿದ್ದಾನೆ ಸ್ವಾಮಿ. ಪತಿ ತನ್ನ ಮಡದಿಯ ಹೊಟ್ಟೆಯಲ್ಲಿಯೇ ಹುಟ್ಟುತ್ತಾನಂತೆ. ಭಾರತೀಯ ಪರಂಪರೆಯಲ್ಲಿ ದಾಂಪತ್ಯದ ಉದ್ದೇಶ ಸಂತಾನಾಭಿವೃದ್ಧಿ. ಧರ್ಮರಕ್ಷಣೆಗೆ, ದೇಶರಕ್ಷಣೆಗೆ ದಂಪತಿಗಳು ಸಂತಾನ ಪಡೆಯ ಬೇಕಾದುದು ಅವರ ಆದ್ಯಕರ್ತವ್ಯ. ಆ ಕರ್ತವ್ಯ ಪೂರೈಸಿದ ಮೇಲೆ ಸತಿ ಮಾತೃಸ್ಥಾನದಲ್ಲಿ ನಿಲ್ಲುತ್ತಾಳೆ. ಉಳಿದೆಲ್ಲರೂ ಪುತ್ರ, ಪುತ್ರಿಯ ರಾಗುತ್ತಾರೆ. ಕೈ ಹಿಡಿದ ಪತಿಯೇ ಸತಿಯ ಪ್ರಥಮಪುತ್ರನಾಗುತ್ತಾನೆ. ರುಕ್ಮಿಣಮ್ಮನವರು ತಮ್ಮ ಆಶ್ರಮ ಧರ್ಮವನ್ನು ಅನ್ವಾದೃಶವಾಗಿ

ಪರಿಪಾಲಿಸಿದ್ದಾರೆ."

"ಇದೇನು ಪುರಾಣ ಆಚಾರ್ರೇ. ರಾಮ ಕೃಷ್ಣ ಎನ್ನದೆ ನನ್ನದೇ ಸ್ತುತಿಮಾಡುತ್ತ ಕುಳಿತಿರಲ್ಲ"

ಎಂದು ರುಕ್ಮಿಣಿ ಕೇಳಿದಳು.

"ತಾಯಿ, ವಾಲ್ಮೀಕಿಯಂಥ ಮಹಾಕವಿ ಹುಟ್ಟಿಕೊಂಡು ಸೀತಾದೇವಿಯ ಚರಿತ್ರೆ ಬರೆದು ಅಮರಕಾವ್ಯ ಮಾಡಿದ. ನಾಳೆ ಇನ್ನೊಬ್ಬ ವಾಲ್ಮೀಕಿಯೋ ವ್ಯಾಸನೋ ನಿಮ್ಮ ಚರಿತ್ರೆ ಬರೆದರೆ ಅದೂ ಅಷ್ಟೇ ಪವಿತ್ರವಾಗುತ್ತದೆ."

"ಎಲ್ಲಿ ಆ ಲೋಕಜನನಿ ಸೀತಾದೇವಿ – ಎಲ್ಲಿ ನಾನು! ಆಚಾರ್ಯರೆ, ಮಾರ್ಗಶಿರ ಮಾಸದಲ್ಲಿ ಲಗ್ನಗಳಿವೆಯೇ?"

"ಏತಕ್ಕೆ ತಾಯಿ?"

"ಪದ್ಮನ ಅತ್ತೆಯವರು ಕಾಗದ ಬರೆಸಿದ್ದಾರೆ. ಪ್ರಸ್ತದ ಶಾಸ್ತ್ರ ಮುಗಿಸಿಬಿಡಬೇಕು."

"ಲಗ್ನಗಳಿವೆ ತಾಯಿ. ಗೊತ್ತುಮಾಡಿಕೊಡುತ್ತೇನೆ."

"ಆ ವೇಳೆಗೆ ಯಜಮಾನರಿಗೆ ಗುಣವಾಗಿಬಿಟ್ಟರೆ ಸಾಕು."

"ಆಗುತ್ತದೆ ತಾಯಿ. ತಾವು ಯೋಚನೆಮಾಡಬೇಡಿ. ರಾಯರಿಗೆ ನನ್ನ ಮಾತಿನಲ್ಲಿ ನಂಬಿಕೆಯಿಲ್ಲ. ನೀವೇ ನೋಡಿ – ಪರೆಕಳಚಿದ ಹಾವಿನಂತೆ ಹೇಗೆ ಅವರ ಜೀವನ ಬೆಳೆಯುತ್ತದೆ."

"ಆಚಾರ್ಯರೇ, ನನಗೂ ಮಲಗಿ ಮಲಗಿ ಬೇಸರವಾಗಿದೆ. ಈಗ ಸ್ವಲ್ಪ ಹೊತ್ತು ಕುಳಿತುಕೊಳ್ಳಬಹುದು. ನೀವು ನನಗೊಂದು ಉಪಕಾರಮಾಡಬೇಕಲ್ಲ."

"ಅಪ್ಪಣೆಯಾಗಲಿ. ಸಿದ್ಧವಾಗಿದ್ದೇನೆ."

"ಶ್ರೀಮದ್ವಾಲ್ಮೀಕಿ ರಾಮಾಯಣ ತಾವು ಓದಿದರೆ ಕೇಳಿ ಜನ್ಮ ಸಾರ್ಥಕಪಡಿಸಿಕೊಳ್ಳುತ್ತೇನೆ. ಅನುಕೂಲಮಾಡಿಕೊಂಡು ತಾವು ಇಲ್ಲಿಯೇ ಬಂದಿರಬೇಕು. ಬೆಳಿಗ್ಗೆ ಸಂಜೆ ಒಂದೊಂದು ಗಂಟೆ ಓದಿ, ಸಾಕು."

“ ಅನುಕೂಲಮಾಡಿಕೊಂಡು ಬಂದುಬಿಡಿ ಆಚಾರ್‍ರೆ. ರಾಮಾಯಣ ಕೇಳಬೇಕೆಂದು ನಾನು ರುಕ್ಮಿಣಿ ಇಬ್ಬರೂ ಆಸೆಪಡುತ್ತಿದ್ದೇವೆ.”

“ ತಮ್ಮ ಆರೋಗ್ಯದ ಸ್ಥಿತಿಯಲ್ಲಿ ನಾನು ಪುರಾಣ ಆರಂಭಿಸಿದರೆ ತಮಗೆ ಹಿಂಸೆಯಾಗುತ್ತದೆ. ಊರಿನ ಜನವೂ ಬರುತ್ತದೆ.”

“ ಬರಲಿ – ಆಚಾರ್ಯರೇ ಚಿಂತೆಯಿಲ್ಲ. ನೀವು ತೊಟ್ಟಿಯಲ್ಲಿ, ನನ್ನ ಕಣ್ಣಿಗೆ ಕಾಣುವಂತೆ ಕುಳಿತು ಓದಿ. ನಾನು ಇಲ್ಲಿಯೇ ಮಲಗಿಕೊಂಡೋ ಕುಳಿತುಕೊಂಡೋ ಕೇಳುತ್ತೇನೆ.”

ಆಚಾರ್ಯರು ಸಂತೋಷದಿಂದ ಒಪ್ಪಿಕೊಂಡು

“ ಒಂದು ವಾರ ಅವಕಾಶ ಕೊಡಿ ಸ್ವಾಮಿ. ಮುಂದಿನ ವಾರ ದೇವರ ಪೆಟ್ಟಿಗೆಯೊಂದಿಗೆ ಬಂದುಬಿಡುತ್ತೇನೆ” ಎಂದರು.

೨೭

ಇಂದುಮತಿ, ನಾರಾಯಣಸ್ವಾಮಿಯವರ ಪರಿಚಯ ಗಾಢ ಸ್ನೇಹವಾಗಿ ಬೆಳೆದಿತ್ತು.

ಪ್ರತಿದಿನ ಇಬ್ಬರೂ ಇನ್‌ಸ್ಟಿಟ್ಯೂಟ್‌ನಲ್ಲಿ ಸೇರುತ್ತಿದ್ದರು. ಮಧ್ಯಾಹ್ನದ ಉಪಾಹಾರಕ್ಕೆ ಜತೆಯಲ್ಲಿಯೇ 'ಇಂಡಿಯಾ ಕಾಫಿ ಬಾರ್'ಗೆ ಹೋಗುತ್ತಿದ್ದರು.

ಇನ್‌ಸ್ಟಿಟ್ಯೂಟಿಗೆ ರಜವಿದ್ದ ದಿನ ನಾರಾಯಣಸ್ವಾಮಿ ಇಂದುಮತಿಯ ಮನೆಗೆ ಹೋಗಿ ಕಾಲ ಕಳೆಯುತ್ತಿದ್ದ.

ಇಂದುಮತಿ, ನಾರಾಯಣಸ್ವಾಮಿಯವರ ಸ್ನೇಹದ ಸುದ್ದಿ ಮೈಸೂರು ಅಸೋಸಿಯೇಷನ್ನಿಗೂ ಮುಟ್ಟಿತು. ವ್ಯವಹಾರಜ್ಞನಾದ ಪಾಂಡು ತಾನಾಗಿಯೇ ಆ ಪ್ರಸ್ತಾಪವೆತ್ತಲಿಲ್ಲ. ನಾರಾಯಣಸ್ವಾಮಿ ಮೈಸೂರು ಅಸೋಸಿಯೇಷನ್ನಿಗೆ ಹೋಗುವುದನ್ನು ಕಡಿಮೆ ಮಾಡುತ್ತ ಬಂದ.

ಒಂದೊಂದು ಸಂಜೆ ಇಂದುಮತಿ, ನಾರಾಯಣಸ್ವಾಮಿ ಕಾರಿನಲ್ಲಿ ಡ್ರೈವ್ ಹೋಗುತ್ತಿದ್ದರು. ಅವರ ಮಾತಿಗೆ ಕೊನೆ ಮೊದಲೇ ಇರುತ್ತಿರಲಿಲ್ಲ. ದಿನಪತ್ರಿಕೆಗಳ ಸುದ್ದಿ ಮೊದಲುಗೊಂಡು ಜೀವನಾವಿನಂಥ ಗಾಢ ವಿಷಯಗಳು ಅವರ ಚರ್ಚೆಗೆ ಗ್ರಾಸವಾಗುತ್ತಿದ್ದವು. ವಿಧವಾ ವಿವಾಹ, ಅಸ್ಪೃಶ್ಯತಾ ನಿವಾರಣೆ, ಅಂತರ್ಜಾತೀಯ ವಿವಾಹ,

ವಯಸ್ಕರ ಶಿಕ್ಷಣ, ಕಮ್ಯುನಿಸಂ, ಭಾರತದ ಸ್ವಾತಂತ್ರ್ಯ, ಬೆದರಿಕೆ ಹಾಕುತ್ತಿದ್ದ ಮೂರನೆಯ ಯುದ್ಧ, ಅಮೇರಿಕಾದ ರಾಕ್ಷಸ ರಾಜಕಾರಣ ಕಾಂಗ್ರೆಸ್ ಮಂತ್ರಿಮಂಡಲಗಳ ಬಲಹೀನತೆ ಮೊದಲಾದ ವಿಷಯಗಳನ್ನು ಕುರಿತು ಅವರು ನಿರ್ಭಯವಾಗಿ ಚರ್ಚಿಸುತ್ತಿದ್ದರು.

ಒಂದು ದಿನ ಜುಹೂ ಮರಳು ಹಾಸಿನ ಮೇಲೆ ಕುಳಿತಿದ್ದಾಗ ಇಂದುಮತಿ

"ಇದುವರೆಗೆ ನಾವು ಎಷ್ಟೋ ಮಾತನಾಡಿದ್ದೇವೆ. ಎಷ್ಟೋ ವಿಷಯಗಳನ್ನು ಕುರಿತು ಚರ್ಚೆಮಾಡಿದ್ದೇವೆ. ಅಲ್ಲವೇ ಮಿ. ಸ್ವಾಮಿ?"

"ಹೌದು."

"ಇಷ್ಟು ನಾವು ಮಾತನಾಡಿದರೂ ನಿಮ್ಮ ವಿಷಯವೇ ತಿಳಿದು ಬಂದಿಲ್ಲ."

"ನನ್ನ ವಿಷಯ ಹೇಳಿಕೊಳ್ಳುವುದಕ್ಕೇನಿದೆ ಇಂದುಮತಿ ?"

"ನೀವು ಮುಂದೇನು ಮಾಡಬೇಕೆಂದಿರುವಿರಿ ?"

"ಲೇಖನಗಳನ್ನು ಬರೆಯುತ್ತಿದ್ದೇನೆ. ನನ್ನ ಪುಸ್ತಕವೂ ಸದ್ಯದಲ್ಲಿಯೇ ಮುಗಿಯುತ್ತದೆ. ಈ ಪುಸ್ತಕ ನನಗೊಂದು ಮಾರ್ಗ ತೋರಿಸುತ್ತದೆಯೆಂದು ನಂಬಿದ್ದೇನೆ. ನನ್ನ ಪುಸ್ತಕಕ್ಕೆ ಒಳ್ಳೆಯ ಸ್ವಾಗತ ದೊರೆತರೆ, ಗ್ರಂಥ ರಚನೆಯನ್ನೇ ಉದ್ಯೋಗ ಮಾಡಿಕೊಳ್ಳುವ ಅಭಿಲಾಷೆ ಇದೆ."

"ಈ ವರ್ಷ ಮುಗಿದಮೇಲೆ ಊರಿಗೆ ಹೋಗಬೇಕಲ್ಲವೇ ?"

"ಊರಿನಲ್ಲಿ ನನಗೇನೂ ಕೆಲಸವಿಲ್ಲ. ಅಲ್ಲಿ ಹೋಗಿ ನಾನೇನು ಮಾಡಲಿ ?"

"ನಿಮ್ಮ ತಂದೆ, ತಾಯಿ ನಿಮ್ಮನ್ನು ನಿರೀಕ್ಷಿಸುತ್ತಿರುತ್ತಾರೆ."

"ಇಲ್ಲ. ನಾನು ಮುಂಬಯಿಯಲ್ಲೇ ನೆಲಸುವ ವಿಷಯ ಅವರಿಗೆ ಮೊದಲೇ ತಿಳಿಸಿದ್ದೇನೆ."

"ನಿಮ್ಮ ಪುಸ್ತಕದ ವಿಷಯ ದಾದಾಯವರಲ್ಲಿ ಮಾತನಾಡಲೇ ?"

"ಜರ್ನಲ್ ಕಂಪೆನಿಯೇ ಪ್ರಕಟಿಸಿದರೆ ನನಗೆ ಬಹಳ ಸಂತೋಷ

ವಾಗುತ್ತದೆ. ”

“ ಪ್ರೊ. ಲಿಮೊಯೆ ಅವರ ಕೈಯಲ್ಲಿ ಮುನ್ನುಡಿ ಬರೆಸಿ. ಲಿಮೊಯೆ ಅಂತರ – ರಾಷ್ಟ್ರೀಯ ಖ್ಯಾತಿವೆತ್ತವರು. ಅವರ ಪ್ರಶಂಸೆಯಿಂದ ನಿಮಗೆ ಸಹಾಯವಾಗುತ್ತದೆ. ”

“ ಪ್ರೊಫೆಸರು ಒಪ್ಪುತ್ತಾರೆಯೇ ? ”

“ ನೀವು ಕೇಳಿ ನೋಡಿ. ಅವರು ಒಪ್ಪದಿದ್ದರೆ ನಾನು ಹೇಳಿ ಬರೆಯಿಸುತ್ತೇನೆ. ಜರ್ನಲ್ ಕಂಪೆನಿಯ ಡೈರೆಕ್ಟರ ಮಗಳು ಕೇಳಿದರೆ ಅವರು ಇಲ್ಲವೆನ್ನಲಾರರು. ”

“ ನನಗಾಗಿ ಎಷ್ಟು ತೊಂದರೆ ತೆಗೆದುಕೊಳ್ಳುತ್ತಿರುವಿರಿ ಇಂದುಮತಿ ? ”

“ ಇದು ತೊಂದರೆಯಾದರೆ ಪ್ರಪಂಚದಲ್ಲಿ ನಾವು ಮಾಡುವ ಕೆಲಸವೆಲ್ಲಾ ತೊಂದರೆಯೇ ”

“ ಈ ವರ್ಷ ಕಳೆದಮೇಲೆ ನೀವೇನು ಮಾಡಬೇಕೆಂದಿರುವಿರಿ ಇಂದುಮತಿ ? ”

“ ಯೂರೋಪ್ ಪ್ರವಾಸಮಾಡಿ ಬರಬೇಕೆಂದಿದ್ದೇನೆ. ಯುದ್ಧಾನಂತರ ಯೂರೋಪ್ ಹೇಗೆ ಚೇತರಿಸಿಕೊಳ್ಳುತ್ತಿದೆ ನೋಡಲು ಬಹಳ ತವಕಪಡುತ್ತಿದ್ದೇನೆ. ”

“ ಯುದ್ಧ ಪೂರ್ವದಲ್ಲಿ ಯೂರೋಪಿಗೆ ಹೋಗಿದ್ದಿರಾ ? ”

“ ಇಲ್ಲ ದಾದಾ ಹೋಗುವಾಗಲೆಲ್ಲಾ ಕರೆಯುತ್ತಿದ್ದರು. ಅವರು ವ್ಯಾಪಾರಕ್ಕೆ ಹೋಗುತ್ತಿದ್ದರು. ಹಕ್ಕಿಯಂತೆ ದಿನಕ್ಕೊಂದು ಊರು ಓಡಾಡುವವರು. ಅವರ ಜತೆ ಹೋಗಿಯೂ ಪ್ರಯೋಜನವಿಲ್ಲವೆಂದು ನಾನು ಹೋಗಲೇ ಇಲ್ಲ. ”

ನಾರಾಯಣಸ್ವಾಮಿ ಉದ್ದೇಶಪೂರ್ವಕವಾಗಿಯೇ ಮಾತು ಬದಲಾಯಿಸಿದ.

ಮನೆಗೆ ಹಿಂದಿರುಗಿದ ಮೇಲೆ ಅವನ ತಲೆಯಲ್ಲಿ ಇಂದುಮತಿಯ ಮಾತುಗಳೇ ಮೊರೆಯುತ್ತಿದ್ದವು.

' ಅವರ ಜತೆ ಹೋಗಿಯೂ ಪ್ರಯೋಜನವಿಲ್ಲವೆಂದು ನಾನು ಹೋಗಲೇ ಇಲ್ಲ. '

ಇಂದುಮತಿ ನನ್ನ ಜತೆ ಹೋಗಲು ಬಯಸುತ್ತಿರುವಳೇ? ಅದನ್ನೇ ಸೂಕ್ಷ್ಮವಾಗಿ ಅವಳು ಸೂಚಿಸುತ್ತಿರುವಳೇ ?

ಇರಬೇಕು.

ಇಲ್ಲದಿದ್ದರೆ ನನ್ನ ಪುಸ್ತಕದ ವಿಷಯ ತಂದೆಗೆ ತಿಳಿಸುವುದಾಗಿ ಅವಳೇಕೆ ಹೇಳಿದಳು ?

ವಿದ್ಯಾಭಿಮಾನದಿಂದ ಇಂದುಮತಿ ಹಾಗೆ ಹೇಳಿರಬಹುದು.

ವಿದ್ಯಾಭಿಮಾನವೇ ?

ಅಥವಾ ಇಂದುಮತಿ ನನ್ನನ್ನು .... .... .... !

ನಾರಾಯಣಸ್ವಾಮಿ ರೋಮಾಂಚನಗೊಂಡ.

ನಾನಷ್ಟು ಭಾಗ್ಯಶಾಲಿಯೇ? – ಇಂದುಮತಿ ನನ್ನ ಕೈ ಹಿಡಿಯಲು ಬಯಸುತ್ತಿರುವಳೇ ?

ಎಂದು ಒಂದೇ ಸಮನೆ ವಿಚಾರಮಾಡತೊಡಗಿದ.

೨೮

ರಾಮಣ್ಣಾಚಾರ್ಯರ 'ರಾಮಾಯಣ ಪ್ರವಚನ' ಸಾಂಗವಾಗಿ ನಡೆದಿತ್ತು. ಮಾಧವರಾಯ ತನ್ನ ರೂಮಿನಲ್ಲೇ ಕುಳಿತುಕೊಂಡು ಪ್ರವಚನ ಕೇಳುತ್ತಿದ್ದ. ಊರಿನ ಹಲವು ಮುಖ್ಯರಿಗೆ ಆಮಂತ್ರಣವಿತ್ತು. ಅವರಲ್ಲದೆ ಇತರರೂ ಬಂದು ಪ್ರವಚನ ಕೇಳುತ್ತಿದ್ದರು.

ಜಾತ್ರೆ ಸೇರುತ್ತಿದ್ದರೂ ಮಾಧವರಾಯ ಬೇಸರಪಟ್ಟುಕೊಳ್ಳಲಿಲ್ಲ.

ಆಚಾರ್ಯರು ಪುರಾಣ ಆರಂಭಿಸಿದಮೇಲೆ ಮಾಧವರಾಯನ ಆರೋಗ್ಯವೂ ಸುಧಾರಿಸುತ್ತ ಬಂತು. ಅವನೇ ಉತ್ಸಾಹದಿಂದ

"ಮಂಗಳದ ದಿನ ನಾನೇ ಎಲ್ಲರಿಗೂ ಬಡಿಸುತ್ತೇನೆ ಆಚಾರ್ಯರೇ" ಎಂದು ಹೇಳುತ್ತಿದ್ದ.

ಬೆಳಿಗ್ಗೆ ಏಳುಗಂಟೆಯಿಂದ ಎಂಟೂವರೆಯವರೆಗೆ ಸಂಜೆ ಆರರಿಂದ ಎಂಟರವರೆಗೆ ಆಚಾರ್ಯರು ಪುರಾಣ ಹೇಳುತ್ತಿದ್ದರು.

ಬೆಳಿಗ್ಗೆ ಪುರಾಣಶ್ರವಣ ಮುಗಿದು ಎಲ್ಲರೂ ಹೋದಮೇಲೆ ಆಚಾರ್ಯರು ಬಂದು ಮಾಧವರಾಯನ ರೂಮಿನಲ್ಲಿ ಕೂಡುತ್ತಿದ್ದರು. ಮಾಧವರಾಯ ಆಚಾರ್ಯರೊಂದಿಗೆ ರಾಮಾಯಣದ ಕೆಲವು ಸಂದಿಗ್ಧ ಭಾಗಗಳನ್ನು, ವಾದಗ್ರಸ್ತ ಅಂಶಗಳನ್ನು ಚರ್ಚಿಸುತ್ತಿದ್ದ. ವಿಭೀಷಣನ ಪಾತ್ರಸೃಷ್ಟಿಯ ಬಗ್ಗೆ ಮಾಧವರಾಯ ಆಕ್ಷೇಪವೆತ್ತಿ

"ಅಣ್ಣನ ಪಕ್ಷಬಿಟ್ಟು, ಶತ್ರುಪಕ್ಷ ಸೇರಿ, ಕುಲಕ್ಕೆ ಕೊಡಲಿ

ಯಾದವನನ್ನು ಪರಮಭಾಗವತನೆಂದೂ, ಚಿರಂಜೀವಿಯೆಂದೂ ಆದರಿಸುವುದು ಯಾವ ಧರ್ಮ ಆಚಾರ್ಯರೇ ?" ಎಂದು ಕೇಳಿದ.

"ನಾನು ಮೊದಲೇ ಪ್ರಸ್ತಾನಶುದ್ಧಿ ಮಾಡಿರುವೆನಲ್ಲ ರಾಯರೇ. ರಾಮಾಯಣವನ್ನು ಪೂಜ್ಯಗ್ರಂಥ – ಧರ್ಮಗ್ರಂಥವೆಂದು ಪರಿಗ್ರಹಿಸುವವರು ರಾಮಚಂದ್ರಸ್ವಾಮಿಯ ನಡತೆಯನ್ನು ಭಗವಂತನ ಲೀಲೆ ಎಂದು ಭಾವಿಸುತ್ತಾರೆ."

"ಭಗವಂತನೂ ಮನುಷ್ಯರ ಕೀಳುಮಟ್ಟಕ್ಕೆ ಇಳಿದಿದ್ದಾನೆಂದು ಒಪ್ಪಿಕೊಂಡ ಹಾಗಾಯಿತು."

"ತಾವು ಚಿಕಿತ್ಸಕ ದೃಷ್ಟಿಯಿಂದ ರಾಮಾಯಣ ನೋಡುತ್ತಿರುವಿರಿ."

"ಹೌದು. ಆ ದೃಷ್ಟಿಗೂ ಅಳವಟ್ಟರಲ್ಲವೇ ರಾಮಾಯಣ ಧರ್ಮಗ್ರಂಥವಾಗುವುದು. ತ್ರಿಕಾಲಾಬಾಧಿತವಾದ ಧರ್ಮ ತನ್ನ ಸ್ವರೂಪವನ್ನು ಕಾಲಕಾಲಕ್ಕೆ ಬದಲಾಯಿಸುವುದಿಲ್ಲ."

"ನಿಜ. ಮಹಾಕವಿ ವಾಲ್ಮೀಕಿ ಈ ಅಂಶ ಮರೆತಿದ್ದಾನೆಂದು ಭಾವಿಸಿರುವಿರಾ ? ವಿಭೀಷಣ ಮೊದಲಿನಿಂದಲೂ ಭಗವದ್ಭಕ್ತ, ಸಾತ್ವಿಕ, ಧರ್ಮಭೀರು. ರಾವಣ ತದ್ವಿರುದ್ಧ. ಸೀತಾಪಹರಣದಂಥ ದೌರ್ಜನ್ಯಕ್ಕೂ ಹೇಸದವನು ರಾವಣ. ರಾಜಸಭೆಯಲ್ಲಿ ಈ ವಿಷಯ ಚರ್ಚೆಗೆ ಬರುತ್ತದೆ. ಶ್ರೀರಾಮಚಂದ್ರನ ಬಲದ ಪೂರ್ವಸೂಚನೆಯಾಗಲೇ ಆಂಜನೇಯನಿಂದ ಲಂಕಾನಿವಾಸಿಗಳಿಗಾಗಿದೆ. ವಿಭೀಷಣ ಸಕಾಲದಲ್ಲಿ ಅಣ್ಣನನ್ನು ಎಚ್ಚರಿಸುತ್ತಾನೆ. ಪರಸ್ತ್ರೀ ವ್ಯಾಮೋಹ ಪರಮ ಪಾತಕ– ಮಹಾಪತಿವ್ರತೆಯಾದ ಸೀತಾದೇವಿಯನ್ನು ಮೋಸದಿಂದ ಕದ್ದು ತಂದು ಪೀಡಿಸುವುದು ನ್ಯಾಯವಲ್ಲ. ಆಕೆಯ ಕಣ್ಣೀರು ಲಂಕೆಯನ್ನೇ ತೊಳೆದುಬಿಡುತ್ತದೆ. ರಾಜ್ಯದ ತಂದೆಯಾದ ರಾವಣನೇ ಅದರ ಮೃತ್ಯುವಾಗಬಾರದು ಎಂದು ಪರಿಪರಿಯಾಗಿ ಅಣ್ಣನನ್ನು ಬೇಡಿಕೊಳ್ಳುತ್ತಾನೆ. ಶತಮೂರ್ಖನಾದ ರಾವಣ ತಮ್ಮನ ಹಿತವಚನವನ್ನು ನಿರಾಕರಿಸುವುದಲ್ಲದೆ, ವಿಭೀಷಣನನ್ನು ಅಪಮಾನಗೊಳಿಸುತ್ತಾನೆ. ವಿಭೀಷಣ

ಆಗಲೂ ಎಚ್ಚರದಪ್ಪುವದಿಲ್ಲ. ‘ ನೀನು ನನ್ನ ರಾಜ್ಯ ಬಿಟ್ಟುತೊಲಗು ’ ಎಂದು ರಾವಣ ಆರ್ಭಟಿಸಿದಾಗ ‘ ಅಣ್ಣಾ, ನಾನು ರಾಜ್ಯವನ್ನು ಬಿಟ್ಟು ಹೋಗಲು ಸಿದ್ಧನಾಗಿದ್ದೇನೆ. ಎಲ್ಲಿಗೆ ಹೋಗುವೆ ಬಲ್ಲೆಯಾ? ಶ್ರೀರಾಮಚಂದ್ರನ ಬಳಿಗೆ ಹೋಗಿ ನಿನ್ನ ಅಧರ್ಮಕ್ಕೆ – ಅನಾಚಾರಕ್ಕೆ ತಕ್ಕ ಶಾಸ್ತಿ ಮಾಡಿಸಲು ಪ್ರಯತ್ನಿಸುತ್ತೇನೆ. ರಾಮಬಾಣದಮುಂದೆ ನೀನು ನಿಲ್ಲಲಾರೆ – ನಿನ್ನ ಪೌರುಷ ಪರಾಕ್ರಮ ಹುಡಿಗುಟ್ಟಿ ಹೋಗುತ್ತದೆ. ನಿನ್ನನ್ನು ನಂಬಿರುವ ಲಂಕಾನಿವಾಸಿಗಳು ಅನಾಥ ರಾಗುತ್ತಾರೆ. – ಬೇಡ, ಹಟಬಿಡು. ಈಗಲೂ ಸೀತಾದೇವಿಯನ್ನು ರಾಮನಿಗೊಪ್ಪಿಸು’ ಎಂದು ಹೇಳುತ್ತಾನೆ. ಮದಾಂಧನಾದ ರಾವಣ ವಿಭೀಷಣನ ಮಾತುಕೇಳದೆ ಅವನನ್ನು ರಾಜ್ಯದಿಂದ ಹೊರಗಟ್ಟುತ್ತಾನೆ. ವಿಭೀಷಣ ಮೋಸದಿಂದಾಗಲಿ, ಸ್ವಪ್ರತಿಷ್ಠೆಯಿಂದಾಗಲಿ ರಾಮನ ಪಕ್ಷ ಸೇರಲಿಲ್ಲವೆಂಬುದು ಸ್ವತಃಸಿದ್ಧವಾಗುತ್ತದೆ. ”

“ ವಿಭೀಷಣನ ಪಕ್ಷವನ್ನೇನೊ ತಾವು ಸಮರ್ಥಿಸಿರುವಿರಿ ಆಚಾರ್ಯರೇ. ಆದರೆ ದೇಶದ್ರೋಹಿ, ಭ್ರಾತೃದ್ರೋಹಿಗೆ ಶ್ರೀರಾಮ ಚಂದ್ರ ಆಶ್ರಯಕೊಡಬಾರದಾಗಿತ್ತು. ”

“ ಶ್ರೀರಾಮಚಂದ್ರಸ್ವಾಮಿ ಶರಣಾಗತಜನರಕ್ಷಕ. ಶರಣಾ ಗತನಾಗಿ ಬಂದ ವಿಭೀಷಣನನ್ನು ಅವನು ನಿರಾಕರಿಸುವುದು ಕ್ಷಾತ್ರ ಧರ್ಮಕ್ಕೇ ವಿರುದ್ಧವಾದುದು. ಒಂದು ವೇಳೆ ರಾವಣನೇ ಶರಣಾ ಗತನಾಗಿ ಬಂದಿದ್ದರೂ ಶ್ರೀರಾಮನು ನಿರಾಕರಿಸುತ್ತಿರಲಿಲ್ಲ. ಧರ್ಮ ರಕ್ಷಣೆಗೆ ಹೊರಟಿದ್ದ ಶ್ರೀರಾಮಚಂದ್ರ, ಧರ್ಮದಾನ ಬೇಡಲು ಬಂದ ವಿಭೀಷಣನನ್ನು ನಿರಾಕರಿಸುವುದಾದರೂ ಹೇಗೆ ? ”

“ ಕೊನೆಯಲ್ಲಿ ನೋಡಿ. ರಾವಣ ಸತ್ತಮೇಲೂ ವಿಭೀಷಣ ಅವನ ಮೇಲಣ ದ್ವೇಷ ತೊರೆಯುವುದಿಲ್ಲ. ಅಣ್ಣನಿಗೆ ಧರ್ಮೋದಕ ಬಿಡಲು ವಿಭೀಷಣ ನಿರಾಕರಿಸುತ್ತಾನೆ. ಧರ್ಮಾಭಿಮಾನಿಯಾದವನು ಇಂಥ ಕೆಲಸ ಮಾಡಬಹುದೇ ? ”

“ ಮಾಡಬಾರದು. ಅವನು ಮಾಡಿದುದು ನ್ಯಾಯವಲ್ಲವೆಂದು

ಶ್ರೀರಾಮನೇ ಹೇಳಿಲ್ಲವೇ? ಆ ಸಮಯದಲ್ಲಿ ಭಗವಂತನ ಬಾಯಲ್ಲಿ ಬಂದ ದಿವ್ಯವಾದ ಮಾತನ್ನು ವಾಲ್ಮೀಕಿ ಹೇಗೆ ವರ್ಣಿಸಿದ್ದಾನೆ ನೋಡಿ. ರಾಮನಿಗೆ ಆಪಾದಮಸ್ತಕ ಬೆವರೇರಿತಂತೆ. ಕೋಪದಿಂದ ಹುಬ್ಬು ಗಂಟು ಹಾಕಿದನಂತೆ. ರಾಮನಿಗೆ ಕೋಪ ಬಂದುದನ್ನು ಕಂಡು ಸಮಸ್ತ ಪ್ರಜರೂ ಗಡಗಡನೆ ನಡುಗಿದರಂತೆ! 'ವಿಭೀಷಣ, ನೀನು ಅನುಚಿತವನ್ನಾಡುತ್ತಿರುವೆ. ರಾವಣ ಮಹಾಜ್ಞಾನಿ, ಮಹಾವೀರ. ಆದರೆ ಸ್ವಲ್ಪ ದಾರಿ ತಪ್ಪಿ ಹೋದ. ಪರಸ್ತ್ರೀಯನ್ನು ಅಪಹರಿಸುವ ಪಾತಕ ಮಾಡಿದ. ಮಾಡಬಾರದುದನ್ನು ಮಾಡಿದುದಕ್ಕೆ ಅವನು ಅನುಭವಿಸಬಾರದುದನ್ನು ಅನುಭವಿಸಿದ. ಅವನು ಸತ್ತು ವೀರ ಸ್ವರ್ಗವನ್ನೇರಿದಮೇಲೂ ಅವನ ಮೇಲೆ ದ್ವೇಷ ಸಾಧಿಸುವುದು ಹೇಯವರ್ತನೆ. ರಾವಣ ನಿನ್ನ ಅಣ್ಣ - ರಕ್ತ ಸಂಬಂಧ ದೃಷ್ಟಿಯಿಂದಲಾದರೂ ನೀನವನಿಗೆ ತರ್ಪಣ ಅರ್ಪಿಸಬೇಕಾದುದು ನ್ಯಾಯ. ನೀನು ಒಪ್ಪದಿದ್ದರೆ ಬಿಡು - ಆ ಮಹಾವೀರನಿಗೆ ನಾನೇ ತರ್ಪಣ ಒಪ್ಪಿಸುತ್ತೇನೆ.'"

"ಹೌದು ಆಚಾರ್ಯರೇ. ಶ್ರೀರಾಮಚಂದ್ರ ಭಗವದ್ಸ್ವರೂಪ ನೆಂಬುದನ್ನು ಈ ಮಾತು ಸಿದ್ಧಮಾಡಿ ಕೊಡುತ್ತದೆ."

"ಈ ಕಲಿಯುಗ ಹುಟ್ಟುವುದಕ್ಕೆ ಸಾವಿರಾರು ವರ್ಷಗಳ ಹಿಂದೆ ರಚಿತವಾದ ಗ್ರಂಥ ರಾಮಾಯಣ ಎಂಬುದನ್ನು ತಾವು ಮರೆಯ ಬಾರದು. ಸಾವಿರಾರು ವರ್ಷಗಳ ಹಿಂದೆ ನಮ್ಮ ಸಂಸ್ಕೃತಿ ಯಾವ ಮಟ್ಟದಲ್ಲಿತ್ತು ಎಂದು ರಾಮಾಯಣ ತೋರಿಸಿಕೊಡುತ್ತದೆ. ನರರೂಪ ತಾಳಿ ಬಂದ ಭಗವಂತ ನರರಂತೆ ದುಃಖಿಸಿದ್ದಾನೆ, ಸಂತೋಷ ಪಟ್ಟಿದ್ದಾನೆ.-ರಾಗದ್ವೇಷಗಳಿಗೂ ತುತ್ತಾಗಿದ್ದಾನೆ. ಆದರೆ ಅವನು ಅವುಗಳ ಎಲ್ಲೆಯನ್ನತಿಕ್ರಮಿಸಿ ತನ್ನ ಭಗವದಂಶವನ್ನು ಹೇಗೆ ಸ್ಥಾಪಿಸಿದ್ದಾನೆಂಬುದನ್ನು ನಾವು ಗಮನಿಸಬೇಕು. ಇನ್ನು ಒಂದು ಮಾತು- ರಾಮಾಯಣ ಕಾಲದಿಂದ ಈ ವರೆಗೆ ಸಾವಿರಾರು ವರ್ಷಗಳು ಉರುಳಿ ಹೋಗಿವೆ. ಈ ಮಧ್ಯೆ ಮಹಾಭಾರತದ ದಿವ್ಯ ಪುರುಷರು, ಬುದ್ಧ

ಶಂಕರ, ರಾಮಾನುಜ, ಮಧ್ವ, ವಲ್ಲಭಾಚಾರ್ಯ, ಚೈತನ್ಯ, ಶ್ರೀ ರಾಮಕೃಷ್ಣ ಮೊದಲಾದ ಮಹಾ ಪುರುಷರು ಅವತರಿಸಿದ್ದಾರೆ. ನಮ್ಮ ಸಂಸ್ಕೃತಿ ರಾಮಾಯಣ ಕಾಲದ ಸಂಸ್ಕೃತಿಗಿಂತಲೂ ಮೇಲ್ಮಟ್ಟದಲ್ಲಿರ ಬೇಕೆಂದು ಸಹಜವಾಗಿ ನಿರೀಕ್ಷಿಸಬಹುದಷ್ಟೆ! ಹಾಗೆ ನಾವು ಭಾವಿ ಸೋಣವೇ? ನಮ್ಮ ಸಂಸ್ಕೃತಿ ರಾಮಾಯಣ ಸಂಸ್ಕೃತಿಗಿಂತಲೂ ಶ್ರೇಷ್ಠವಾಗಿದೆಯೇ?"

"ಎಲ್ಲಿ ಬಂತು ಆಚಾರ್ಯರೇ. ದಿನ ಕಳೆದಂತೆ ನಾವು ಅಧಃ ಪತನಕ್ಕೆ ಹೋಗುತ್ತಿದ್ದೇವೆ. ಹಿಂದೆ ತಂದೆಗಾಗಿ ಮಗ ಕಾಡಿಗೆ ಹೋಗಲು ಸಿದ್ಧನಾದ; ಈಗ ಮಗ ತನಗಾಗಿ ತಂದೆಯನ್ನು ಕಾಡಿ ಗಟ್ಟಲು ಸಿದ್ಧನಾಗಿದ್ದಾನೆ."

ರುಕ್ಮಿಣಿ ಮಾಧವರಾಯನಿಗೆ ಊಟತಂದುದರಿಂದ ವಾದ ನಿಲ್ಲಬೇಕಾಯಿತು.

ಒಂದು ದಿನ ಆಚಾರ್ಯರ ಪ್ರವಚನ ನಡೆದಿತ್ತು. ದಿನವೂ ಬರುತ್ತಿದ್ದ ಎಲ್ಲರ ಮುಖ ಪರಿಚಯವೂ ರುಕ್ಮಿಣಿಗಿತ್ತು. ಅಂದು ಒಂದು ಹೊಸ ಮುಖ ಕಂಡು ಬಂದಿತು. ಬಾಗಿಲು ಸಮೀಪದಲ್ಲಿ ಜೀರ್ಣಚೇತನಳಾದ ಒಬ್ಬ ವೃದ್ಧೆ ಕುಳಿತು ಪ್ರವಚನ ಕೇಳುತ್ತಿದ್ದಳು. ಅವಳು ಬಹಳ ಕಷ್ಟದಿಂದ ಕುಳಿತಿದ್ದಳೆಂಬುದು ರುಕ್ಮಿಣಿಗೆ ವ್ಯಕ್ತ ವಾಯಿತು. 'ರೋಗಿ ಇರಬಹುದೇ' ಎಂದುಕೊಂಡಳು. ಪ್ರವಚನ ಮುಗಿದ ಮೇಲೆ ಬಂದಿದ್ದ ಎಲ್ಲ ಹೆಣ್ಣು ಮಕ್ಕಳಿಗೂ ಅರಿಶಿನ, ಕುಂಕುಮ ಕೊಡುವುದರಲ್ಲಿ ಉದ್ಯುಕ್ತಳಾಗಿದ್ದ ರುಕ್ಮಿಣಿ ಕೂಡಲೆ ಹೊಸಬಳನ್ನು ವಿಚಾರಿಸಲಾಗಲಿಲ್ಲ. ಎಲ್ಲರೂ ಹೋದರೂ ವೃದ್ಧೆ ನಿಂತೇ ಇದ್ದಳು. ರುಕ್ಮಿಣಿ ಅವಳ ಸಮೀಪಕ್ಕೆ ಬಂದು

"ನೀವು ಯಾರಮ್ಮ?" ಎಂದು ಕೇಳಿದಳು.

ಮಾತನಾಡುವಷ್ಟು ಶಕ್ತಿಯೂ ವೃದ್ಧೆಯಲ್ಲಿ ಉಳಿದಿರಲಿಲ್ಲ.

"ನಾನೊಬ್ಬಳು ಅನಾಥೆ" ಎಂದಳು.

"ಊಟ ಮಾಡಿರುವಿರಾ?"

ವೃದ್ಧೆ ಉತ್ತರ ಕೊಡಲಿಲ್ಲ.

"ಏಳಿ. ಸ್ನಾನಮಾಡಿ, ಮೊದಲು ಊಟಮಾಡಿ. ಅನಂತರ ಮಾತನಾಡೋಣ."

ವೃದ್ಧೆ ರುಕ್ಮಿಣಿಯನ್ನನುಸರಿಸಿ ಸ್ನಾನಗೃಹಕ್ಕೆ ಹೋದಳು. ಅವಳು ಸ್ನಾನ ಮುಗಿಸುವಷ್ಟರಲ್ಲಿ ರುಕ್ಮಿಣಿ ಗೋದಮ್ಮನವರ ಒಂದು ಸೀರೆಯನ್ನಿತ್ತಳು.

ವೃದ್ಧೆಗೆ ಗೋದಮ್ಮನವರೇ ಬಡಿಸಿದರು.

ವೃದ್ಧೆ ಊಟ ಮುಗಿಸಿಕೊಂಡು ಬಂದು ತೊಟ್ಟಿಯಲ್ಲಿ ಕುಳಿತಳು. ಗಂಡನಿಗೂ ಮಕ್ಕಳಿಗೂ ಊಟ ಮಾಡಿಸಿ, ಅವರನ್ನು ಮಲಗಿಸಿ ರುಕ್ಮಿಣಿ, ಹಜಾರದಲ್ಲಿ ಬಂದು ಕುಳಿತಳು. ಗೋದಮ್ಮನವರೂ ಅಡಿಗೆಯ ಮನೆ ಬಾಗಿಲು ಹಾಕಿಕೊಂಡು ಬಂದು ಕುಳಿತರು. ರುಕ್ಮಿಣಿ ಮೃದುವಾಗಿ

"ಯಾವ ಊರಮ್ಮ ನಿಮ್ಮದು ?" ಎಂದು ಕೇಳಿದಳು.

"ಬೆಂಗಳೂರು ತಾಯಿ."

"ಎಲ್ಲಿಗೆ ಹೊರಟಿದ್ದಿರಿ ?"

"ಪಟ್ಟಣಕ್ಕೆ."

"ಯಾತ್ರೆ ಹೊರಟಿದ್ದಿರಾ ?"

"ಇಲ್ಲ ತಾಯಿ – ಕಾವೇರಮ್ಮನ ಪಾದ ಸೇರಲು ಹೊರಟಿದ್ದೆ."

"ಅಯ್ಯೋ ! ಎಲ್ಲಿಯಾದರೂ ಉಂಟೇ ? – ಆತ್ಮಹತ್ಯೆ ಮಹಾ ಪಾಪವಲ್ಲವೇ ?"

"ಜೀವ ಧರಿಸಿರಬೇಕೆನ್ನುವವರಿಗೆ ಪಾಪ – ಪುಣ್ಯದ ಚಿಂತೆ. ನನಗೆ ಯಾವ ಚಿಂತೆಯೂ ಇಲ್ಲಮ್ಮ."

"ನಿಮಗೆ ಬಂದಿರುವ ಕಷ್ಟವೇನು ತಿಳಿಸಿ."

"ಅಮ್ಮ – ನೀವೇ ರುಕ್ಮಿಣಮ್ಮ ಅಲ್ಲವೇ ?"

"ಹೌದು – ನನ್ನನ್ನು ಬಲ್ಲಿರಾ."

"ಕಾಣೆ ತಾಯಿ. ಈ ಊರಿಗೆ ಸಂಜೆಯೇ ಬಂದೆ. ಎಲ್ಲಿ

ಹೋದರೂ ನಿಮ್ಮ ಹೆಸರು ಕೇಳಿ ಬರುತ್ತಿತ್ತು. ಜನ ತಂಡತಂಡವಾಗಿ ಇಲ್ಲಿಗೆ ಬರುತ್ತಿದ್ದರು. ಅವರ ಜತೆ ನಾನೂ ಬಂದೆ. ಪುರಾಣ ನಡೆದಿತ್ತು – ನಿಮ್ಮನ್ನು ಮಾತನಾಡಿಸಲಾಗಲಿಲ್ಲ."

"ಎಂಥಾ ಕೆಲಸವಾಯಿತು. ನೀವು ಬಂದ ಕೂಡಲೆ ನನ್ನನ್ನು ಕರೆಯಬಾರದಾಗಿತ್ತೇ ?"

"ಅಷ್ಟು ಜನಗಳ ಮಧ್ಯದಲ್ಲಿ ಹೇಗೆ ಮಾತನಾಡಿಸಲಮ್ಮ."

"ಬೆಂಗಳೂರಿನಲ್ಲಿ ನಿಮಗೆ ಯಾರೂ ದಿಕ್ಕಿಲ್ಲವೇ ?"

"ಇದ್ದಾರಮ್ಮ. ಮಗ ಇದ್ದಾನೆ – ಸೊಸೆ ಇದ್ದಾಳೆ. ಮಗ ನೌಕರಿಯಲ್ಲಿದ್ದಾನೆ—ಸಂಪಾದಿಸುತ್ತಿದ್ದಾನೆ."

"ಮಗ – ಸೊಸೆ ನಿಮ್ಮನ್ನು ಮನೆ ಬಿಟ್ಟು ಹೊರಗೆ ಕಳಿಸಿದರೇ ?"

"ತಾಯಿ, ನನ್ನದು ದೊಡ್ಡ ಕಥೆ. ಅದನ್ನೆಲ್ಲಾ ಹೇಳಿ ನಿಮ್ಮನ್ನೇಕೆ ಬೇಸರ ಪಡಿಸಲಿ. ನನ್ನ ಯಾಜಮಾನರು ಸರ್ಕಾರಿ ನೌಕರಿಯಲ್ಲಿದ್ದರು. ದುಷ್ಟ ಸಹವಾಸಕ್ಕೆ ಬಿದ್ದು ಸರ್ಕಾರಿ ಹಣ ತಿಂದರು. ಜೈಲುವಾಸವಾಯಿತು. ನನ್ನ ಕೊರಳಿಗೆ ಇಬ್ಬರು ಮಕ್ಕಳು ಗಂಟು ಬಿದ್ದಿದ್ದರು. ಆಗಿನ್ನೂ ನನಗೆ ಸಣ್ಣ ವಯಸ್ಸು. ನನ್ನ ಶೀಲ ಕಾಪಾಡಿಕೊಂಡು ಮಕ್ಕಳನ್ನು ಸಾಕಿದೆ. ಮಗಳಿಗೆ ಮದುವೆ ಮಾಡಿ ಗಂಡನ ಮನೆಗೆ ಕಳಿಸಿದೆ. ಮಗನನ್ನು ಕಾಲೇಜಿನಲ್ಲಿಟ್ಟು ಓದಿಸಿದೆ. ಅವನಿಗೂ ಮದುವೆ ಮಾಡಿಸಿದೆ. ಈ ಮಧ್ಯೆ ನನ್ನ ಯಜಮಾನರು ಜೈಲಿನಿಂದ ಬಿಡುಗಡೆ ಹೊಂದಿ ಹೊರಗೆ ಬಂದರು. ನನ್ನ ದೌರ್ಭಾಗ್ಯಕ್ಕೆ ಅವರು ಹೆಚ್ಚು ಕಾಲ ಬದುಕಲಿಲ್ಲ. ನಾನು ಸೊಸೆಯ ಕೈಗೆ ಸಿಕ್ಕಿದೆ. ಮಗ ಸಂಪೂರ್ಣವಾಗಿ ಅವಳ ವಶವರ್ತಿಯಾದ. ಕೊನೆಗೆ ಹೆಂಡತಿಯ ಮಾತು ಕೇಳಿಕೊಂಡು ಮಗ ನನ್ನನ್ನು ಮನೆ ಬಿಟ್ಟು ಹೊರಗೆ ಹಾಕಿದ. ಕಾಲೆಳೆದುಕೊಂಡು ಹೋದತ್ತ ನಡೆದು ಬಂದೆ. ಈ ಜನ್ಮ ಸಾಕೆನಿಸಿತು. ಕಾವೇರಮ್ಮನ ಪಾದ ಹುಡುಕಿಕೊಂಡು ಹೊರಟೆದ್ದೆ. ಈ ಊರಿಗೆ ಬಂದಾಗ ಎಲ್ಲೆಲ್ಲಿಯೂ ಜನ ನಿಮ್ಮ ಹೆಸರು ಹೇಳುತ್ತಿದ್ದರು.

ನಿಮ್ಮನ್ನು ಹುಡುಕಿಕೊಂಡು ಬಂದೆನಮ್ಮ. ಇದೇ ನನ್ನ ಕಥೆ."

"ಎಂಥ ಅನ್ಯಾಯ! ಈ ವಯಸ್ಸಿನಲ್ಲಿ ನಿಮ್ಮನ್ನು ಮನೆ ಬಿಟ್ಟು ಹೊರಗೆ ಹಾಕಿದ ಮಗ ಸೊಸೆ ಮನುಷ್ಯರೇ!"

"ನನ್ನ ಕರ್ಮಕ್ಕೆ ಯಾರು ಹೊಣೆ ತಾಯಿ."

"ನಿಮ್ಮ ಹೆಸರೇನು?"

"ಸಾವಿತ್ರಮ್ಮ."

"ಸಾವಿತ್ರಮ್ಮ ನೀವು ಇಲ್ಲೇ ಇದ್ದು ಬಿಡಿ. ದೇವರು ನಮಗೆ ಕೊಟ್ಟಿರುವುದರಲ್ಲಿ ನಿಮಗೂ ಒಂದು ತುತ್ತು ಹಾಕುತ್ತೇವೆ" ಎಂದಳು.

ಸಾವಿತ್ರಮ್ಮನ ಹೃದಯ ಕೃತಜ್ಞತೆಯಿಂದ ತುಂಬಿತು.

"ತಾಯಿ ನೀವು ಮನುಷ್ಯರಲ್ಲ - ಸಾಕ್ಷಾತ್ ದೇವತೆ. ನಿಮ್ಮ ಸೇವೆಯಲ್ಲಿ ಈ ಜೀವ ತೇದು, ನನ್ನ ಜನ್ಮ ಸಾರ್ಥಕ ಪಡಿಸಿ ಕೊಳ್ಳುತ್ತೇನೆ" ಎಂದಳು.

ಪ್ರವಚನ ಮುಗಿಯುವವೇಳೆಗೆ ಮಾಧವರಾಯ ಹಾಸಿಗೆ ಬಿಟ್ಟಿದ್ದು ಮನೆಯಲ್ಲಿಯೇ ಓಡಿಯಾಡುವಂತಾದ. ಪಟ್ಟಾಭಿಷೇಕ ಮಹೋತ್ಸವವನ್ನು ನಾಕಷ್ಟು ವಿಜೃಂಭಣೆಯಿಂದಲೇ ನೆರವೇರಿಸಿ ಆಚಾರ್ಯರಿಗೂ, ಅವರ ಪತ್ನಿ ವೆಂಕಮ್ಮನವರಿಗೂ ಮಾಧವರಾಯ, ರುಕ್ಮಿಣಿ ಉಡುಗೊರೆ, ಸಂಭಾವನೆಯಿತ್ತರು. ಊರಿಗೆ ಭರ್ಜರಿ ಸಂತರ್ಪಣೆಯೂ ಆಯಿತು.

ಅದೇ ಮಾರ್ಗಶಿರ ಮಾಸವಲ್ಲಿ ಪದ್ಮನ ಪ್ರಸ್ತವೂ ನೆರವೇರಿ, ಅವಳು ಪತಿಗೃಹಕ್ಕೆ ಪ್ರಯಾಣಮಾಡಿದಳು.

ಮಾಧವರಾಯನಿಗೆ ಪೂರ್ಣಗುಣವಾಗಿ ಅವನು ಕೋರ್ಟಿಗೆ ಹೋಗಲು ಮತ್ತೆ ಎರಡು ತಿಂಗಳು ಹಿಡಿಯಿತು.

ಅವನು ಕೋರ್ಟಿಗೆ ಬಂದ ದಿನ ಪದ್ಮನಾಭಯ್ಯನವರು, ಹಿರಿಯ ಕಿರಿಯ ವಕೀಲರು ಸಂತೋಷದಿಂದ ಸ್ವಾಗತ ಬಯಸಿದರು. ಮಾಧವ ರಾಯನಿಗೆ ಪುನರ್ಜನ್ಮ ಬಂದಂತಾಗಿತ್ತು.

೨೯

ಸೇಠ್ ಮಂಗಳದಾಸರ ಊಳಿಗವರ್ಗಕ್ಕೂ ಮನೆಯಮಂದಿಗೂ ನಾರಾಯಣಸ್ವಾಮಿ ಸುಪರಿಚಿತನಾಗಿದ್ದ. ಅವನು ಬಂದೊಡನೆಯೇ ಹೊರಬಾಗಿಲಿನ ಕಾಪಿನ ಗೂರ್ಖಾ ಸಿಪಾಯಿ, ಒಳಬಾಗಿಲಿನಲ್ಲಿರುತ್ತಿದ್ದ ಮುನೀತುಜಿ, ಲಿಫ್ಟ್ ಆಳು ಎಲ್ಲರೂ 'ಜೈ ಗೋಪಾಲ್' ಹೇಳುತ್ತಿದ್ದರು.

ಒಂದು ದಿನ ಇಂದುಮತಿ ನಾರಾಯಣಸ್ವಾಮಿ ದಾರಿನೋಡುತ್ತಿದ್ದಳು. ಅವನು ಬಂದ ಕೂಡಲೆ ನಗೆಮೊಗದಿಂದ ಸ್ವಾಗತ ಬಯಸಿದಳು.

"ಇದೇನು ಇಂದುಮತಿ. ಇವತ್ತು ಬಹಳ ಸಂತೋಷದಿಂದಿರುವಿರಿ!"

"ದುಃಖಪಡುವ ಅಭ್ಯಾಸವೇ ನನಗಿಲ್ಲವಲ್ಲ!"

"ಸದಾಕಾಲ ಹೀಗೇ ಸಂತೋಷವಾಗಿರಬೇಕೆಂಬುದೇ ನನ್ನ ಅಭೀಷ್ಟ. ಆದರೆ ಇವತ್ತಿನ ಸಂತೋಷಕ್ಕೆ ಏನೋ ವಿಶೇಷ ಕಾರಣವಿರಬೇಕೆಂದೆನಿಸುತ್ತಿದೆ."

"ಏನಿರಬಹುದು ಊಹಿಸಿ."

"ಸಾಧ್ಯವಿಲ್ಲ – ನೀವೇ ಹೇಳಿಬಿಡಿ."

"ಕ್ಷಣಕಾಲ ಕಣ್ಣುಮುಚ್ಚಿಕೊಳ್ಳಿ."

ನಾರಾಯಣಸ್ವಾಮಿ ಕಣ್ಣುಮುಚ್ಚಿಕೊಳ್ಳಲು, ಸಿಲ್ಕ್ದಾರದಲ್ಲಿ ಕಟ್ಟಲ್ಪಟ್ಟಿದ್ದ ಒಂದು ಪ್ಯಾಕೆಟ್ಟನ್ನು ಇಂದುಮತಿ ಅವನ ಕೈಯಲ್ಲಿಟ್ಟು "ನೋಡಿ" ಎಂದಳು.

ನಾರಾಯಣಸ್ವಾಮಿ ಕಣ್ಣುಬಿಟ್ಟು ಪ್ಯಾಕೆಟ್ ಬಿಚ್ಚಿ ನೋಡಿದ. ಅವನ ಕಣ್ಣು ಕೋರೈಸುವಂತಾಯಿತು. ತನ್ನದೇ ಗ್ರಂಥ – ಸೊಗಸಾದ ಗರಿತೂಕದ (Featherweight)ಕಾಗದದ ಮೇಲೆ ಮುದ್ರಣ – ಕ್ಯಾಲಿಕೋ ರಟ್ಟು – ಸ್ವರ್ಣಾಕ್ಷರಗಳಲ್ಲಿ ರಟ್ಟಿನ ಮುದ್ರಣ – ಮೇಲೆ ಆರ್ಟ್ ಪೇಪರಿನ ಹೊದಿಕೆ. ಗ್ರಂಥದ ಹಿಂದೆ ಗ್ರಂಥಕರ್ತನ ಭಾವಚಿತ್ರ– ಪರಿಚಯ.

ಸ್ತಂಭೀಭೂತನಾಗಿ ನಾರಾಯಣಸ್ವಾಮಿ ಗ್ರಂಥದ ಒಳಗಿದ್ದ ಕಾಗದ ಒಡೆದು ನೋಡಿದ. ಪ್ರಕಾಶಕರು ಗ್ರಂಥಕರ್ತನಿಗೆ ಅಭಿನಂದನೆ ಅರ್ಪಿಸಿ ಗೌರವಧನ (Royalty)ವೆಂದು ನಾವಿರದೈನೂರು ರೂಪಾಯಿ ಗಳಿಗೆ ಒಂದು ಚೆಕ್ ಇಟ್ಟಿದ್ದರು.

"ಕೃತಜ್ಞತೆ ನಿಮಗೆ ಹೇಗರ್ಪಿಸಬೇಕೋ ಕಾಣೆ ಇಂದುಮತಿ. – ಈ ರಾಯಲ್ಟಿ ನ್ಯಾಯವಾಗಿ ನಿಮಗೆ ಸಲ್ಲತಕ್ಕದ್ದು."

"ಗ್ರಂಥ ಬರೆದವರು ನೀವು – ರಾಯಲ್ಟಿ ನಾನು ತೆಗೆದುಕೊಳ್ಳ ಬೇಕೇ ?"

"ಸೇಟಜೀಯವರು ಮನೆಯಲ್ಲಿದ್ದರೆ ಅವರಿಗೆ ನನ್ನ ಕೃತಜ್ಞತೆ ಅರ್ಪಿಸಲಿಚ್ಛಿಸುತ್ತೇನೆ."

"ಅವರು ಮನೆಯಲ್ಲಿಲ್ಲ. ಯಾವುದೋ ಸಮಾರಂಭಕ್ಕೆ ಹೋಗಿದ್ದಾರೆ."

"ಇಂದುಮತಿ, ಇದು ನನ್ನ ಜೀವನದ ಮಹೋನ್ನತ ದಿನ."

"ಮಹೋನ್ನತ ದಿನವೆನ್ನಬೇಡಿ, ಅದು ಮುಂದಿದೆ. ಇದು ಅದರ ನಾಂದಿಯಷ್ಟೆ! ನಿಮ್ಮ ಗ್ರಂಥದ ಇಂಗ್ಲಿಷ್, ಅಮೆರಿಕನ್ ಎಡಿಷನ್ ಪ್ರಕಟಿಸಲು ದಾದಾ ಪ್ರಯತ್ನಿಸುತ್ತಿದ್ದಾರೆ."

"ಎಲ್ಲ ಕೀರ್ತಿಯೂ ನಿಮಗೇ ಸೇರಬೇಕು. ನನ್ನ ಭಾಗ್ಯದೇವತೆ

ಯಂತೆ ನೀವು ನನ್ನ ಬೆನ್ನು ಕಾಯುತ್ತ ಬಂದಿರುವಿರಿ. ಇನ್ನು ಮುಂದೆಯೂ...."

"ಆ ಬಗ್ಗೆ ಅನುಮಾನವಿದೆಯೇ ?"

"ಇದೆ."

"ಕಾರಣವೇನು ?"

"ನಿಮ್ಮ ನನ್ನ ಜೀವನದ ಅಂತಸ್ತುಗಳಲ್ಲಿ ತುಂಬ ಅಂತರವಿದೆ. ವರ್ಷ, ಎರಡು ವರ್ಷಗಳಲ್ಲಿ ನೀವು...."

"ನಾನು...."

"ಲಗ್ನವಾಗುವವರು."

"ಅದನ್ನು ಕುರಿತು ನಾನು ಯೋಚನೆಮಾಡಿಲ್ಲ. ಲಗ್ನದ ಬಗ್ಗೆ ನಾನು ತಳೆದಿರುವ ಅಭಿಪ್ರಾಯ ನಿಮಗೆ ತಿಳಿದೇ ಇದೆ. ಲಗ್ನ ಎರಡು ಮನೋಧರ್ಮಗಳ ಮೇಳವಾಗಬೇಕು. ಸಮಾನ ಆಸೆ, ಆಕಾಂಕ್ಷೆ, ಅಭಿರುಚಿ ಆದರ್ಶಗಳ ಸಮರಸವೇ ದಾಂಪತ್ಯವೆಂದು ನಾನು ತಿಳಿದು ಕೊಂಡಿದ್ದೇನೆ. ನಮ್ಮ ಬನಿಯಾ ಜಾತಿಯಲ್ಲಿ ಎಲ್ಲಕ್ಕೂ ಹಣ ಪ್ರಾಧಾನ್ಯ ನನ್ನನ್ನು ಲಗ್ನವಾಗಲು ಬರುವವರು ನನಗಾಗಿಯಲ್ಲ – ನನ್ನ ಹಣಕ್ಕಾಗಿ ಹಾತೊರೆಯುತ್ತಾರೆ. ಇಂಥ ಲಗ್ನ ನನಗೆ ಬೇಕಿಲ್ಲ. ಹಣ ನನಗೆ ಬೇಡವೆಂದಾಗಲಿ, ಅದು ತುಚ್ಛವಾದುದೆಂದಾಗಲಿ ನಾನು ಹೇಳುತ್ತಿಲ್ಲ. ಆದರೆ ಹಣ ಗಮ್ಯವಾಗಬೇಕೇ ವಿನಾ ಗುರಿಯಾಗಬಾರದು. ಸತ್ಕಾರ್ಯಗಳಿಗೆ ವಿನಿಯೋಗಿಸಲು ಹಣ ಬೇಕೇ ವಿನಾ ಹಣಸಂಗ್ರಹ ಕ್ಕಾಗಿಯೇ ಹಣವನ್ನು ಬಯಸಬಾರದು. ಈ ವಿಷಯದಲ್ಲಿ ದಾದಾ ನನ್ನ ಅಭಿಪ್ರಾಯವನ್ನು ಸಂಪೂರ್ಣವಾಗಿ ಅನುಮೋದಿಸುತ್ತಾರೆ."

"ಹಣದ ಸ್ಥಾನಮಾನವನ್ನು ನೀವು ಚೆನ್ನಾಗಿ ಅರಿತಿರುವಿರಿ."

"ಹಣವಿಲ್ಲದಿರುವಾಗ ಆಗುವ ದುಃಖದಷ್ಟೇ ಹಣವಿದ್ದಾಗ ಸಂತೋಷವಾಗುವುದಿಲ್ಲ ಮಿ. ಸ್ವಾಮಿ. ಇದೊಂದು ಅಚ್ಚರಿಯಲ್ಲವೇ ?"

"ಹೌದು ಹೌದು. ಇದ್ದಕ್ಕಿದ್ದಂತೆ ಸಂಪತ್ತು ದೊರಕಿದರೆ ಜನ ಹೃದಯಸ್ತಂಭನದಿಂದ ಮರಣಕ್ಕೀಡಾಗುತ್ತಾರಂತೆ."

" ಹಣದ ಬೆಲೆ ನನಗೆ ಎರಡು ವರ್ಷಗಳ ಕೆಳಗೆ ಅರ್ಥವಾಯಿತು. ಸಂದರ್ಭವೂ ಬಹಳ ಸ್ವಾರಸ್ಯವಾಗಿದೆ."

" ಎರಡು ವರ್ಷಗಳ ಕೆಳಗೆ ! "

" ಹೌದು. ಸ್ಯಾಕ್ಸೇರಿಯಾ ಅವರ ಹೆಸರು ನೀವು ಕೇಳಿರ ಬೇಕಲ್ಲವೇ ? "

" ಸ್ಯಾಕ್ಸೇರಿಯಾ ಚ್ಯಾರಿಟೀಸ್ (Saxeria Charities) ಸ್ಯಾಕ್ಸೇರಿಯಾ ಅವರೇ ? "

" ಹೌದು. ಒಂದು ಕೋಟಿ ರೂಪಾಯಿ ದಾನ ಧರ್ಮಕ್ಕೆ ಕೊಟ್ಟಿದ್ದಾರೆ. ಎರಡು ವರ್ಷಗಳ ಕೆಳಗೆ ಸ್ಟಾಕ್ ಎಕ್ಸ್‌ಚೇಂಜಿನಲ್ಲಿ (Stock Exchange) ಅವರದು ನಾಲ್ಕು ಕೋಟಿ ರೂಪಾಯಿ ಮುಳುಗಿಹೋಯಿತು. ಅವರನ್ನು ಕಂಡು ಸಹಾನುಭೂತಿ ವ್ಯಕ್ತ ಮಾಡಲು ದಾದಾ ಹೊರಟರು. ನಾನೂ ಜತೆಯಲ್ಲಿ ಹೋದೆ. ಸ್ಟಾಕ್ ಮಾರ್ಕೆಟ್ಟಿನ ತಮ್ಮ ಪೇಟೆಯಲ್ಲಿ ಯಥಾಪ್ರಕಾರ ಸ್ಯಾಕ್ಸೇರಿಯಾ ಲೋಡು ಒರಗಿಕೊಂಡು ಬೀಡಿ ಸೇದುತ್ತಾ ಕುಳಿತಿದ್ದರು. ದಾದಾ ಸಹಾನುಭೂತಿ ವ್ಯಕ್ತಮಾಡಲು ಸ್ಯಾಕ್ಸೇರಿಯಾ ನಗುತ್ತಾ ' ಹೇಗೆ ಹಣ ಬಂತೋ ಹಾಗೇ ಹೋಯಿತು. ಅದಕ್ಕೆ ವ್ಯಥೆಯೇಕೆ ಪಡಬೇಕು ' ಎಂದರು. ' ಇಷ್ಟು ದಾನಿಗಳೂ, ಉದಾರಹೃದಯರೂ ಆದ ನಿಮಗೆ ಈ ಪರಿಸ್ಥಿತಿ ಒದಗಬಾರದಾಗಿತ್ತು ' ಎಂದು ದಾದಾ ಅನುತಾಪ ವ್ಯಕ್ತ ಮಾಡಿದರು. ಅದಕ್ಕೆ ಸ್ಯಾಕ್ಸೇರಿಯಾ ' ನನ್ನ ಹಣದಿಂದ ಯಾವ ಪ್ರಯೋಜನವಾಗಬಹುದಿತ್ತೋ ಅದು ಆಗೇ ಇದೆ. ಉಳಿದುದು ದ್ಯೂತದ ಹಣ. ಅದು ಹೋದುದಕ್ಕೆ ಸ್ವಲ್ಪವೂ ದುಃಖಪಡಬೇಕಾಗಿಲ್ಲ' ಎಂದರು. ನಾಲ್ಕು ಕೋಟಿ ರೂಪಾಯಿಗಳನ್ನು ಕಳೆದುಕೊಂಡೂ ಇಂಥ ಸ್ಥಿರಮನಸ್ಸಿನಿಂದ ಇದ್ದವರನ್ನು ನೋಡಿ ನನಗೆ ಪರಮಾಶ್ಚರ್ಯ ವಾಯಿತು."

" ಹಣವಂತರಲ್ಲಿ ಈ ಮನೋಭಾವ ಬೆಳೆದರೆ ಲೋಕದ ಅಂತರ ಬಹಳ ಕಡಿಮೆಯಾಗುತ್ತದೆ. "

" ಹಣದ ಜತೆ ಸಂಸ್ಕೃತಿ ಇದ್ದರೆ ಅಂತರಗಳು ಇರುವುದಿಲ್ಲ ಮಿ. ಸ್ವಾಮಿ. "

" ಹಣವಂತರೆಲ್ಲಾ ನಿಮ್ಮ ಹಾಗೇ ಇರುತ್ತಾರೆಯೇ? ಮಂಗಳ ದಾಸ್‌ಜಿ ಅಂಥವರು ಲಕ್ಷದಲ್ಲಿ ಒಬ್ಬರು ಸಿಕ್ಕುತ್ತಾರೆ."

" ನಾವು ಹಣವಂತರೆಂದು ನಮ್ಮನ್ನು ನೀವು ತಿರಸ್ಕರಿಸು ವುದಿಲ್ಲವಲ್ಲ !"

" ಉಂಟೇ. ಹಣದಲ್ಲಿ ಮಾತ್ರವೇ ಅಲ್ಲ, ಗುಣದಲ್ಲಿಯೂ ನೀವು ಶ್ರೀಮಂತರಾಗಿದ್ದೀರಿ. "

ನಾರಾಯಣಸ್ವಾಮಿ ಮನಸ್ಸಿನಲ್ಲಿ ಆಸೆ ಆಕಾಂಕ್ಷೆ ಮೊಳೆತಿತ್ತು. ಇಂದುಮತಿಯ ಸರಳ, ಸ್ನೇಹಜೀವನ ಅವನ ಆಕಾಂಕ್ಷೆಗೆ ಇಂಬು ಗೊಟ್ಟಿದ್ದರೂ, ಅದನ್ನು ಸ್ಪಷ್ಟವಾಗಿ ಬಿಚ್ಚಿ ಹೇಳಲು ಧೈರ್ಯವಾಗದು. ಒಮ್ಮೆ ತನ್ನ ಅಂತರಂಗವನ್ನು ಸೂಕ್ಷ್ಮವಾಗಿ ಪರಿಚಯಮಾಡಿ ಕೊಟ್ಟಿರುವುದೇ ಲೇಸೆಂದು ಭಾವಿಸಿ ನಾರಾಯಣಸ್ವಾಮಿ

" ಮಿಸ್. ಇಂದುಮತಿ, ನನ್ನ ಲಗ್ನ ಬೇಗಮಾಡಿಬಿಡಬೇಕೆಂದು ನನ್ನ ತಾಯಿ ಆತುರರಾಗಿದ್ದಾರೆ. "

" ಹೆಣ್ಣು ಗೊತ್ತು ಮಾಡಿರುವರೇ? "

" ಇಲ್ಲ ಅವರ ಸೂಚನೆಯನ್ನು ನಾನು ಒಪ್ಪಿಕೊಂಡಿಲ್ಲ. "

" ಏಕೆ? "

" ದಾಂಪತ್ಯಕ್ಕೆ ನೀವು ಕೊಟ್ಟಿರುವ ವ್ಯಾಖ್ಯೆಯನ್ನೇ ನಾನೂ ಅಂಗೀಕರಿಸಿರುವುದರಿಂದ. "

" ತಮ್ಮ ಜೀವನಸಾಥಿಯನ್ನು ಆರಿಸಿಕೊಳ್ಳುವ ಹಕ್ಕನ್ನು ತಂದೆ ತಾಯಿಗಳು ಮಕ್ಕಳಿಗೆ ಒಪ್ಪಿಸಿಬಿಡಬೇಕು."

" ನನ್ನ ತಾಯಿ ತಂದೆ ಸ್ವಲ್ಪ ಹಳೆಯಕಾಲದವರು."

" ತಮ್ಮ ಅಭಿಪ್ರಾಯವನ್ನೇ ನಿಮ್ಮ ಮೇಲೆ ಹೇರುವರೇ ? "

" ಇಲ್ಲ – ಮಕ್ಕಳ ಮನಸ್ಸಿಗೆ ವಿರುದ್ಧವಾಗಿ ಅವರು ಏನನ್ನೂ ಮಾಡ ಬಯಸುವುದಿಲ್ಲ."

" ನೀವು ನಿಜವಾಗಿ ಪುಣ್ಯವಂತರು ಮಿ. ಸ್ವಾಮಿ."

" ಯೋಗ್ಯ ಜೀವನಸಾಥಿ ಸಿಕ್ಕುವ ಪುಣ್ಯ ನನಗಿದೆಯೋ ಇಲ್ಲವೋ ? "

" ಏಕೆ ಹಾಗನ್ನುವಿರಿ ?"

" ಕೈಗೆ ಎಟುಕದ ಫಲ ದೊರಕಿಸಿಕೊಳ್ಳಲು ನಾನು ಪ್ರಯತ್ನಿಸುತ್ತಿದ್ದೇನೆ."

" ಆ ಫಲ ಅಷ್ಟು ಅಪರೂಪವಾದುದೇ ? "

" ಅದು ಸ್ವರ್ಗದ ಫಲ – ಮಾನವರಿಗೆ ಸಿಕ್ಕುವುದು ದುಸ್ಸಾಧ್ಯ."

" ಮಾನವರಿಗೂ ಸಾಧ್ಯವೆಂದು ಮಹಾಕವಿ ಕಾಳಿದಾಸ ಹೇಳಿದ್ದಾನೆ."

" ಅವನು ಕವಿ – ಕಾವ್ಯ ಪ್ರಪಂಚದಲ್ಲಿ ಸಾಧ್ಯ."

" ಜೀವನದಲ್ಲಿಯೂ ಸಾಧ್ಯ."

" ನಾನು ಸ್ಪಷ್ಟವಾಗಿ ಮಾತನಾಡಲೇ ? "

ಇಂದುಮತಿಯ ಮುಖ ಕೆಂಪೇರಿತು. ನಸುನಾಚಿ

" ಮಾತನಾಡಿ " ಎಂದಳು.

" ನೀವು........ನನ್ನ........"

ಇಂದುಮತಿ ಲಜ್ಜೆಯಿಂದ ಕತ್ತು ತಗ್ಗಿಸಿದಳು. ನಾರಾಯಣ ಸ್ವಾಮಿಯ ಎದೆ ಒಂದೇ ಸಮನೆ ಡವಗುಟ್ಟಲಾರಂಭಿಸಿತು.

" ನನ್ನ ಸಲಹೆಯಿಂದ ನಿಮಗೆ ಅಸಮಾಧಾನವಾಯಿತೇ ? "

" ........................... "

" ನನ್ನ ದುಡುಕಿಗಾಗಿ ಕೋಪಿಸಿಕೊಳ್ಳಬೇಡಿ. ಯಾವ ಕಾರಣಕ್ಕೂ ನಮ್ಮ ಸ್ನೇಹಕ್ಕೆ ಭಂಗ ಬರಬಾರದು."

ಇಂದುಮತಿ ಮೆಲ್ಲನೆ ಕತ್ತೆತ್ತಿ

" ದಾದಾ ಅವರೂ ಇದೇ ಸಲಹೆಯಿತ್ತಿದ್ದರು."

" ನೀವೇನು ಹೇಳಿದಿರಿ ? "

" ಯೋಚಿಸುತ್ತೇನೆಂದು ಹೇಳಿದೆ."

“ ಯೋಚಿಸಿದಿರಾ ? ”

“ ಯೋಚಿಸಿದೆ.”

“ ನಿರ್ಧಾರವೇನು ? ”

“ ಬಾಯಿಬಿಟ್ಟು ಹೇಳಬೇಕೇ ? ”

ನಾರಾಯಣಸ್ವಾಮಿ ಮೈಯಲ್ಲಿ ವಿದ್ಯುತ್ಪ್ರವೇಶವಾದಂತಾಯಿತು.

“ ನಾನು ಬಹುಭಾಗ್ಯಶಾಲಿ ಇಂದುಮತಿ.”

“ ನಾನು ಭಾಗ್ಯಶಾಲಿನಿಯಲ್ಲವೇ ? ”

“ ನೀವು ಹುಟ್ಟಾ ಭಾಗ್ಯಶಾಲಿಗಳು ” ಎಂದ.

೩೦

ಆಸ್ಪತ್ರೆ ನಿಯೋಜನೆಗೆ ಅಭೂತಪೂರ್ವ ಸ್ವಾಗತ ಸಿಕ್ಕಿತ್ತು. ಸಕ್ಕರೆ ಕಂಪೆನಿಯ ಅಧ್ಯಕ್ಷರು ಶ್ರೀಮಂತರಿಂದ, ನಗರಸಭಾಧ್ಯಕ್ಷರು ಮಧ್ಯಮವರ್ಗದವರಿಂದ, ಕಾರ್ಮಿಕಸಂಘದ ಅಧ್ಯಕ್ಷರು ಕೂಲಿಕಾರರಿಂದ ಚಂದಾ ಎತ್ತುವುದೆಂದು ನಿಷ್ಕರ್ಷೆಯಾಗಿತ್ತು. ಶ್ರೀಮಂತರು, ಮಧ್ಯಮ ವರ್ಗದವರು, ಕೂಲಿಕಾರರು ಹಾರ್ದಿಕಬೆಂಬಲ ನೀಡಿದುದಲ್ಲದೆ ಶಕ್ತಿ ಮೀರಿ ಧನಸಹಾಯವಮಾಡುತ್ತ ಬಂದರು. ಪಾಯದ ಕೆಲಸ ಮುಗಿಯುತ್ತ ಬಂದಿದ್ದು ಕಟ್ಟಡಕ್ಕೆ ಅವಶ್ಯಕದ ಮರಮುಟ್ಟು, ಕಬ್ಬಿಣ, ಕಲ್ಲು ಸಂಗ್ರಹವಾಗುತ್ತಿತ್ತು.

ಮಾಧವರಾಯ ಆಗಾಗ್ಗೆ ಹೋಗಿ ಕಟ್ಟಡದ ಕೆಲಸ ನೋಡಿ ಕೊಂಡು, ಸೂಕ್ತಸಲಹೆಗಳನ್ನಿತ್ತು ಬರುತ್ತಿದ್ದ. ಒಂದುದಿನ ಬೆಳಿಗ್ಗೆ ಅವನು ಸಕ್ಕರೆ ಕಂಪೆನಿಗೆ ಹೋಗಿ ಅಧ್ಯಕ್ಷರೊಂದಿಗೆ ಆಸ್ಪತ್ರೆಯ ಕಟ್ಟಡ ನೋಡಿಕೊಂಡು ಮನೆಗೆ ಬಂದಾಗ ರುಕ್ಮಿಣಿ

" ನಿಮಗೆ ಎರಡು ರಿಜಿಸ್ಟರ್ಡ್ ಕಾಗದಗಳು ಬಂದಿದ್ದವು. ಪೋಸ್ಟ್ ಮ್ಯಾನ್ ತಿರುಗಿಬರುತ್ತೇನೆಂದು ಹೇಳಿಹೋಗಿದ್ದಾನೆ" ಎಂದಳು.

'ಎರಡು ರಿಜಿಸ್ಟರ್ಡ್ ಕಾಗದಗಳು ಯಾವದು ? ರಿಜಿಸ್ಟರ್ಡ್ ನೋಟಿಸ್ ಕೊಡುವಂಥ ಸಾಲಗಾರರು ಯಾರೂ ಇಲ್ಲ.— ಪ್ರಾಯಶಃ ನಾರಾಯಣಸ್ವಾಮಿ ಬರೆದಿರಬೇಕು. ಮತ್ತೆ ಅವನು ಹಣ ಕೇಳಿರಬೇಕು'

ಎಂದುಕೊಂಡೇ ಮಾಧವರಾಯ ಸ್ನಾನ, ಊಟ ಮುಗಿಸಿದ.

ರುಕ್ಮಿಣಿ ತನ್ನ ಫಲಾಹಾರ ಮುಗಿಸಿಕೊಂಡು ಬಂದು ಗಂಡನಿಗೆ ವೀಳೆಯದೆಲೆ ಮಡಿಸಿಕೊಡುತ್ತಿದ್ದಳು. ಪೋಸ್ಟ್‌ಮ್ಯಾನ್ ಬಂದು ರಿಜಿಸ್ಟರ್ಡ್ ಕಾಗದಗಳನ್ನು ಕೈಗಿತ್ತ. ಮಾಧವರಾಯ ಒಂದಕ್ಕೆ ಸಹಿ ಹಾಕುತ್ತಾ

"ಇನ್ನೊಂದು ನಿನ್ನ ಹೆಸರಿಗಿದೆ ರುಕ್ಕೂ" ಎಂದ.

ರುಕ್ಮಿಣಿ ಮಾಧವರಾಯಕೊಟ್ಟ ರಿಜಿಸ್ಟರ್ಡ್ ಪ್ಯಾಕೆಟ್ ಕೈಗೆ ತೆಗೆದುಕೊಂಡು ರಶೀತಿಗೆ ಸಹಿ ಹಾಕಿದಳು.

ಗಂಡ ಹೆಂಡತಿ ಇಬ್ಬರೂ ರುಕ್ಮಿಣಿಯ ವಿಳಾಸಕ್ಕೆ ಬಂದಿದ್ದ ಪ್ಯಾಕೆಟ್ ಬಗ್ಗೆ ಕುತೂಹಲಿಗಳಾದರು. ಅದನ್ನೇ ಮೊದಲು ಒಡೆದು ನೋಡುವಲ್ಲಿ ನಾರಾಯಣಸ್ವಾಮಿಯ ಇಂಗ್ಲಿಷ್ ಗ್ರಂಥ!

ಮಾಧವರಾಯ ಹಿಗ್ಗುತ್ತಾ

"ನಾಣಿ ಪುಸ್ತಕ ಕಣೇ ರುಕ್ಕೂ – ಇಲ್ಲಿ ನೋಡು ಅವನ ಫೋಟೋ"

ಎಂದು ತೋರಿಸಿದ. ರುಕ್ಮಿಣಿ ಮಗನ ಪುಸ್ತಕ ಎದೆಗಪ್ಪಿಕೊಂಡಳು. ಅವಳ ಕಣ್ಣುಗಳಿಂದ ಆನಂದಾಶ್ರುಗಳುದುರಿದವು.

"ಏತರ ಮೇಲೆ ಪುಸ್ತಕ ಬರೆದಿದ್ದಾನೇಂದ್ರೆ?"

"ಕೂಲಿಕಾರರು, ಬಂಡವಾಳಗಾರರ ಸಮಸ್ಯೆಯ ಮೇಲೆ."

"ನಾಣಿ ಕೀರ್ತಿವಂತನಾಗುತ್ತಾನೆಂಬ ಧೈರ್ಯ ನನಗಿತ್ತು"

ಎಂದು ಪುಸ್ತಕವನ್ನು ತೆಗೆದುಕೊಂಡು ಗೋದಮ್ಮನವರ ಬಳಿಗೆ ಸಡಗರದಿಂದ ಹೋದಳು.

ಮಾಧವರಾಯ ತನಗೆ ಬಂದಿದ್ದ ರಿಜಿಸ್ಟರ್ಡ್ ಕಾಗದ ಒಡೆದು ನೋಡಿದ. ಅವನ ಆನಂದಾಶ್ಚರ್ಯಕ್ಕೂ ಮಿತಿಯಿರಲಿಲ್ಲ.

"ರುಕ್ಕೂ" ಎಂದು ಕೂಗಿದ.

ರುಕ್ಮಿಣಿ ಕೂಡಲೆ ಬಂದಳು.

"ಈ ಕಾಗದ ನೋಡಿದೆಯಾ?"

" ಯಾರದು ? "

" ಮೈಸೂರಿನಲ್ಲಿ ಲಾಯರ್ಸ್ ಕಾನ್ಫರೆನ್ಸ್ ಮಾಡುತ್ತಾರಂತೆ! ಅದರ ಕಾರ್ಯದರ್ಶಿಗಳು ಬರೆದಿದ್ದಾರೆ."

" ಏನು ಬರೆದಿದ್ದಾರೆ ? "

" ನಾನು ಅಧ್ಯಕ್ಷನಾಗಲು ಒಪ್ಪಬೇಕೆಂದು ಕೋರಿ ಬರೆದಿದ್ದಾರೆ."

" ಇವತ್ತು ನಿಜವಾಗಿ ನಾವು ಬಲಮಗ್ಗುಲಿನಲ್ಲಿ ಎದ್ದಿದ್ದೇವೇಂದ್ರೆ. ಒಂದೇ ದಿನ ಎರಡು ಒಳ್ಳೆಯ ಸುದ್ದಿಗಳು. ಅಮ್ಮಾ . . ಇಲ್ಲಿ ಬನ್ನಿ."

ಗೋದಮ್ಮನವರು ಬಂದು

" ಏನೇ ತಾಯಿ " ಎಂದರು.

" ಕೇಳಿದಿರಾ. ನಿಮ್ಮ ಮಕ್ಕಳು ಲಾಯರ್ಸ್ ಕಾನ್ಫರೆನ್ಸ್ ಅಧ್ಯಕ್ಷರಾಗುವರಂತೆ ! "

" ಎಲ್ಲಾ ನಿನ್ನ ಭಾಗ್ಯ ಕಣೇ ತಾಯಿ. ಗಂಡ, ಮಗ ಇಬ್ಬರೂ ಕೀರ್ತಿಶಾಲಿಗಳು."

" ರುಕ್ಕೂ ಕೀರ್ತಿಯ ಮುಂದೆ ನಮ್ಮದೇನಮ್ಮ. ಸೂರ್ಯನ ಮುಂದೆ ಸೊಡರು."

" ಸಾಕೂಂದ್ರೆ. ನನ್ನ ಹೊಗಳಿಕೆ ಇರಲಿ. ಒಪ್ಪಿದ್ದೇನೆಂದು ಕಾರ್ಯದರ್ಶಿಗಳಿಗೆ ಬರೆದುಬಿಡಿ."

" ಕಾನ್ಫರೆನ್ಸಿಗೆ ನೀನೂ ಅಮ್ಮ ಬರುವ ಹಾಗಿದ್ದರೆ ಒಪ್ಪಿಕೊಳ್ಳುತ್ತೇನೆ ರುಕ್ಕೂ."

" ಅಲ್ಲಿ ನಮಗೇನು ಕೆಲಸ? ನಾನೂ ಲಾಯರಲ್ಲ – ಅಮ್ಮನೂ ಲಾಯರಲ್ಲ."

" ಒಂದು ದಿವಸ ನೀನೂ ಲಾಯರಾಗಿದ್ದೆಯಲ್ಲೇ ರುಕ್ಕೂ – ಅಮ್ಮ ಜಡ್ಜ್ ಆಗಿದ್ದಳು."

" ನೀವು ಅಧ್ಯಕ್ಷಸ್ಥಾನದಲ್ಲಿ ಕುಳಿತು, ಎಲ್ಲರಿಂದಲೂ ಗೌರವ ಪಡೆಯುವುದು ನೋಡುವುದಕ್ಕೆ ನಾನು ಬೇಡವೆನ್ನುತ್ತೇನೆಯೇ – ಹಾಗೇ ಆಗಲಿ."

"ಇನ್ನು ಧೈರ್ಯವಾಗಿ ಒಪ್ಪಿಕೊಂಡುಬಿಡುತ್ತೇನೆ"
ಎಂದು ಹೇಳಿದ.

ಸಂಜೆ ರುಕ್ಮಿಣಿಯೇ ಈ ಸಂತೋಷ ಸಮಾಚಾರವನ್ನು ಸುನಂದಮ್ಮನವರಿಗೂ, ಪಂಕಜಮ್ಮನವರಿಗೂ ತಿಳಿಸಿದಳು. ಮಗನ ಪುಸ್ತಕ ಅವರಿಗೆ ತೋರಿಸುತ್ತಾ

"ನಮ್ಮ ನಾಣಿ ಇಂಗ್ಲಿಷಿನಲ್ಲಿ ಪುಸ್ತಕ ಬರೆದಿದ್ದಾನೇಂದ್ರೆ. ಮುಂಬಯಿಯಲ್ಲೇ ಅದು ಪ್ರಿಂಟಾಗಿದೆ."

ಮಗನ ಪುಸ್ತಕ ಹಿಡಿದು ಸಣ್ಣ ಮಗುವಿನಂತೆ ಹಿಗ್ಗುತ್ತಿದ್ದ ರುಕ್ಮಿಣಿಯನ್ನು ನೋಡಿ ಅವರಿಬ್ಬರೂ

"ನಿಮ್ಮ ಮಗ ದೇಶ ವಿದೇಶಗಳಲ್ಲಿ ಕೀರ್ತಿವಂತನಾಗುತ್ತಾನೆ. ರುಕ್ಮಿಣಿಯಮ್ಮ. ಇದು ಪೂರ್ವಸೂಚನೆ" ಎಂದರು.

"ಹರಸಿಯಮ್ಮ. ಮುತ್ತೈದೆಯರು ನೀವು ಬಾಯಿತುಂಬ ಹರಸಿದರೆ ನನ್ನ ಮಗನಿಗೆ ಒಳ್ಳೆಯದಾಗುತ್ತದೆ."

"ಆಗಲಿಯಮ್ಮ. ಮನಃಪೂರ್ವಕವಾಗಿ ಹರಸುತ್ತೇವೆ. ಯಾವ ವಿಷಯ ಕುರಿತದ್ದರಿ ನಾಣಿ ಪುಸ್ತಕ?"

"ನನ್ನ ಮಗನ ಪುಸ್ತಕ ನಾನೇ ಓದುವುದಕ್ಕಾಗುವುದಿಲ್ರೀ. ಕೂಲಿಗಾರರು, ಬಂಡವಾಳಗಾರರ ಮೇಲೆ ಬರೆದಿದ್ದಾನೆ ಎಂತಾ ಅವರು ಹೇಳಿದರು. ಕಮಲಾ ಬರಲಿ ಎಂತ ಕಾದಿದ್ದೀನಿ. ಅವಳ ಕೈಯಲ್ಲಿ ಓದಿಸುತ್ತೇನೆ."

"ಕಮಲಮ್ಮ ಯಾವಾಗ ಬರುತ್ತಾಳೆ?"

"ಪರೀಕ್ಷೆ ನಡೆಯುತ್ತಿದೆ. ಇವತ್ತು ನಾಳೆ ಬರಬಹುದು."

"ನಾಣಿ ಯಾವಾಗ ಬರುತ್ತಾನ್ರೀ?"

"ಗೊತ್ತಿಲ್ಲಮ್ಮ. ಅವನಿಗೆ ಕೈತುಂಬ ಕೆಲಸ. ಇನ್ನೂ ಒಂದು ಪುಸ್ತಕ ಬರೆಯುತ್ತಿದ್ದಾನಂತೆ! ಅದು ಮುಗಿದ ಮೇಲೆ ಬರಬಹುದು."

"ಈ ಸಾರೆ ನಾಣಿ ಮದುವೆ ಮುಗಿಸಿಬಿಡಿ ರುಕ್ಮಿಣಮ್ಮ."

"ಅವನು ಒಪ್ಪಬೇಕಲ್ಲಮ್ಮ. ಈ ಕಾಲದ ಹುಡುಗರು – ಅವರ

ದೃಷ್ಟಿಯೇ ವಿಚಿತ್ರ."

"ಈ ಜಾತಿ ಕಾಟ ಇಲ್ಲದಿದ್ದರೆ ನಮ್ಮ ಕಲ್ಯಾಣಿಯನ್ನು ತಂದುಕೊಳ್ಳಿ ಎಂದು ಕೇಳಿಕೊಳ್ಳುತ್ತಿದ್ದೆ."

"ನಿಜವಾಗಿ ಜಾತಿಗಳಲ್ಲಿ ನನಗೆ ನಂಬಿಕೆಯಿಲ್ರೀ ಸುನಂದಮ್ಮ. ಜವರೇಗೌಡರು, ಕರಿಯಪ್ಪಗೌಡರು ನಮ್ಮ ಜನವೇ? ಜವರೇಗೌಡರು ನಮಗೆ ಮಾಡಿರುವ ಸಹಾಯ ಇಂಥ ತಂಪ್ಹೊತ್ತಿನಲ್ಲಿ ನೆನಸಿಕೊಳ್ಳಬೇಕಮ್ಮ. ನಮಗೆ ಕಷ್ಟ ಬಂದಾಗಲೆಲ್ಲಾ ನಮ್ಮ ಭಾಗದ ದೇವರಹಾಗೆ ಬಂದು ಸಹಾಯಮಾಡಿದ್ದಾರೆ. ಇನ್‌ಫ್ಲುಯಂಜಾ ಬಂದಾಗ ಕರಿಯಪ್ಪಗೌಡರ ಪರಿಚಯ ನಮಗಾಯಿತು. ಅವರ ತ್ಯಾಗ, ಗುಣ, ವಿನಯ ನಾನು ಬ್ರಾಹ್ಮಣರಲ್ಲಿಯೂ ನೋಡಿಲ್ಲ ಕಣ್ರೀ. ನನ್ನ ಮಗಳು ಲಕ್ಕೀ–ನಮ್ಮ ಮನೆಯಲ್ಲಿ ಯಾರಿಗೆ ಮೈಯಲ್ಲಿ ಸರಿಯಿಲ್ಲವೆಂದು ತಿಳಿದರೂ ತನ್ನ ಮಕ್ಕಳನ್ನೂ ಬಿಟ್ಟು ಓಡಿಬಂದುಬಿಡುತ್ತಾಳೆ. ಜೀವನ ಪಾಪಮಯವಾದದ್ದು – ದುಃಖಮಯವಾದದ್ದು – ಶೋಷಣೆಯಿಂದ ಕೂಡಿದ್ದು ಎಂದನ್ನುತ್ತಾರೆ. ಆ ಮಾತು ನಿಜವಲ್ಲ ಕಣ್ರೀ. ಪಾಪ, ದುಃಖ, ಶೋಷಣೆ ಇದೆ. ಅದರ ಜತೆಯಲ್ಲಿ ಪುಣ್ಯ, ಸುಖ, ತ್ಯಾಗವೂ ಇದೆ. ನಾವು ಬಿಂದಿಗೆ ತೆಗೆದುಕೊಂಡು ಗಂಗಾನದಿಗೆ ಹೋದರೆ ಗಂಗೆ ಸಿಕ್ಕುತ್ತದೆ; ಕೊಚ್ಚೆ ಗುಂಡಿಗೆ ಹೋದರೆ ಕೊಳಚೆ ಸಿಕ್ಕುತ್ತದೆ. ಸರ್ವಾಂತರ್ಯಾಮಿಯಾಗಿ, ಎಲ್ಲರ ಹೃದಯದಲ್ಲಿ ಕುಳಿತಿರುವವನು ಒಬ್ಬನೇ ಭಗವಂತ."

"ಎಷ್ಟು ಜನ್ಮಗಳ ತಪಸ್ಸಿನಿಂದ ಈ ಜ್ಞಾನ ನಿ[illegible] ದೊರೆತಿದ್ದೆತಾಯಿ."

"ನಮ್ಮ ಜೀವನವೇ ತಪಸ್ಸಾಗಬೇಕು ಸುನಂದಮ್ಮ. ಸತ್ಯಕ್ಕೆ ಅಪವಾದವೆಸಗದಿದ್ದರಾಯಿತು. ಜ್ಞಾನ ತಾನೇತಾನಾಗಿ ಸ್ಫುರಿಸುತ್ತದೆ."

"ನಿನ್ನೆ ನಮ್ಮ ಮನೆಗೆ ಮೈಸೂರಿಂದ ಒಬ್ಬ ಚಿತ್ರಗಾರ ಬಂದಿದ್ದ ರುಕ್ಮಿಣಮ್ಮ. ಅವನು ಸೂರ್ಯಾಸ್ತದ ಒಂದು ಚಿತ್ರ ಬರೆದಿದ್ದಾನೆ. ಒಂದೇ ಗೆರೆಯನ್ನು ಬಗ್ಗಿಸಿ ಅದಕ್ಕೆ ಬಣ್ಣಕೊಟ್ಟು ಸೂರ್ಯಾಸ್ತದಂತೆ

ಕಾಣಿಸಿದ್ದಾನೆ. ಹತ್ತಿರ ನೋಡಿದರೆ ಚಿತ್ರ ಮಕ್ಕಳಾಟದಂತೆ ಕಂಡು ಬರುತ್ತದೆ. ಸ್ವಲ್ಪ ದೂರ ನಿಂತು ನೋಡಿದರೆ ಸೂರ್ಯಾಸ್ತ ಚೆನ್ನಾಗಿ ವಿಶದವಾಗುತ್ತದೆ. ನಮ್ಮ ನಳಿನಿ – ಮಹಾವಕ್ರ ಹುಡುಗಿ – ಚಿತ್ರಗಾರನನ್ನು 'ಇದೇನು ಮಹಾ, ನಾನೂ ಬರೆಯಬಲ್ಲೆ' ಎಂದಳು. ಚಿತ್ರಗಾರ ಕೋಪಮಾಡಿಕೊಳ್ಳಲಿಲ್ಲ. ಅವಳ ಕೈಗೆ ಕಾಗದ, ಕುಂಚ, ಬಣ್ಣ ಕೊಟ್ಟು 'ಮಾಡಮ್ಮ ನೋಡೋಣ' ಎಂದ. ಅವಳು ಏನುಏನೋ ಬರೆದಳು. ಅವನ ಚಿತ್ರ ಅನುಕರಿಸಿದಳು. ಸಿದ್ಧ ಹಸ್ತವನ್ನು ಸರಿಗಟ್ಟ ಲಾಗುವುದೇ? – ನೀವು ಹೇಳುವುದೂ ಹಾಗೇ ಇದೆ ರುಕ್ಮಿಣಮ್ಮ. ನಿಮಗೆ ಸುಲಭವಾದುದು ನಮಗೆಲ್ಲಾ ಸುಲಭವಾಗುತ್ತದೆಂದು ತಿಳಿದಿರುವಿರಾ? ಎಲ್ಲದಕ್ಕೂ ಪೂರ್ವಜನ್ಮದ ಪುಣ್ಯವಿರಬೇಕಮ್ಮ."

"ಸರಿ – ಬಿಡಿಯಂದ್ರೆ – ಏನು ಮಾತು"

ಎನ್ನುತ್ತಾ ರುಕ್ಮಿಣಿ ಕುಂಕುಮ ತೆಗೆದುಕೊಂಡು ಎದ್ದು ಬಂದಳು.

ಎರಡು ದಿವಸಗಳಲ್ಲಿ ಕಮಲ ಊರಿಗೆ ಬಂದಳು. ನಾಣಿಯ ಯಶಸ್ಸು, ತಂದೆಗೆ ಬಂದ ಗೌರವ ಕೇಳಿ ಅವಳೂ ಸಂತೋಷಪಟ್ಟು ಕೊಂಡಳು. ರುಕ್ಮಿಣಮ್ಮ ಮಗಳನ್ನು

"ಅಂಬುಜವಲ್ಲಿ ಊರಿಗೆ ಹೋದಳೇ ಕಮಲ"

ಎಂದು ಕೇಳಿದಳು.

"ಅವರ ಗೋಳು ಬೇಡಮ್ಮ. ನಿನ್ನ ನೋಡಲಿಲ್ಲವಲ್ಲಾ ಎಂದು ತುಂಬ ಪಶ್ಚಾತ್ತಾಪಪಟ್ಟರು."

"ಇಲ್ಲಿಗೆ ಕರೆದುಕೊಂಡು ಬರಬೇಕಾಗಿತ್ತು."

"ತಂದೆ ತಾಯಿ ತುಂಬ ಹಂಬಲಿಸುತ್ತಿದ್ದರಂತೆ. ನಾವೆಲ್ಲಾ ಒಮ್ಮೆ ಅವರ ತೋಟಕ್ಕೆ ಹೋಗಿಬರಬೇಕಮ್ಮ. ಅಂಬುಜನಿಗೆ ನಾನು ಪ್ರಾಮಿಸ್ (Promise) ಮಾಡಿಬಿಟ್ಟಿದ್ದೇನೆ."

"ಹೋಗೋಣ ಕಮಲ – ಹೋಗೋಣ"

ಎಂದು ರುಕ್ಮಿಣಮ್ಮ ಹೇಳಿದಳು.

## ೩೧

ಮೈಸೂರಿನಲ್ಲಿ ಲಾಯರ್ಸ್ ಕಾನ್‌ಫರೆನ್ಸಿನ ವ್ಯವಸ್ಥೆ ಜಗನ್ಮೋಹನ್ ಬಂಗಲೆಯ ಭವ್ಯ ಸಭಾಮಂದಿರದಲ್ಲಿ ಹುರುಪಿನಿಂದ ಸಾಗಿತ್ತು. ಶ್ರೀಮನ್ಮಹಾರಾಜರು ಕಾನ್‌ಫರೆನ್ಸಿನ ಉದ್ಘಾಟನೆ ಮಾಡಲು ಒಪ್ಪಿಕೊಂಡಿದ್ದುದು ಸಭೆಗೆ ವಿಶೇಷ ಕಳೆಯನ್ನುಂಟು ಮಾಡಿತ್ತು.

ಮಾಧವರಾಯ, ಸಂಸಾರ ಸಮೇತನಾಗಿ ಸಮ್ಮೇಳನಕ್ಕೆ ಹೋಗಿದ್ದ. ಅವನಿಗೂ ಅವನ ಕುಟುಂಬದವರಿಗೂ ಸರ್ಕಾರದ ಅತಿಥಿ ಗೃಹದಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಮಂಡ್ಯಕ್ಕೆ ಮಂಡ್ಯವೇ ಸಮ್ಮೇಳನಕ್ಕೆ ಬಂದಿತ್ತು.

ಸಮ್ಮೇಳನದ ದಿನ ಅಧ್ಯಕ್ಷರನ್ನು ಮೆರವಣಿಗೆ ಮಾಡಿಕೊಂಡು ಸಭಾಮಂದಿರಕ್ಕೆ ಕರೆತರಲಾಯಿತು.

ಮೆರವಣಿಗೆ ಹೊರಡುವುದಕ್ಕೆ ಮುಂಚೆಯೇ ರುಕ್ಮಿಣಿ ತನ್ನ ಪರಿವಾರದೊಂದಿಗೆ ಕಾರಿನಲ್ಲಿ ಹೊರಟು, ನಾಲ್ಕು ಕಡೆ ನಿಂತು ಮೆರವಣಿಗೆ ಕಣ್ತುಂಬ ನೋಡಿದಳು.

ಅಧ್ಯಕ್ಷರು ಸಭಾಮಂದಿರ ಸೇರಿದ ಕೆಲವೇ ನಿಮಿಷಗಳಲ್ಲಿ ಆಳುವ ಮಹಾಸ್ವಾಮಿಯವರು ನಾಲ್ಕು ಕುದುರೆ ಕಟ್ಟಿದ ಸಾರೋಟಿನಲ್ಲಿ ದಯ ಮಾಡಿಸಿದರು. ಅಧ್ಯಕ್ಷರು, ಸ್ವಾಗತಾಧ್ಯಕ್ಷರು, ಸ್ವಾಗತಸಮಿತಿಯ

ಸದಸ್ಯರು ಮಹಾದ್ವಾರದಲ್ಲಿ ನಿಂತುಕೊಂಡು ಮಹಾಸ್ವಾಮಿಯವರಿಗೆ ಸ್ವಾಗತ ಬಯಸಿದರು.

ಆಸ್ಥಾನವಿದ್ವಾನ್ ಸ್ವರಮೂರ್ತಿ ವಿ. ಎನ್. ರಾಯರು ದೇವತಾ ಪ್ರಾರ್ಥನೆ ಮಾಡಿ, ಸ್ವಾಗತಗೀತೆಯನ್ನು ಓದಿದಮೇಲೆ ಸ್ವಾಗತಾಧ್ಯಕ್ಷರಾದ ಶ್ರೀ ಎಂ. ಲಕ್ಷ್ಮೀನಾರಾಯಣರಾಯರು ಸ್ವಾಗತಭಾಷಣ ಮಾಡಲು ನಿಂತರು.

ಲಕ್ಷ್ಮೀನಾರಾಯಣರಾಯರು ಮೈಸೂರು ಜನತೆಯ ನಾಯಕರಾಗಿ, ಕರ್ಮಯೋಗಿಗಳಾಗಿ, ತ್ಯಾಗಶೀಲರಾಗಿ ಲೋಕಮನ್ನಣೆಗೆ ಪಾತ್ರರಾಗಿದ್ದರು. ಅವರು ಭಾಷಣಕ್ಕೆ ನಿಂತಕೂಡಲೆ ಸಭೆ ಶಾಂತವಾಯಿತು. ರಾಯರು ಮಹಾಸ್ವಾಮಿಯವರಿಗೆ ಸ್ವಾಗತ ಬಯಸಿ, ಅಧ್ಯಕ್ಷರ ಪರಿಚಯ ಮಾಡಿಕೊಡುತ್ತಾ, ಮಾಧವರಾಯರ ವೃತ್ತಿಧರ್ಮ, ಭಗವದ್ಭಕ್ತಿ, ತ್ಯಾಗಜೀವನವನ್ನು ಪ್ರಶಂಸಿಸಿ

"ಈ ಸಂದರ್ಭದಲ್ಲಿ ನಾನು ನಮ್ಮ ಮಾನ್ಯ ಅಧ್ಯಕ್ಷರ ಸತೀಮಣಿ ಮಾತೃಶ್ರೀ ರುಕ್ಮಿಣಮ್ಮನವರ ಬಗ್ಗೆ ಒಂದು ಮಾತು ಹೇಳದಿದ್ದರೆ ಅಪಚಾರವಾದೀತು. ನಮ್ಮ ಅಧ್ಯಕ್ಷರ ಸಮಸ್ತ ಕೀರ್ತಿ, ಸೇವೆ, ಔನ್ನತ್ಯಕ್ಕೂ ಅವರ ಸೌಭಾಗ್ಯವತಿಯವರ ದೈವಿಕಜೀವನವೇ ಕಾರಣವೆಂಬುದು ಸತ್ಯಸಂಗತಿ. ಮಂಡ್ಯದಲ್ಲಿ ಇನ್‌ಫ್ಲುಯಂಜಾ ಬೇನೆ ಕಾಳ್ಗಿಚ್ಚಿನಂತೆ ವ್ಯಾಪಿಸಿದಾಗ ಈ ಮಹಾತಾಯಿ, ಜೀವದ ಮೇಲಣ ಆಸೆದೊರೆದು ರೋಗಪೀಡಿತರ ಸೇವೆ ಮಾಡಿದುದು· ನಮ್ಮ ದೇಶದ ಇತಿಹಾಸದಲ್ಲಿ ಸ್ವರ್ಣಾಕ್ಷರಗಳಿಂದ ಬರೆದಿಡಬೇಕಾದ ಮಹಾಸಂಗತಿ."

ಸಭಾಸದರು ಉತ್ಸಾಹದಿಂದ ಕರತಾಡನ ಮಾಡಿದರು.

ಶ್ರಾವಕವರ್ಗದಲ್ಲಿ, ಹೆಣ್ಣುಮಕ್ಕಳ ಕಡೆ ಕುಳಿತಿದ್ದ ರುಕ್ಮಿಣಮ್ಮ ತಲೆ ಬಗ್ಗಿಸಿ ಮೆಲ್ಲನೆ ಪಕ್ಕದಲ್ಲಿದ್ದ ಕಮಲನಿಗೆ

"ನಡೆಯಿರೇ – ಹೋಗೋಣ – ಎಲ್ಲಾ ನಮ್ಮ ಕಡೆ ನೋಡುತ್ತಿದ್ದಾರೆ"

ಎಂದಳು. ಕಮಲ ಮಹೋತ್ಸಾಹದಲ್ಲಿದ್ದಳು.

" ಸುಮ್ಮನಿರಮ್ಮ – ಈಗ ಹೋಗುವುದೆಂದರೇನು – ಅಣ್ಣನ ಭಾಷಣ ಕೇಳಬೇಕು" ಎಂದಳು.

ರುಕ್ಮಿಣಿ ಬಗ್ಗಿಸಿದ ಕತ್ತು ಮೇಲಕ್ಕೆತ್ತಲಿಲ್ಲ.

ಸ್ವಾಗತಾಧ್ಯಕ್ಷರ ಭಾಷಣವಾದ ಕೂಡಲೆ ಆಳುವ ಮಹಾಸ್ವಾಮಿಯವರು ಉದ್ಘಾಟನೆ ಮಾಡಿದರು. ಅವರೂ ಮಂಡ್ಯದ ಇನ್‌ಫ್ಲುಯಂಜಾ ಕಾಲದಲ್ಲಿ ರುಕ್ಮಿಣಿ ಮಾಡಿದ ಸೇವೆಯನ್ನು ತಮ್ಮ ಭಾಷಣದಲ್ಲಿ ಪ್ರಶಂಸಿಸುತ್ತಾ

" ನಮ್ಮ ದೇಶದ ಆಧಾರಶಕ್ತಿ ಶ್ರೀ ಚಾಮುಂಡೇಶ್ವರಿ ಅಮ್ಮನವರು. ಆ ಮಹಾಜನನಿಯೇ ಮಂಡ್ಯದಲ್ಲಿ ಮಾ|| ಶ್ರೀ|| ಸೌ|| ರುಕ್ಮಿಣಿಯಮ್ಮನವರ ರೂಪದಲ್ಲಿ ಅವತರಿಸಿ ತನ್ನ ಮಕ್ಕಳನ್ನು ರಕ್ಷಿಸಿದಳೆಂದು ನಾವು ದೃಢವಾಗಿ ನಂಬಿದ್ದೇವೆ" ಎಂದರು.

ಶ್ರಾವಕವರ್ಗ ಹೆಣ್ಣುಮಕ್ಕಳ ಕಡೆ ನೋಡತೊಡಗಿತು. ರುಕ್ಮಿಣಿ ಮತ್ತೆ ಹೋಗುವ ಇಚ್ಛೆ ತೋರಿದಳು. ಗೋದಮ್ಮನವರು ಮೆಲ್ಲನೆ

"ಮಾಘೂ ಭಾಷಣ ಮಾಡಲಿ ತಡೆಯೇ ರುಕ್ಕೂ" ಎಂದರು.

" ನಾನಿವತ್ತು ಬರಬಾರದಾಗಿತ್ತಮ್ಮ. ಹೀಗಾಗುತ್ತದೆ ಎಂದು ನನಗೆ ತಿಳಿದಿದ್ದರೆ ಮೆರವಣಿಗೆ ನೋಡಿಕೊಂಡು ಮನೆಗೆ ಹೊರಟು ಹೋಗುತ್ತಿದ್ದೆ."

ಮಹಾಸ್ವಾಮಿಯವರ ಭಾಷಣ ಮುಗಿದಿತ್ತು. ಅಧ್ಯಕ್ಷರು ಭಾಷಣಕ್ಕೆ ನಿಂತರು. ಸ್ವಾಗತಾಧ್ಯಕ್ಷರು ಒಪ್ಪಿಸಿದ ಹಾರ ತುರಾಯಿಗಳನ್ನು ಮೇಜಿನಮೇಲಿಟ್ಟು ಅಧ್ಯಕ್ಷರು ಗಂಭೀರವಾಗಿ

" ನಮ್ಮನ್ನಾಳುವ ಮಹಾಸ್ವಾಮಿಯವರು ಈ ಸಮ್ಮೇಳನಕ್ಕೆ ದಯಮಾಡಿಸಿ, ನಮಗೆಲ್ಲಾ ಮಹದಾನಂದವನ್ನುಂಟುಮಾಡಿದ್ದಾರೆ. ನನ್ನ ಮತ್ತು ನನ್ನ ಸೌಭಾಗ್ಯವತಿಯ ಅಲ್ಪಸೇವೆಯನ್ನು ಪ್ರಶಂಸಿಸಿ ತಮ್ಮ ಔದಾರ್ಯವನ್ನು ಪ್ರಕಟಮಾಡಿದ್ದಾರೆ. ಅವರ ಆದರದ ನುಡಿಗೆ ಶಿರಬಾಗಿ ನಮಿಸುತ್ತೇನೆ.

" ಮಹಾಸ್ವಾಮಿಯವರೂ, ಸ್ವಾಗತಾಧ್ಯಕ್ಷರೂ ಅಪ್ಪಣೆ ಕೊಡಿಸಿ

ದಂತೆ ನನ್ನ ಸಕಲ ಸೌಭಾಗ್ಯ, ಅಭ್ಯುದಯ, ಕೀರ್ತಿಗೂ ನನ್ನ ಸತೀ ಶಿರೋಮಣಿಯೇ ಕಾರಣಳು. ಕಷ್ಟಮಯವಾದ ನನ್ನ ಜೀವನದ ಸಮಸ್ತ ಹೊರೆಯನ್ನೂ ಹೊತ್ತುಕೊಂಡು, ನಿತ್ಯಾನಂದದ ಬೆಳದಿಂಗಳನ್ನು ಆಕೆ ಬಿತ್ತರಿಸಿದಳು. ನಾನು ಧರಿಸಿರುವ ಹಾರ ಅವಳಿಗೂ, ನನ್ನ ಮಾತೃಶ್ರೀಗೂ, ನನ್ನನ್ನು ಸಾಕಿ ಸಲಹಿ, ಈ ವೃತ್ತಿಯಲ್ಲಿ ನಿಂತು, ತಮ್ಮೆಲ್ಲರ ಪ್ರೇಮ, ಗೌರವ ದೊರಕಿಸಿಕೊಳ್ಳಲು ಸಹಾಯ ಮಾಡಿದ ಕೀರ್ತಿಶೇಷ ಅಚ್ಯುತಪ್ಪನವರು, ಶಾಮರಾಯರು, ನಾರಾಯಣಸ್ವಾಮಿ ಅಯ್ಯಂಗಾರ್ಯರಿಗೂ ಸಲ್ಲಬೇಕು. ಅವರೆಲ್ಲರನ್ನೂ ಭಕ್ತಿಯಿಂದ ಸ್ಮರಿಸುತ್ತೇನೆ. ನನ್ನ ಅಣ್ಣತಮ್ಮಂದಿರಂತೆ ಜತೆಗಿದ್ದುಕೊಂಡು, ನನ್ನ ಎಲ್ಲಾ ಕಷ್ಟಸುಖವೂ ತಮ್ಮದೆಂಬ ಭಾವನೆಯಿಂದ ನನ್ನನ್ನು ನಡಸಿಕೊಂಡು ಬಂದಿರುವ ಶ್ರೀ ಜವರೇಗೌಡರಿಗೂ ಜನಾಬ್ ಷರೀಫ್ ಸಾಹೇಬರಿಗೂ ನನ್ನ ಕೃತಜ್ಞತೆ ಸಮರ್ಪಿಸುತ್ತೇನೆ."

ಮುಂದೆ ಸ್ವಾಗತ ಸಮಿತಿಯವರಿಗೆ ಕೃತಜ್ಞತೆ ಸೂಚಿಸಿ, ಕಾನೂನು ಕಾಯಿದೆಗಳಲ್ಲಿ ಆಗಬೇಕಾದ ತಿದ್ದುಪಾಟುಗಳನ್ನೂ ಬಡವರಿಗೆ ಸುಲಭ ನ್ಯಾಯ ದೊರೆಯುವ ರೀತಿಯಲ್ಲಿ ನ್ಯಾಯಾಲಯಗಳು ನಡೆಯಬೇಕೆಂಬ ವಿಷಯವನ್ನೂ ದೀರ್ಘವಾಗಿ ಪ್ರಸ್ತಾಪಿಸಿ

"ಕೊನೆಯದಾಗಿ, ಇನ್ನೊಂದು ಮಹತ್ತ್ವದ ವಿಷಯದ ಕಡೆಗೆ ತಮ್ಮ ಮತ್ತು ಪ್ರಭುತ್ವದ ಗಮನ ಸೆಳೆದು ನನ್ನ ಭಾಷಣ ಮುಗಿಸುತ್ತೇನೆ.

"ಕನ್ನಡ ನಮ್ಮ ತಾಯ್ನುಡಿ. ನಮ್ಮ ರಾಜವಂಶದವರೂ, ಜನಪದ ಮಾತನಾಡುವುದು ಕನ್ನಡ ಭಾಷೆ. ಭಾಷೆ ಕೇವಲ ವ್ಯವಹಾರ ಸಾಧನವಲ್ಲ. ಅದು ನಮ್ಮ ಸಂಸ್ಕೃತಿ, ನಮ್ಮ ಜನಜೀವನಗಳನ್ನು ಪ್ರತಿಬಿಂಬಿಸುತ್ತಿದೆ. ನಮ್ಮ ದೇಶದ ಶಿಕ್ಷಣ ಮಾಧ್ಯಮ ಕನ್ನಡದಲ್ಲಿರಬೇಕು, ನ್ಯಾಯಾಲಯಗಳಲ್ಲಿ ನಡೆಯುವ ಸಮಸ್ತ ವ್ಯವಹಾರವೂ ಕನ್ನಡದಲ್ಲಿರಬೇಕು ಎಂದು ಹಲವು ವರ್ಷಗಳಿಂದ ಚಳುವಳಿ ನಡೆಯುತ್ತಿದೆ. ಪ್ರಭುತ್ವ ಈ ಕಡೆಗೆ ಲಕ್ಷ್ಯಕೊಟ್ಟು ಆದಷ್ಟು ಶೀಘ್ರವಾಗಿ

ಶಿಕ್ಷಣ ಮಾಧ್ಯಮ ಮತ್ತು ಕೋರ್ಟು ಕಚೇರಿಗಳ ಭಾಷೆ ಕನ್ನಡ ವೆಂದು ಸಾರಬೇಕು. ಇದರಿಂದ ನಮ್ಮ ಭಾಷೆ ಅಭಿವೃದ್ಧಿಯಾಗುವು ದಲ್ಲದೆ ನಮ್ಮ ದೇಶವೂ ಉದ್ಧಾರವಾಗುತ್ತದೆಂದು ನಾನು ದೃಢವಾಗಿ ನಂಬಿದ್ದೇನೆ"

ಎಂದು ಹೇಳಿ ಮುಗಿಸಿದರು.

ರಾಷ್ಟ್ರಗೀತೆಯೊಂದಿಗೆ ಸಭೆ ವಿಸರ್ಜನೆಯಾಯಿತು. ಮಹಾ ಸ್ವಾಮಿಯವರು ಹೋಗುವವರೆಗೆ ಸಭಾಸದರು ಸ್ವಸ್ಥಾನಗಳಲ್ಲಿ ನಿಂತಿದ್ದರು. ಅವರು ಹೋದಮೇಲೆ ಹಲವಾರು ಜನ ವೇದಿಕೆಯ ಮೇಲೆ ಬಂದು ಮಾಧವರಾಯನ ಕೈಕುಲುಕಿ ಅಭಿನಂದನೆ ತಿಳಿಸಿದರು. ಶ್ರೀರಂಗಪಟ್ಟಣದ ಮಿತ್ರಗೋಷ್ಠಿಯೂ ಅಧ್ಯಕ್ಷರಿಗೆ ಅಭಿನಂದನೆ ಅರ್ಪಿಸಿತು.

ಮಾಧವರಾಯ ಸುತ್ತ ನೋಡುವಲ್ಲಿ ರುಕ್ಮಿಣಿ ಮತ್ತಿತರು ಹೊರಟುಹೋಗಿದ್ದರು. ಸ್ವಾಗತಾಧ್ಯಕ್ಷರ ಜತೆಯಲ್ಲಿ ಅವನು ಬಿಡಾರ ಸೇರಿದ.

ರುಕ್ಮಿಣಿ ಮತ್ತು ಮನೆಯ ಜನ ಅಂದೇ ಮಂಡ್ಯಕ್ಕೆ ಪ್ರಯಾಣ ಬೆಳಸಿದರು. ಮಾಧವರಾಯ ಸಮ್ಮೇಳನದ ಕಾರ್ಯಕ್ರಮ ಮುಗಿಸಿ ಕೊಂಡು ಬರಲು ಮೈಸೂರಿನಲ್ಲೇ ನಿಂತ.

ಮನೆಗೆ ಬಂದ ಕೂಡಲೆ ಗೋದಮ್ಮನವರು ಓಕುಳಿಮಾಡಿ ರುಕ್ಮಿಣಿಯನ್ನು ನೀವಳಿಸಿದರು.

"ಇದೇನಮ್ಮ" ಎಂದು ರುಕ್ಮಿಣಿ ಕೇಳಿದಳು.

"ಎಷ್ಟು ಕಣ್ಣು ಬಿತ್ತು ತಾಯಿ. ಎಷ್ಟು ದೃಷ್ಟಿಯಾಗಿದೆಯೋ ನಿನಗೆ."

ಮಾಧವರಾಯ ಊರಿಗೆ ಹಿಂದಿರುಗಲು ಮೂರು ದಿವಸಗ ಳಾದವು. ಅವನು ಹಿಂದಿರುಗಿದ ಕೂಡಲೆ ಮನೆಯವರೆಲ್ಲರೂ ಸುತ್ತ ಕೂಡಿಕೊಂಡು

"ಸಮ್ಮೇಳನ ಹೇಗಾಯಿತಣ್ಣ" ಎಂದು ಕೇಳಿದರು.

" ಎರಡು ದಿವಸ ನಿರ್ಣಯಗಳು, ಭಾಷಣಗಳು ಆದವು. ಕೊನೆಯಲ್ಲಿ ನಾನು ಉಪಸಂಹಾರ ಭಾಷಣ ಮಾಡಿದೆ. ಬೃಂದಾವನ ದಲ್ಲಿ ಭರ್ಜರಿ ಪಾರ್ಟಿ ವ್ಯವಸ್ಥೆಯಾಗಿತ್ತು. ಎಲ್ಲಾ ಸರ್ಕಾರಿ ಅಧಿಕಾರಿ ಗಳೂ, ಲಾಯರುಗಳೂ, ಜಡ್ಜ್‌ಗಳೂ ಬಂದಿದ್ದರು. ಕೊನೆಯತನಕ ನೀನು ಇರಬೇಕಾಗಿತ್ತು ರುಕ್ಕೂ. ಬಹಳ ಜನ ನಿನ್ನ ನೋಡಲು ಬಯಸಿದರು."

" ಇದೇನೂಂದ್ರೆ ನಿಮ್ಮ ಹುಚ್ಚು. ನಾನು ಪ್ರದರ್ಶನ ವಸ್ತುವೇ? ಭಾಷಣಗಳಲ್ಲಿ ಎಲ್ಲರೂ ನನ್ನ ವಿಷಯ ಪ್ರಸ್ತಾಪ ಮಾಡಿದಿರಿ – ನನಗೆ ತಲೆ ತಗ್ಗಿಸುವಂತಾಯಿತು.— ನಾನು ಎಷ್ಟಾದರೂ ನಿಮ್ಮ ಚರಣ ಧೂಳಿ. ನನಗೇಕೆ ಪುರಸ್ಕಾರ?"

" ದೊಡ್ಡ ವಸ್ತುವನ್ನು ನಾವು ಪೂಜಿಸುವುದು ಆ ವಸ್ತುವಿಗೆ ಬೇಕೆಂದಲ್ಲ ರುಕ್ಕೂ – ನಮ್ಮ ಆತ್ಮತೃಪ್ತ್ಯರ್ಥವಾಗಿ.'

" ನನ್ನಲ್ಲಿ ಏನೂ ದೊಡ್ಡಸ್ತಿಕೆಯಿಲ್ಲ. ನಾನೊಬ್ಬಳು ಸಾಧಾರಣ ಹೆಂಗಸು. ನನ್ನಲ್ಲಿರುವ ಯೋಗ್ಯತೆ ಎಲ್ಲ ಹೆಂಗಸರಲ್ಲಿಯೂ ಇದೆ."

ಎಂದಳು. 'ಎಲ್ಲ ಹೆಂಗಸರಲ್ಲಿಯೂ ಇದೆಯೇ?' ಎಂದು ಮಾಧವರಾಯ ವಿಚಾರಪರವಶನಾದ.

೩೨

ಕಮಲನ ಮನಸ್ಸಿಗೆ ಸ್ವಲ್ಪವೂ ಶಾಂತಿಯಿರಲಿಲ್ಲ. ತಾಯಿತಂದೆ ಯಾವ ಕಷ್ಟಕಾರ್ಪಣ್ಯ ವ್ಯಕ್ತಮಾಡದಿದ್ದರೂ ಅವರ ಪರಿಸ್ಥಿತಿ ಅಷ್ಟೇನೂ ನೆಮ್ಮದಿಯಾಗಿರಲಿಲ್ಲವೆಂಬುದು ಅವಳಿಗೆ ಚೆನ್ನಾಗಿ ಮನವರಿಕೆ ಯಾಗಿತ್ತು. ಎರಡು ವರ್ಷದ ತನ್ನ ಕಾಲೇಜ್ ಶಿಕ್ಷಣಕ್ಕೇ ಎರಡು ಸಾವಿರ ರೂಪಾಯಿ ಖರ್ಚಾಗಿತ್ತು. ಇದರ ಜತೆಗೆ ಪದ್ಮನ ಮದುವೆ, ಪ್ರಸ್ತ, ನಾಣಿಯ ಮುಂಬಯಿಯ ವಾಸ, ತಂದೆಯ ಕಾಹಿಲೆ, ಮನೆಯ ಖರ್ಚು.

ತಾಯಿ ತಂದೆಯ ಹೊರೆ ಇಳಿಸುವುದರ ಬದಲು ತನ್ನ ಹೊರೆ ಯನ್ನೂ ಅವರ ಮೇಲೇ ಹೇರಿಸುತ್ತಿರುವೆನಲ್ಲಾ ಎಂಬ ಕೊರಗು ಕಮಲನಲ್ಲಿ ಮೂಡಿತ್ತು. ಅವಳು ಅಸುಖಿಯಾಗಿದ್ದುದನ್ನು ಕಂಡು ಮಾಧವರಾಯ ಒಂದು ದಿನ

" ಕಮಲ, ಏಕಮ್ಮಾ – ಯಾವಾಗಲೂ ಏನೋ ಯೋಚಿಸು ತ್ತಿರುವೆ. ಮನಸ್ಸನ್ನು ಯಾವ ದುಃಖದ ಹುಳು ಕೊರೆಯುತ್ತಿದೆ ಹೇಳು."

" ಏನೂ ಇಲ್ಲಣ್ಣ. ನನಗೆ ಯಾವದಕ್ಕೆ ಕೊರತೆಯಾಗಿದೆ ?"

" ಯಾವದಕ್ಕೆ ಕೊರತೆಯಾಗಿದೆ ಎಂಬುದನ್ನು ಬಲ್ಲೆ. ಆದರೆ ನಾನಾಗಲಿ ನಿಮ್ಮಮ್ಮನಾಗಲಿ ಏನೂ ಮಾಡಲಾಗದ ಅಸಹಾಯಕ

ಸ್ಥಿತಿಯಲ್ಲಿರುವೆವು. ಈ ಸಾರೆ ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀ ?"

"ಚೆನ್ನಾಗಿಯೇ ಮಾಡಿದ್ದೇನೆ."

"ರ್‍ಯಾಂಕು ಬರಬಹುದೇ ?"

"ನಿರೀಕ್ಷಣೆಯಿದೆ. ಆದರೆ ಅಳಿಯನ ಕುರುಡು ಬೆಳಗಾದರೆ ತಾನೆ ತಿಳಿಯುವುದು."

"ರಿಸಲ್ಟ್ ಯಾವಾಗ ಬರುತ್ತದೆ ?"

"ಈ ತಿಂಗಳ ಕೊನೆಗೆ ಬರಬಹುದು."

"ಮುಂದೆ . . . ?"

"ಅದನ್ನೇ ಯೋಚಿಸುತ್ತಿದ್ದೇನೆ."

"ಮನಸ್ಸಿದ್ದರೆ ಎಂ.ಎಗೆ ಓದು. ಬೇಕಾದರೆ ಬಿ.ಟಿ. ಕಾಲೇಜು ಸೇರು."

"ಕಾಲೇಜು ಸಾಕಣ್ಣಾ."

"ಕಾಲೇಜ್ ಬೇಸರವಾಯಿತೇ ?"

"ಇಲ್ಲ. ಎಷ್ಟೂಂತ ನಿನ್ನ ಹಿಂಸೆಮಾಡುವುದು."

"ಹಿಂಸೆಯೇನು ಬಂತಮ್ಮ. ಗಂಡುಮಗ ಇದ್ದಿದ್ದರೆ ನಾನು ಓದಿಸುತ್ತಿರಲಿಲ್ಲವೇ ? ನಾಣಿಗೆ ಈಗಲೂ ಹಣ ಕಳಿಸುತ್ತಿಲ್ಲವೇ ?"

"ಅಣ್ಣಾ, ನಾನೊಂದು ಮಾತು ಹೇಳುತ್ತೇನೆ. ನೀವು ಅನ್ಯಥಾ ಭಾವಿಸಬಾರದು."

"ಇಲ್ಲ ತಾಯಿ – ಹೇಳು."

"ನಾನು ಕೆಲಸಕ್ಕೆ ಸೇರಬಹುದೇ ?"

"ಯಾವ ಕೆಲಸಕ್ಕೆ ?"

"ವಿಮೆನ್ಸ್ ಕಾಲೇಜುಗಳಿಗೆ ಈ ವರ್ಷ ಕೆಲವು ಲೆಕ್ಚರರುಗಳನ್ನು ತೆಗೆದುಕೊಳ್ಳುತ್ತಾರಂತೆ !"

"ನಿನ್ನ – ನಿನ್ನ ಮಕ್ಕಳ ಯೋಗಕ್ಷೇಮಕ್ಕಾಗಿ ನೀನು ಚಿಂತಿಸಬೇಕಾಗಿಲ್ಲ."

"ಅದನ್ನು ನಾನು ಬಲ್ಲೆ. ಆದರೆ ಸುಮ್ಮನೆ ಕುಳಿತು ಹೊತ್ತೇಕೆ

ಕಳೆಯಲಿ. ನನ್ನ ಪರಿಸ್ಥಿತಿಯಲ್ಲಿ ಸುಮ್ಮನೆ ಕುಳಿತಿರುವುದಕ್ಕಿಂತಲೂ ಹೆಚ್ಚಿನ ಶಿಕ್ಷೆಯಿಲ್ಲ."

"ನಿಮ್ಮ ತಾಯಿಯನ್ನು ಕೇಳಿದೆಯಾ?"

"ಕೇಳಿದೆ."

"ಅವಳೇನು ಹೇಳಿದಳು?"

"ನೀನು ಹೇಗೆ ಹೇಳಿದರೆ ಹಾಗೆ ಮಾಡೆಂದಳು."

"ನನ್ನ ಮಗಳು ಹೊಟ್ಟೆಯಪಾಡಿಗಾಗಿ ದುಡಿಯಬೇಕೇ?"

"ಮಗನಿದ್ದರೆ ದುಡಿಯುತ್ತಿರಲಿಲ್ಲವೇ?"

"ಹೆಣ್ಣುಮಕ್ಕಳಿಗಿರುವ ಕಷ್ಟ ಗಂಡುಮಕ್ಕಳಿಗಿಲ್ಲ."

"ಅದನ್ನು ನಾನು ಬಲ್ಲೆ."

"ನಿಮ್ಮಮ್ಮ ಕನಸುಗಾತಿ. ಅವಳು ಆದರ್ಶ ಸ್ತ್ರೀ – ಲೋಕವೆಲ್ಲಾ ಅವಳಿಗೆ ಸತ್ಯಮಯ – ಸೌಂದರ್ಯಮಯ – ಸದ್ಗುಣಮಯ. ನಾನು ಲಾಯರು. ಕೋರ್ಟಿನಲ್ಲಿ ನಿತ್ಯವೂ ಮಾನವನ ಅಲ್ಪತನ, ಲೋಭ, ದುರಾಶೆ, ಈರ್ಷೆಗಳನ್ನು ನೋಡುತ್ತಿರುತ್ತೇನೆ."

"ಲೋಕದಲ್ಲಿ ಸತ್ಯ – ಅಸತ್ಯ, ಕತ್ತಲೆ – ಬೆಳಕು, ಸದ್ಗುಣ – ದುರ್ಗುಣ ಎಲ್ಲವೂ ಇದೆ. ನಮಗೆ ಬೇಕಾದುದನ್ನು ನಾವು ಆರಿಸಿಕೊಳ್ಳಬಹುದು ಎಂದು ಅಮ್ಮ ಹೇಳುತ್ತಿರುತ್ತಾಳೆ. ನಾನು ಅಮ್ಮನ ಮಗಳು. ಅವಳ ಸಂದೇಶದಲ್ಲಿ ನನಗೆ ನಂಬಿಕೆಯಿದೆ."

"ನಿನ್ನ ಸತ್ಯ, ಶೀಲವನ್ನು ಕಾಪಾಡಿಕೊಳ್ಳುವ ಶಕ್ತಿ ನಿನಗಿದೆಯೆಂಬುದನ್ನು ನಾನೂ ಬಲ್ಲೆ ಕಮಲ."

"ಹಾಗಾದರೆ ಅನುಮತಿ ಕೊಡು."

"ಆಗಲಿ ಯೋಚನೆಮಾಡುತ್ತೇನೆ"

ಎಂದು ಹೇಳಿದ.

ಕಮಲನ ಪ್ರಾರ್ಥನೆ ರುಕ್ಮಿಣಿಯ ಮನಸ್ಸಿನಲ್ಲಿಯೂ ಮೊರೆಯುತ್ತಿತ್ತು. ಈ ಬಗ್ಗೆ ಪತಿಯೊಂದಿಗೆ ಸಮಾಲೋಚನೆ ನಡೆಸಲು, ಅವನೊಬ್ಬನೇ ಕುಳಿತಿದ್ದಾಗ ರುಕ್ಮಿಣಿ ಬಂದಳು. ಅದನ್ನೇ ಕುರಿತು

ಯೋಚಿಸುತ್ತಿದ್ದ ಮಾಧವರಾಯ

"ಕಮಲ ಹೇಳಿದುದು ಕೇಳಿದೆಯಾ" ಎಂದ.

"ಯಾವ ವಿಷಯ?"

"ಅವಳು ಕೆಲಸಕ್ಕೆ ಸೇರಬೇಕಂತೆ."

"ನನಗೂ ಹೇಳಿದಳು. ನಿಮ್ಮನ್ನು ಕೇಳು ಎಂದು ಹೇಳಿದೆ."

"ಕಮಲನಿಗೆ ಒಂದು ದಾರಿಯಾಗಬೇಕಾದುದು ಅಗತ್ಯ."

"ಕೆಲಸಕ್ಕವಳು ಪ್ರಯತ್ನಿಸಿದರೆ ಸಿಕ್ಕಬಹುದೇ?"

"ಸಿಕ್ಕುತ್ತದೆ."

"ಏತಕ್ಕಾಗಿ ಅನುಮಾನಿಸುತ್ತಿದ್ದೀರಿ?"

"ನಾನು ಜೀವಂತನಾಗಿರುವಾಗಲೇ ನನ್ನ ಮಕ್ಕಳು – ಹೆಣ್ಣು ಮಕ್ಕಳು ಹೊಟ್ಟೆಯಪಾಡಿಗೆ ದುಡಿಯಬೇಕಾಯಿತಲ್ಲ!"

"ದುಡಿದು ಅನ್ನ ಸಂಪಾದಿಸಿಕೊಳ್ಳುವುದು ಅಗೌರವವಲ್ಲ. ಕಮಲ ಹೇಳುವ ಹಾಗೆ, ಅವಳ ಕೈತುಂಬ ಕೆಲಸವಿರುವುದು ಒಳ್ಳೆಯದು."

"ನಾನು ಯೋಚಿಸುತ್ತಿರುವುದು ಅದಕ್ಕಾಗಿಯಲ್ಲ ರುಕ್ಕೂ."

"ಇನ್ನು ಏತಕ್ಕಾಗಿ?"

"ಕಮಲ ಮನೆಯಲ್ಲಿದ್ದರೆ ನಿನಗೆ ಸ್ವಲ್ಪ ನೆರವಾಗುತ್ತದೆ ಎಂದು ಲೆಕ್ಕ ಹಾಕಿಕೊಂಡಿದ್ದೆ."

"ನನ್ನ ಯೋಗಕ್ಷೇಮ ನೋಡಿಕೊಳ್ಳುವುದಕ್ಕೆ ನೀವಿಲ್ಲವೇ - ಅಮ್ಮ ಇಲ್ಲವೇ?"

"ನಾನು ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ. ನನ್ನ ಹೊರೆ ನಿನ್ನ ಮೇಲೆ ಹಾಕದಿದ್ದರೆ ಸಾಕಾಗಿದೆ ನನ್ನ ಜನ್ಮವೆಲ್ಲಾ ಕಾಹಿಲೆ ಕಸಾಲೆ ಬಿದ್ದು ನಿನ್ನ ಕೈಯಲ್ಲಿ ಸೇವೆ ಶಿಶ್ರೂಷೆ ಮಾಡಿಸಿಕೊಳ್ಳುವುದರಲ್ಲಿಯೇ ಕಳೆದು ಹೋಯಿತು."

"ಪೇಚಾಡಿಕೊಳ್ಳಬೇಡಿ. ಅನುಭವಿಸಬೇಕಾದುದನ್ನು ಅನುಭವಿಸಲೇಬೇಕು. ಬೇಡವೆಂದರೆ ಕರ್ಮ ಬಿಡುತ್ತದೆಯೇ? ಅನುಭವಿ

ಸುವುದನ್ನು ಸಂತೋಷವಾಗಿ ಅನುಭವಿಸೋಣ."

"ಕಮಲನಿಗೇನು ಹೇಳುವುದು ?"

"ಅವಳ ಮನಸ್ಸಿಗೆ ವಿರುದ್ಧವಾಗಿ ನಾವೇಕೆ ಹೋಗಬೇಕು. ತನ್ನ ವಿದ್ಯೆಯನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ಅವಳು ಬಯಸುತ್ತಿರುವಾಗ ನಾವೇಕೆ ಅಡ್ಡಿಯಾಗಬೇಕು."

"ನೀನು ಹೇಳಿದಂತೆಯೇ ಆಗಲಿ."

"ಕೆಲಸಕ್ಕೆ ಸ್ವಲ್ಪ ಪ್ರಯತ್ನಮಾಡಿ."

"ಪದ್ಮನಾಭಯ್ಯನವರಲ್ಲಿ ವಿಚಾರ ಮಾಡುತ್ತೇನೆ. ವಿಶ್ವವಿದ್ಯಾ ನಿಲಯದ ಅಧಿಕಾರ ವರ್ಗಕ್ಕೂ ಅವರಿಗೂ ಬಳಕೆಯಿದೆ.–ನಾಣಿಯಿಂದ ನಾನು ಬಹಳ ನಿರೀಕ್ಷಿಸಿಕೊಂಡಿದ್ದೆ ರುಕ್ಕೂ. ಅವನಿಗೆ ತನ್ನ ಯಶಸ್ಸಲ್ಲದೆ ಇನ್ನೇನೂ ಬೇಕಾಗಿಲ್ಲ."

"ಅವನ ಜೀವನವೂ ಅಚ್ಚುಗಟ್ಟಾಗಿ ರೂಪುಗೊಳ್ಳುತ್ತಿದೆ. ಹುಟ್ಟಿದ ಮನೆಗೆ ಅವನು ಕೀರ್ತಿಯನ್ನೇ ತಂದಿದ್ದಾನೆ."

"ಕೀರ್ತಿಗಿಂತಲೂ ಮುಖ್ಯವಾದ ವಿಷಯಗಳಿವೆ ರುಕ್ಕೂ— ಹೋಗಲಿ ಬಿಡು. ಅವನ ವಿಷಯ ಚರ್ಚೆ ಮಾಡಿ ಏನು ಸಾರ್ಥಕ. ವೃಥಾ ನಿನ್ನ ಮನಸ್ಸಿಗೆ ಪೇಚಾಟವಾಗುತ್ತದೆ." ಎಂದ.

ತನ್ನ ಮನಸ್ಸಿನೊಳಗಾಗುತ್ತಿದ್ದ ಆಂದೋಲನವನ್ನು ರುಕ್ಮಿಣಿ ತೋರಗೊಡಲಿಲ್ಲ. ನಾರಾಯಣಸ್ವಾಮಿಯ ಅನಾಸಕ್ತಿ ಅವಳ ಹೃದಯ ವನ್ನಿರಿದು ಘಾಯಮಾಡಿತ್ತು. ರುಕ್ಮಿಣಿ ತನ್ನ ಸಹನೆಯ ಎಲ್ಲೆಯನ್ನು ವಿಸ್ತರಿಸಿಕೊಳ್ಳುತ್ತಿದ್ದಳು.

೩೩

ಒಂದು ಶುಕ್ರವಾರ ರುಕ್ಮಿಣಿ ವಿಜೃಂಭಣೆಯಿಂದ ಪೂಜೆ ನಡಸಿದಳು. ಬಗೆಬಗೆಯ ಹೂಗಳಿಂದ ದೇವರನ್ನು ಅಲಂಕರಿಸಿ, ದೀಪಸಾಲು ಹಚ್ಚಿಟ್ಟು ಪರಮಭಕ್ತಿಯಿಂದ ಪೂಜೆ ನೆರವೇರಿಸಿದಳು. ಮಧ್ಯಾಹ್ನ ಹನ್ನೆರಡು ಜನ ಮುತ್ತೈದೆಯರನ್ನು ಬರಮಾಡಿಕೊಂಡು, ಅವರಿಗೆ ತಟ್ಟೆಯತುಂಬ ಹಣ್ಣುಹಂಪಲು ಕೊಟ್ಟು ನಮಸ್ಕರಿಸಿದಳು.

ರುಕ್ಮಿಣಿಯ ಪೂಜೆಯ ಕಾರಣ ಯಾರಿಗೂ ಅರಿವಾಗಲಿಲ್ಲ. ಗೋದಮ್ಮನವರು ಯೋಚನೆಗೀಡಾಗಿದ್ದರು. ಮುತ್ತೈದೆಯರು ಹೋದಮೇಲೆ, ಗಂಡನಿಗೆ ಸ್ನಾನ ಮುಗಿಸಿಕೊಂಡು ಬನ್ನಿರೆಂದು ಹೇಳಿದಳು.

ಮಾಧವರಾಯ ಸ್ನಾನ ಮುಗಿಸಿಕೊಂಡು ಬರಲು, ದೇವರ ಮನೆಯಲ್ಲಿ ಮಣೆ ಹಾಕಿ ಅವನನ್ನು ಕೂಡಿಸಿ, ಅವನ ಪಾದ ತೊಳೆದು ಪೂಜಿಸಿ, ಪಾದೋದಕ ಸ್ವೀಕರಿಸಿದಳು.

" ಇದೇನು ರುಕ್ಕೂ " ಎಂದು ಮಾಧವರಾಯ ಕೇಳಿದ.

" ನಿಧಾನವಾಗಿ ಹೇಳುತ್ತೇನೆ " ಎಂದಳು.

ಮಕ್ಕಳಿಗೆಲ್ಲಾ ತೀರ್ಥಪ್ರಸಾದ ಕೊಡುತ್ತಾ ಕಮಲನಿಗೆ

" ಕೆಲಸ ಬೇಗನೆ ಸಿಕ್ಕುತ್ತದೆ ಕಮಲ. ಯೋಚನೆ ಮಾಡಬೇಡ. ಇವತ್ತು ನಾಳೆಯಲ್ಲಿಯೇ ಕಾಗದ ಬರುತ್ತದೆ " ಎಂದಳು.

ಮನೆಯಲ್ಲಿ ಪಾಯಿಸದಡಿಗೆ. ಎಲ್ಲರ ಊಟವೂ ಮುಗಿಯಿತು. ರುಕ್ಮಿಣಿಯೂ ಪ್ರಸಾದ ಸ್ವೀಕರಿಸಿದಳು. ಕುತೂಹಲಗ್ರಸ್ತನಾಗಿದ್ದ ಮಾಧವರಾಯ

" ಪೂಜೆಗೇನಾದರೂ ವಿಶೇಷವಿತ್ತೇ ರುಕ್ಕೂ " ಎಂದು ಕೇಳಿದ.

" ರಾತ್ರಿ ಒಳ್ಳೆಯ ಕನಸಾಯಿತು. ಧರ್ಮಸ್ಥಳದ ಮಂಜುನಾಥ ಸ್ವಾಮಿ ಕನಸಿನಲ್ಲಿ ಕಾಣಿಸಿಕೊಂಡ. ಕಮಲನ ವಿಷಯ ನಿವೇದಿಸಿ ಕೊಂಡೆ. ಸ್ವಾಮಿ ನಗುತ್ತಾ 'ನೀನು ಕೇಳದೆಯೇ ನಿನ್ನ ಕೆಲಸ ಮಾಡಿದ್ದೇನೆ ರುಕ್ಮಿಣಿ' ಎಂದು ಹೇಳಿದ. ಈ ಮೊದಲೇ ನಾನು ಒಂದು ಸೇವೆ ಮಾಡಬೇಕಾಗಿತ್ತು. ಕಮಲನಿಗೆ ಕೆಲಸವಾದರೆ ಖಂಡಿತ ಧರ್ಮಸ್ಥಳಕ್ಕೆ ಬಂದು ಸೇವೆ ಮಾಡುತ್ತೇನೆ ಎಂದು ಹೇಳಿದೆ. 'ಬಾ, ಮಗಳೇ' ಎಂದು ಸ್ವಾಮಿ ಪ್ರೀತಿಯಿಂದ ಆಹ್ವಾನಿಸಿದ – ನಿಮ್ಮ ಹೊರೆ ನಾನು ಮತ್ತೆ ಹೆಚ್ಚಿಸುತ್ತಿದ್ದೇನೆ."

" ಈ ಮೊದಲೇ ಯಾವಾಗ ಹರಸಿಕೊಂಡಿದ್ದೆ ? "

" ನೀವು....ಕಾಹಿಲೆ ಬಿದ್ದಿದ್ದಾಗ....! "

" ಹೊರೆಯೆಂದೆಯಲ್ಲ – ಯಾವ ಹೊರೆ ? "

" ಪುನಃ ತೀರ್ಥಯಾತ್ರೆಯ ಖರ್ಚು. ಸಾಲಗಳು ಬೇರೆ ನಿಮ್ಮ ಮನಸ್ಸನ್ನು ಬಾಧಿಸುತ್ತಿವೆ."

" ರುಕ್ಮಿಣಿ, ನಾನೊಂದು ಅಪರಾಧ ಮಾಡಿದ್ದೇನೆ. ನಿನ್ನ ಕ್ಷಮೆ ಕೇಳಬೇಕಾದುದು ನನ್ನ ಕರ್ತವ್ಯ."

" ನೀವು ಏನುಮಾಡಿದರೂ ನನಗೆ ಅಪರಾಧವಾಗಿ ಕಾಣುವುದಿಲ್ಲ. ಹೇಳಿ. "

" ಕಳೆದ ಸಲ ನಾನು ಕಾಹಿಲೆ ಬಿದ್ದಾಗ ಉಳಿಯುವ ಭರವಸೆ ಯಿರಲಿಲ್ಲ. ನೀನು ಯಮನೊಂದಿಗೆ ಹೋರಾಡಿ ನನ್ನನ್ನು ಉಳಿಸಿ ಕೊಂಡೆ. ನಿಮ್ಮ ಮೇಲೆ ಸಾಲ ಹೇರಿ ಹೋಗಲು ನಾನು ಅಳುಕಿದೆ. ಶೇಷಪ್ಪನವರನ್ನು ಬರಮಾಡಿಕೊಂಡು ಸಾಲ ತೀರಿಸುವ ವ್ಯವಸ್ಥೆ ಮಾಡಿದೆ."

" ಏನು ವ್ಯವಸ್ಥೆ ಮಾಡಿದಿರಿ ? "

" ಪಟ್ಟಣದ ಮನೆಮಾರಿ ಎಲ್ಲಾ ಸಾಲ ತೀರಿಸಿಬಿಟ್ಟೆ. ಅದರ ಬಾಬತ್ತೇ ಇನ್ನೂ ಸ್ವಲ್ಪ ಹಣ ಉಳಿದಿದೆ. ನೀನು ತೀರ್ಥಯಾತ್ರೆಗಾಗಿ ಯೋಚಿಸಬೇಕಾಗಿಲ್ಲ. ಮನೆ ಮಾರಿಬಿಟ್ಟನೆಂದು ಅಸಮಾಧಾನ ವಾಯಿತೇ ? "

" ಮನೆಗಳಿಗೂ ನಮಗೂ ಋಣಾನುಬಂಧವಿಲ್ಲ. ನಮ್ಮ ದೊಡ್ಡ ಆಸ್ತಿ ಭಗವದ್ಭಕ್ತಿ. ಅದೊಂದು ಉಳಿದರೆ ಸಾಕು. ಪಟ್ಟಣದ ಮನೆ ಯಾರು ತೆಗೆದುಕೊಂಡರು ? "

" ಶೇಷಪ್ಪನವರೇ ತೆಗೆದುಕೊಂಡರು. "

" ಬಹಳ ಸಂತೋಷ. ಗೌಡರಿಗೆ ಈ ವಿಷಯ ಗೊತ್ತಾಯಿತೇ ?"

" ಇಲ್ಲ ಯಾರಿಗೂ ತಿಳಿಸಬೇಡಿಯೆಂದು ಶೇಷಪ್ಪನವರಿಗೆ ಹೇಳಿದ್ದೇನೆ. "

" ಪಟ್ಟಣದ ಮನೆಕಟ್ಟಿಸುವುದಕ್ಕೆ ಗೌಡರು ಎಷ್ಟು ಕಷ್ಟಪಟ್ಟರು. ಈ ವಿಷಯ ತಿಳಿದರೆ ಅವರು ನೊಂದುಕೊಳ್ಳುತ್ತಾರೆ. "

" ಹೌದು. ಗೌಡರ ಋಣಭಾರ ನನ್ನ ಮೇಲೆ ವಿಪರೀತವಾಗಿದೆ. ಅದನ್ನು ಸ್ವಲ್ಪವಾದರೂ ನೀಗಿಕೊಳ್ಳಲು ನಾನು ಹೀಗೆ ಮಾಡ ಬೇಕಾಯಿತು. "

" ಅವರ ಸಾಲ ತೀರಿಸಿಬಿಟ್ಟರಾ ? "

" ಶೇಷಪ್ಪನವರ ಕೈಯಲ್ಲೇ ಕೊಡಿಸಿಬಿಟ್ಟೆ."

" ಒಳ್ಳೆಯ ಕೆಲಸವಾಯಿತು. ಕಮಲನ ಕೆಲಸದ ವಿಷಯ ವೇನಾಗುತ್ತದೆ ನೋಡಿಕೊಂಡು ಧರ್ಮಸ್ಥಳಕ್ಕೆ ಹೋಗಿಬರೋಣ."

" ಆಗಬಹುದು. ನರಸಿಂಹಮೂರ್ತ್ಯಾಚಾರ್ಯರಿಗೆ ಹೇಳಿಕಳಿಸ ಬೇಕಲ್ಲವೇ ? "

" ಹೌದು. ಅವರು ಜತೆಯಲ್ಲಿರುವುದು ಒಳ್ಳೆಯದು " ಎಂದಳು.

ಶನಿವಾರದ ಟಪಾಲಿನಲ್ಲಿ ಕಮಲನಿಗೆ ಆರ್ಡರ್ ಬಂದಿತು. ಕಾಗದ ಒಡೆದು ನೋಡಿಕೊಂಡು ಅವಳು ಉತ್ಸಾಹದಿಂದ

" ಅಮ್ಮ, ನಿನ್ನ ಮಾತು ಕುರ್ತೇಟು " ಎಂದಳು.

" ಏಕೆ ಕಮಲ ? "

" ಒಂದೆರಡು ದಿವಸಗಳಲ್ಲಿಯೇ ಕಾಗದ ಬರುವುದೆಂದು ಹೇಳಿದೆಯಲ್ಲವೇ ? "

" ಹೌದು."

" ಆರ್ಡರ್ ಬಂದಿದೆ."

" ಕೆಲಸಕ್ಕೆ ಯಾವಾಗ ಹೋಗಬೇಕು ? "

" ಬುಧವಾರ ಕೆಲಸದ ಮೇಲೆ ಹಾಜರಾಗಬೇಕೆಂದು ಆರ್ಡರ್ ನಲ್ಲಿದೆ."

" ಯಾವ ಊರು ಹೇಳಲೇ ಇಲ್ಲವಲ್ಲ."

" ಬೆಂಗಳೂರಿಗೆ ಹಾಕಿದ್ದಾರಮ್ಮ."

" ಒಳ್ಳೆಯದೇ ಆಯಿತು. ರಾಮು, ಶ್ರೀದೇವಿ ಜತೆಯಲ್ಲಿ ನೀನಿರಬಹುದು."

" ಅಮ್ಮ – ಅವರಿಗೆ ಭಾರವಾಗಲು ನನಗೆ ಇಷ್ಟವಿಲ್ಲ. ಅವರದೂ ಸಂಸಾರ ನಡೆಯಬೇಕಲ್ಲವೇ ? ರಾಮೂಗೆ ಬರುವ ಸಂಬಳವಾದರೂ ಎಷ್ಟು ? "

" ನೀನೊಬ್ಬಳೇ ಬೆಂಗಳೂರಿನಲ್ಲಿ ಹೇಗಿರುತ್ತೀ ಕಮಲ ? "

" ರಾಮು ಮನೆಯ ಸಮೀಪದಲ್ಲಿ ಮನೆ ಸಿಕ್ಕಿದರೆ ನಾನು ಮಕ್ಕಳೊಂದಿಗಿರುತ್ತೇನೆ. ಸಾವಿತ್ರಮ್ಮ ನನ್ನ ಜತೆಯಲ್ಲಿರಲಿ."

" ರಾಮು, ಶ್ರೀದೇವಿ ನೊಂದುಕೊಳ್ಳುತ್ತಾರಲ್ಲೇ ಕಮಲ."

" ಮನೆ ಸಿಕ್ಕುವವರೆಗೆ ಅವರ ಮನೆಯಲ್ಲಿಯೇ ಇರುತ್ತೇನಮ್ಮ."

" ನೀನು ಸೋಮವಾರವೇ ಪ್ರಯಾಣ ಮಾಡಬೇಕು."

" ಹೌದು."

ರುಕ್ಮಿಣಿ ಗಂಡನ ಕೈಯಲ್ಲಿ ಅಂದೇ ರಾಮೂಗೆ ಕಾಗದ ಬರೆಸಿ ಹಾಕಿದಳು.

ಸೋಮವಾರ ಕಮಲನ ಜತೆಯಲ್ಲಿ ರುಕ್ಮಿಣಿಯೂ ಹೋಗಿ,

ಅವಳಿಗೆ ಮನೆ ಮಾಡಿ, ಎಲ್ಲಾ ವ್ಯವಸ್ಥೆ ಮಾಡಿ ಬರುವುದೆಂದು ನಿಶ್ಚಯ ವಾಯಿತು.

ಶನಿವಾರ, ಭಾನುವಾರ ಕಮಲನಿಗೆ ಸ್ವಲ್ಪವೂ ಪುರಸತ್ತಿರಲಿಲ್ಲ. ಎಲ್ಲರಿಗೂ ಹೇಳಿ ಹತ್ತಾರು ಕಡೆ ಕಾಫಿ, ಉಪಾಹಾರ ಸ್ವೀಕರಿಸುವುದೇ ಆಯಿತು. ಕಮಲನಿಗೆ ಔತಣ ಮಾಡಲಿಲ್ಲವೆಂದು ಸುನಂದಮ್ಮ, ಪಂಕಜಮ್ಮ ವಿಷಾದಪಟ್ಟುಕೊಂಡರು.

ರುಕ್ಮಿಣಿ, ಗೋದಮ್ಮ ಒಂದು ಸಂಸಾರಕ್ಕಾಗುವಷ್ಟು ಪಾತ್ರೆ ಪದಾರ್ಥಗಳನ್ನು ಅಣಿಮಾಡಿದರು.

ಸೋಮವಾರ ಪ್ರಯಾಣ ನಿಶ್ಚಯವಾಯಿತು.

ಗೋದಮ್ಮ, ಗೋಪಾಲಿ, ಸೌಭಾಗ್ಯನನ್ನಪ್ಪಿಕೊಂಡು ಒಂದೇ ಸಮನೆ ಕಣ್ಣೀರ್ಗರೆದರು.

ಸೋಮವಾರ ಬೆಂಗಳೂರಿಗೆ ಬಂದವರನ್ನು ರಾಮು ನೇರವಾಗಿ ತನ್ನ ಮನೆಗೇ ಕರೆದುಕೊಂಡು ಹೋದ. ತಾಯಿಯನ್ನು ಕಾಣಲು ಪದ್ಮನೂ ಅಲ್ಲಿಗೇ ಬಂದಳು.

ರುಕ್ಮಿಣಿ ಇಚ್ಛಿಸಿದಂತೆ ಗುರುವಾರ ಹೊರಡಲು ಸಾಧ್ಯವಾಗಲಿಲ್ಲ. ಇನ್ನೂ ನಾಲ್ಕು ದಿವಸ ಬೆಂಗಳೂರಿನಲ್ಲವಳು ನಿಲ್ಲುವುದು ಅನಿವಾರ್ಯ ವಾಯಿತು. ರಾಮು ಪ್ರಯತ್ನದಿಂದ ಅವನ ಮನೆಯ ಸಮೀಪದಲ್ಲಿಯೇ ಹೊಸದಾಗಿ ಕಟ್ಟಿದ್ದ ಒಂದು ಉಪಗೃಹ (Out-house) ಹದಿನೈದೇ ರೂಪಾಯಿ ಬಾಡಿಗೆಗೆ ಸಿಕ್ಕಿತ್ತು. ಶನಿವಾರವೇ ಹೊಸಮನೆಯ ಗೃಹ ಪ್ರವೇಶ ಮಾಡಿ, ಭಾನುವಾರದಿಂದ ಅಲ್ಲಿಯೇ ಅಡಿಗೆಗೆ ಏರ್ಪಾಟು ಮಾಡಲಾಯಿತು.

ರಾಮೂ ಮನೆಯ ಔತಣ, ಸೋನಾಬಾಯಿ ಮನೆಯ ಔತಣ ಮುಗಿಸಿಕೊಂಡು ಅವರಿಬ್ಬರೂ ಓದಿಸಿದ ಸೀರೆಗಳನ್ನು ತೆಗೆದುಕೊಂಡು ರುಕ್ಮಿಣಿ ಸೋಮವಾರ ಸಂಜೆ ಊರು ತಲುಪಿದಳು.

ಗಂಡನಿಗೂ ಅತ್ತೆಗೂ ಬೆಂಗಳೂರಿನ ವರ್ತಮಾನವನ್ನೆಲ್ಲಾ

" ಯಾತ್ರೆ ಎಂದು ಹೊರಡೋಣ" ಎಂದು ಕೇಳಿದಳು.

ಮಾಧವರಾಯ ಆಶ್ಚರ್ಯಚಕಿತನಾಗಿ

" ಇದೇಸು ರುಕ್ಕೂ – ಯಾತ್ರೆಗೆ ಇಷ್ಟು ಅವಸರಪಡುತ್ತಿರುವೆ ?" ಎಂದು ಕೇಳಿದ.

" ಮಕ್ಕಳೆಲ್ಲಾ ಹೊರಟು ಹೋದರು. ಮನೆ 'ಬೆಕೋ' ಎನ್ನುತ್ತಿದೆ. ಮನೆಯಲ್ಲಿರುವುದೇ ನನಗೆ ಕಷ್ಟವಾಗಿದೆ. ಕೈಕಾಲು ಗಟ್ಟಿಯಾಗಿರುವಾಗಲೇ ಯಾತ್ರೆ ಮುಗಿಸಿಕೊಂಡು ಬರುವುದು ಒಳ್ಳೆಯ ದಲ್ಲವೇ ? "

" ನಿನ್ನ ಇಷ್ಟದಂತೆಯೇ ಆಗಲಿ. ನಾಳೆಯೇ ಧರ್ಮಸ್ಥಳಕ್ಕೆ ಕಾಗದ ಬರೆಯುತ್ತೇನೆ."

" ಕಾಗದ ಏಕೆ ಬರೆಯಬೇಕು. ಸ್ವಾಮಿ ಸೇವೆಗೆ ಹೋಗು ವುದಕ್ಕೆ ಬಾಜಾಬಜಂತ್ರಿ ಬೇಕೇ ? ಹತ್ತು ಜನ ಯಾತ್ರಿಕರಂತೆ ನಾವೂ ಹೋಗಿ ಬರೋಣ."

" ಇಲ್ಲಿಂದ ಯಾರು ಯಾರು ಹೊರಡುವುದು ? "

" ನೀವು, ಅಮ್ಮ, ನಾನು, ನರಸಿಂಹಮೂರ್ತ್ಯಾಚಾರ್ಯರು."

" ಯಾತ್ರೆ ಮುಗಿಸಿಕೊಂಡು ಬಂದ ಮೇಲೆ ಒಂದು ದಿವಸದ ಮಟ್ಟಿಗಾದರೂ ಪಟ್ಟಣಕ್ಕೆ ಹೋಗಿಬರಬೇಕು ರುಕ್ಕೂ."

" ಅಗತ್ಯವಾಗಿ ಆಗಲಿ. ರಂಗನಾಥಸ್ವಾಮಿ ದರ್ಶನಮಾಡಿ ಎಷ್ಟೋ ದಿವಸಗಳಾಗಿ ಹೋಗಿದೆ."

" ನಾನು ಮುಂದಿನ ವ್ಯವಸ್ಥೆ ಮಾಡುತ್ತೇನೆ. ಶನಿವಾರದ ದಿನ ಚೆನ್ನಾಗಿದೆ. ಹೊರಟುಬಿಡೋಣ."

" ಗುರುವಾರ ಹೊರಡುವುದಕ್ಕಾಗುವುದಿಲ್ಲವೇ ? "

" ಗುರುವಾರ ನನಗೊಂದು ಮೀಟಿಂಗ್ ಇದೆ. ಶನಿವಾರ ಹೊರಡೋಣ."

ರುಕ್ಮಿಣಿ ಆಗಲೆಂದು ಒಪ್ಪಿಕೊಂಡಳು.

ರುಕ್ಮಿಣಿ ಒಳಗೆ ಹೋದಮೇಲೆ ಗೋದಮ್ಮನವರು ಮಗನ

ಸಮೀಪಕ್ಕೆ ಬಂದು ಪಿಸು ಧ್ವನಿಯಲ್ಲಿ

" ರಾಮೂಗೆ ಬರೆದು ಎರಡು ಬುಟ್ಟಿ ಒಳ್ಳೆಯ ಹಣ್ಣು ಬೆಂಗಳೂರಿನಿಂದ ತರಿಸು ಮಾಧೂ" ಎಂದರು.

" ಎರಡು ಬುಟ್ಟಿಯೇಕಮ್ಮ? ಅನ್ಯಾಯವಾಗಿ ಕೆಟ್ಟು ಹೋಗುತ್ತದೆ."

"ಇಲ್ಲಪ್ಪ ತರಿಸು. ಒಂದು ಬುಟ್ಟಿ ಹೆಗ್ಗಡೆಯವರಿಗೆ ಒಪ್ಪಿಸೋಣ. ಇನ್ನೊಂದು ಬುಟ್ಟಿ – ಅದೇ ರುಕ್ಕೂ ಆಹಾರ ಮಾಧೂ."

" ಬರೀ ಹಣ್ಣು ತಿಂದುಕೊಂಡು ಅವಳು ಯಾತ್ರೆ ಮಾಡಲು ಸಾಧ್ಯವೇ ? "

" ಅವಳು ಈ ವ್ರತ ಹಿಡಿದು ಬಹಳ ದಿವಸಗಳಾದವು ಮಾಧೂ. ನೀನು ಕಾಹಿಲೆ ಬಿದ್ದಾಗ ಹರಕೆ ಹೊತ್ತುಕೊಂಡು, ಎರಡು ಹೊತ್ತೂ ಊಟ ಬಿಟ್ಟುಬಿಟ್ಟಳು."

" ಇಷ್ಟು ದಿವಸ ನೀನೂ ನನಗೆ ಹೇಳಲಿಲ್ಲವಲ್ಲಮ್ಮ."

" ರುಕ್ಕೂ ಮಾತಿಗೆ ಕಟ್ಟುಬಿದ್ದಿದ್ದೆನಪ್ಪಾ."

" ಅವಳ ತ್ಯಾಗಕ್ಕೆ ಸೀಮೆಯೇ ಇಲ್ಲ. ಆಗಲಿ. ಅಮ್ಮ, ಒಂದು ಪ್ರಶ್ನೆ ನಿನ್ನ ಕೇಳಬೇಕೆಂದಿದ್ದೇನೆ."

" ಕೇಳಪ್ಪಾ."

" ಒಂದು ದಿನ 'ನನಗೆ ಇಂಥದು ಬೇಕು' ಎಂದು ರುಕ್ಕೂ ಕೇಳಿದವಳಲ್ಲ. ಈ ತೀರ್ಥಯಾತ್ರೆ ವಿಷಯವೇಕೆ ಇಷ್ಟು ಖಂಡಿತವಾಗಿದ್ದಾಳೆ."

" ಅವಳ ಮನೋಗತ ನನಗೂ ಅರ್ಥವಾಗಿಲ್ಲ ಮಾಧೂ. ಅವತ್ತು ನಿನ್ನ ಕರೆದು ಅವಳು ಪಾದಪೂಜೆ ಮಾಡಿದಾಗಲೇ ನನ್ನ ಮನಸ್ಸು ಕಳಕ್ಕೆಂದಿತು. ನಮ್ಮ ಮನೆಯ ದೀಪ ಆರಿಹೋಗದಿದ್ದರೆ ಸಾಕು."

" ನಿನ್ನ ಮನಸ್ಸಿಗೂ ಆ ಭಾವನೆ ಹೊಳೆಯಿತೇ ? "

" ಹೌದು."

" ನನ್ನ ಗತಿಯೇನಮ್ಮ ? "

"ಅಸ್ಥಿರನಾಗಬೇಡ ಮಾಧೂ. ನನ್ನ ಆಯುಸ್ಸನ್ನು ಧಾರೆ ಯೆರೆದು ನನ್ನ ಸೊಸೆದೇವಿಯನ್ನು ಉಳಿಸಿಕೊಳ್ಳಲು ಸಿದ್ಧವಾಗಿದ್ದೇನೆ."

ತಾಯಿಯ ಆಶ್ವಾಸನದಿಂದ ಮಾಧವರಾಯ ತೃಪ್ತನಾಗಲಿಲ್ಲ. ತನ್ನ ಮನಸ್ಸಿನಲ್ಲುಂಟಾಗಿದ್ದ ಅಳುಕಿಗೆ ತಾಯಿಯ ಸಮರ್ಥನೆ ದೊರೆತುದು ಅವನನ್ನು ಅಧೀರನನ್ನಾಗಿ ಮಾಡಿತ್ತು. ಒಂದು ದಿನ ತನ್ನ ಮನಸ್ಸಿನ ಉಮ್ಮಳವನ್ನು ಜವರೇಗೌಡರ ಮುಂದೆ ತೋಡಿ ಕೊಂಡು ಬಿಕ್ಕಿಬಿಕ್ಕಿ ಅತ್ತ. ಗೌಡರು ಸಮಾಧಾನ ಹೇಳುತ್ತಾ

"ಪುಣ್ಯ ಜೀವಿಗಳಿಗೆ ಸಾವೇ ಇಲ್ಲ ಸ್ವಾಮಿ. ಅಮ್ಮಾವರ ದಿವ್ಯ ಪ್ರಭೆ ಎಂದೆಂದಿಗೂ ನಮ್ಮನ್ನು ಕಾಯುತ್ತಿರುತ್ತದೆ. ನೀವು ಮನಸ್ಸಿಗೆ ವ್ಯಥೆಯನ್ನುಂಟುಮಾಡಿಕೊಂಡರೆ, ಅವರು ಭೂಮಿಗಿಳಿದು ಹೋಗು ತ್ತಾರೆ. ಹೋಗಿ – ಸಂತೋಷವಾಗಿ ಯಾತ್ರೆ ಮಾಡಿಕೊಂಡು ಬನ್ನಿ. ಮನುಷ್ಯಪ್ರಯತ್ನದಲ್ಲಿ ಏನಿದೆ? ಭಗವಂತನ ಮೇಲೆ ಭಾರ ಹಾಕಿ ನಿಶ್ಚಿಂತರಾಗಿರಿ"

ಎಂದು ಧೈರ್ಯ ಹೇಳಿದರು.

## ೩೪

ಇಂದುಮತಿ, ನಾರಾಯಣಸ್ವಾಮಿಯವರ ಲಗ್ನ ನಿಶ್ಚಯ ವಾಯಿತು.

ನಾರಾಯಣಸ್ವಾಮಿಯ ಮನಸ್ಸಿಗೆ ದೊಡ್ಡ ಯೋಚನೆಯಾಗಿತ್ತು. ಈ ವಿಷಯ ತಂದೆ ತಾಯಿಗಳಿಗೆ ತಿಳಿಸಲೇ ಬೇಡವೇ?

ತಿಳಿಸಿದರೆ ಲಗ್ನ ದುಸ್ಸಾಧ್ಯವಾಗುತ್ತದೆ.

ಅಣ್ಣ ಎಂದಿಗೂ ಒಪ್ಪುವುದಿಲ್ಲ!

ಅಮ್ಮನೂ ಒಪ್ಪುವುದಿಲ್ಲ!

ಒಂದು ವೇಳೆ ಇಬ್ಬರೂ ಒಪ್ಪಿದರೆ ಅಜ್ಜಿ ಖಂಡಿತವಾಗಿ ಅಡ್ಡಿಯಾಗುತ್ತಾಳೆ.

ಇಂದುಮತಿ—

ಸ್ವಜಾತಿಯಲ್ಲ; ಸ್ವಜನವಲ್ಲ.

ಸ್ವಕುಲವಲ್ಲ; ಸ್ವಮತವಲ್ಲ.

ಅವಳ ಭಾಷೆಯೂ ಸ್ವಭಾಷೆಯಲ್ಲ.

ಅವಳ ಮನೆಯವರ ಆಚಾರ ವಿಚಾರಗಳಿಗೂ ನಮ್ಮ ಮನೆಯವರ ಆಚಾರ ವಿಚಾರಗಳಿಗೂ ಯೋಜನಗಳಷ್ಟು ಅಂತರ!

ಈ ಪರಿಸ್ಥಿತಿಯಲ್ಲಿ ಲಗ್ನದ ವಿಷಯ ಮನೆಗೆ ತಿಳಿಸುವುದು ಹೇಗೆ?

ತಿಳಿಸಿದಲ್ಲಿ ಅಣ್ಣ ಖಂಡಿತವಾಗಿ ಲಗ್ನ ನಿಲ್ಲಿಸುತ್ತಾರೆ.

ಇಂದುಮತಿಯನ್ನು ಬಿಟ್ಟಿರಲು ಸಾಧ್ಯವೇ?

ನನ್ನ ಭವಿಷ್ಯದ ಸ್ವರ್ಣದ್ವಾರದಂತಿರುವ ಅವಳನ್ನು ತ್ಯಜಿಸುವುದು ಮೌಢ್ಯವಲ್ಲವೇ?

ತಂದೆ, ತಾಯಿ, ಅಜ್ಜಿ, ಅಕ್ಕ, ತಂಗಿ ಎಲ್ಲರೂ ಇರುವಾಗ ತಾನು ಒಬ್ಬ ಭಿಕಾರಿಯಂತೆ ಲಗ್ನವಾಗುವುದೇ?

ನಾರಾಯಣಸ್ವಾಮಿ ಅತ್ತ ಕಟ್ಟಿಕೊಂಡಿದ್ದ ಸಂಸಾರ; ಇತ್ತ ಕಟ್ಟಿಕೊಳ್ಳಲಿದ್ದ ಸಂಸಾರ, ಇವುಗಳ ಮಧ್ಯೆ ನಿಂತವನು ಯಾವ ಕಡೆ ಸೇರಲಿ ಎಂದು ಸಂಧಿಗ್ಧಮನಸ್ಕನಾಗಿದ್ದ.

ನವವಧು ಇಂದುಮತಿ ವಿವಾಹೋತ್ಸುಕಳಾಗಿದ್ದಳು. ತನ್ನ ಸೀರೆ ಕುಪ್ಪಸ, ಒಡವೆ ವಸ್ತ್ರಗಳನ್ನು ತಂದುತೋರಿಸುವಳು. ತಮ್ಮ ಭವಿಷ್ಯಜೀವನದ ಸುಂದರ ದಿನಗಳನ್ನು ಚಿತ್ರವತ್ತಾಗಿ ಬಣ್ಣಿಸುವಳು. ಮಧುಚಂದ್ರನ ದರ್ಶನಕ್ಕೆ (Honey moon) ಸ್ವಿಟ್ಜರ್ಲೆಂಡಿಗೆ ಹೋಗುವ ಕನಸು – ಸೇಟ್‌ಜೀಯವರ ಅನುಮತಿಯೂ ದೊರೆತಿತ್ತು.

ವಿದೇಶ ಯಾತ್ರೆ!

ವಿದೇಶ ಖ್ಯಾತಿ!

ವಿಶ್ವಕೀರ್ತಿ!

ಎಲ್ಲವೂ ನಾರಾಯಣಸ್ವಾಮಿಗಾಗಿ ಕಾದಿತ್ತು. ; ಮಂಡ್ಯದಲ್ಲಿ ರುಕ್ಮಿಣಿ ಮಗನಿಗಾಗಿ ಕಾದಿದ್ದಳು.

ಇಂದುಮತಿಯೇ ಹಲವು ಬಾರಿ ಕೇಳಿದ್ದಳು :

"ಲಗ್ನಕ್ಕೆ ನಿಮ್ಮ ತಂದೆತಾಯಿಗಳನ್ನು ಕರೆಸಿಕೊಳ್ಳುವುದಿಲ್ಲವೇ?"

"ಅವರು ಊರಿನಲ್ಲಿಲ್ಲ ಇಂದೂ. ತೀರ್ಥಯಾತ್ರೆ ಹೋಗಿದ್ದಾರೆ.

"ಯಾವಾಗ ಹಿಂದಿರುಗುತ್ತಾರೆ?"

"ಕೆಲವು ತಿಂಗಳಾಗಬಹುದು."

" ಅಷ್ಟು ದಿನವಾಗುತ್ತದೆಯೇ ? "

" ಅಲ್ಲಿಯವರೆಗೆ ನಮ್ಮ ಲಗ್ನ ಮುಂದೂಡೋಣವೇ ? "

" ಉಂಟೇ ? ನಮ್ಮ ಪ್ರೋಗ್ರ್ಯಾಂ (Programme) ಎಲ್ಲಾ ತಲೆಕೆಳಗಾಗಿಬಿಡುತ್ತದೆ. ನಾವು ಕಲ್ಕತ್ತೆಗೆ ಹೋಗಿ ಅಣ್ಣನ ಜತೆ ನಾಲ್ಕು ದಿನವಿದ್ದು ವಿಲಾಯಿತಿಗೆ ಹೋಗಬೇಕಾಗಿದೆ."

" ಮನೆಗೆ ಕಾಗದ ಬರೆದುಬಿಡುತ್ತೇನೆ. ನಾವು ಪ್ರವಾಸ ಮುಗಿಸಿಕೊಂಡು ಬಂದಮೇಲೆ ನನ್ನ ತಾಯಿ, ತಂದೆಯ ದರ್ಶನ ತೆಗೆದುಕೊಳ್ಳೋಣ."

" ನಿಮ್ಮ ಮನೆಯವರು ಕೋಪಮಾಡಿಕೊಳ್ಳುವುದಿಲ್ಲವೇ ? "

" ಇಲ್ಲ. ನನ್ನ ತಾಯಿ ತುಂಬ ತಿಳುವಳಿಕಸ್ಥೆ. ನನ್ನನ್ನು ಅಪಾರವಾಗಿ ಪ್ರೀತಿಸುತ್ತಾರೆ."

" ಕಾಗದ ಬರೆದು ಅವರ ಆಶೀರ್ವಾದವನ್ನಾದರೂ ದೊರಕಿಸಿ ಕೊಳ್ಳಬೇಕು."

" ಬರೆಯುತ್ತೇನೆ."

ಎಂದೇನೋ ಇಂದುಮತಿಗೆ ಮಾತುಕೊಟ್ಟ.

ಆದರೆ ಕಾಗದ ಬರೆಯುವ ಧೈರ್ಯವಾಗಲಿಲ್ಲ.

ಇಂದುಮತಿಯನ್ನು ನಾರಾಯಣಸ್ವಾಮಿ ಲಗ್ನವಾಗುವ ವಿಷಯ ಪಾಂಡು ಕಿವಿಯಮೇಲೆ ಬಿದ್ದಿತ್ತಾದರೂ ಅವನು ಅದಕ್ಕೆ ಹೆಚ್ಚು ಬೆಲೆ ಕೊಟ್ಟಿರಲಿಲ್ಲ.

" ಎಲ್ಲಿ ಮಂಗಳದಾಸರು – ಎಲ್ಲಿ ನಾರಾಯಣಸ್ವಾಮಿ. ಇದು ನಾಲ್ಕು ದಿನದ ಚೆಲ್ಲಾಟ "

ಎಂದವನು ಭಾವಿಸಿಕೊಂಡಿದ್ದ.

ಆದರೆ ನಾರಾಯಣಸ್ವಾಮಿಯೇ ಈ ಸುದ್ದಿ ಹೇಳಿದಾಗ ಪಾಂಡು ಕಣ್ಣುಜ್ಜಿಕೊಂಡು

" ನಿಜವೇ ನಾರಾಯಣಸ್ವಾಮಿ ! " ಎಂದು ಕೇಳಿದ.

" ನಿಮ್ಮಲ್ಲಿ ಸುಳ್ಳೇಕೆ ಹೇಳಲಿ ಮಿ. ಪಾಂಡು."

" ನಿಮ್ಮ ಮನೆಯವರಿಗೆ ತಿಳಿಸಿರುವಿರಾ ? "

" ಅದೇ ನನ್ನ ಸಮಸ್ಯೆ ಪಾಂಡು. ತಿಳಿಸಿದರೆ ಲಗ್ನ ನಿಂತು ಹೋಗುತ್ತದೆ. ನನ್ನ ತಂದೆ ಸುತರಾಂ ಈ ಸಂಬಂಧಕ್ಕೆ ಒಪ್ಪುವುದಿಲ್ಲ; ತಿಳಿಸದಿದ್ದರೆ ನನ್ನ ತಾಯಿ ಎಲ್ಲಿ ನೊಂದುಕೊಳ್ಳುವರೋ ಎಂದು ಚಿಂತೆ. ನಾನೇನು ಮಾಡಲಿ ಪಾಂಡು ? "

" ಈ ಸಂದರ್ಭದಲ್ಲಿ ಸಲಹೆ ಕೊಡುವುದು ಬಹಳ ಕಷ್ಟ ನಾರಾಯಣಸ್ವಾಮಿ. ನೀವು ಏನು ಮಾಡಲು ನಿಶ್ಚಯಿಸಿರುವಿರಿ ? "

" ಲಗ್ನ ಮಾಡಿಕೊಂಡು ಊರಿಗೆ ಇಂದುಮತಿಯೊಂದಿಗೆ ಹೋಗಿ ಬರುವುದೆಂದುಕೊಂಡಿದ್ದೇನೆ. ಆದ ಲಗ್ನ ಕೆಡಿಸಲು ಬರುವುದಿಲ್ಲ. ನನ್ನ ತಾಯಿ ರಾಜಿ ಮಾಡಿಸುತ್ತಾರೆ."

ವ್ಯವಹಾರಜ್ಞನಾದ ಪಾಂಡು ಭಿನ್ನಾಭಿಪ್ರಾಯ ವ್ಯಕ್ತಮಾಡುವುದು ತನ್ನ ಹಿತಕ್ಕೇ ಕೊಡಲಿಯಾಗುತ್ತದೆಂದು ಗ್ರಹಿಸಿ

" ಹಾಗೇ ಮಾಡಬಹುದು ಮಿ. ಸ್ವಾಮಿ. ದೊಡ್ಡವರು ಬಡವರನ್ನು ಮರೆಯಬೇಡೀಪ್ಪ."

" ನಿಮ್ಮನ್ನು ಎಂದಿಗಾದರೂ ಮರೆತೇನೇ ಪಾಂಡು. ನೀವು ಸಕಾಲದಲ್ಲಿ ಮಾಡಿದ ಉಪಕಾರಕ್ಕೆ ನಾನು ಋಣಿಯಾಗಿದ್ದೇನೆ. ಸಿವಿಲ್ ಮ್ಯಾರೇಜ್ ಪ್ರಕಾರ ಲಗ್ನ – ಸಂಜೆಗೆ ರಿಸೆಪ್ಷನ್ (Reception) ಇದೆ. ನೀವು ಖಂಡಿತ ಬರಬೇಕು."

" ಅಗತ್ಯವಾಗಿ ಬರುತ್ತೇನೆ" ಎಂದ.

ಪಾಂಡುವಿನ ಕೃತ್ರಿಮ ಸಮಾಧಾನದಿಂದಲೇ ನಾರಾಯಣ ಸ್ವಾಮಿ ತೃಪ್ತಿಪಟ್ಟುಕೊಂಡ.

ಲಗ್ನವೂ ನೆರವೇರಿತು. ಸಂಜೆ ರಿಸೆಪ್ಷನ್ ಮಂಗಳದಾಸರ ' ಥಡೂತಿ ' ಗನುಗುಣವಾಗಿತ್ತು.

ಅಂದೇ ಮಾಧವರಾಯ, ರುಕ್ಮಿಣಿ, ಗೋದಮ್ಮ, ನರಸಿಂಹ ಮೂರ್ತ್ಯಾಚಾರ್ಯರು ಧರ್ಮಸ್ಥಳ ತಲುಪಿದ್ದರು.

೩೫

ಹಾಸನದಿಂದ ಬೆಳಿಗ್ಗೆ ಹೊರಟ ಬಸ್ ನೇರವಾಗಿ ಧರ್ಮಸ್ಥಳ ಮಧ್ಯಾಹ್ನದ ವೇಳೆಗೆ ತಲುಪುತ್ತಿತ್ತು.

ಮಾಧವರಾಯ, ಅವನ ಪರಿವಾರ ಬಸ್ಸಿನಿಂದ ಇಳಿದೊಡನೆಯೇ ದೇವಸ್ಥಾನದ ಅಧಿಕಾರಿಗಳೊಬ್ಬರು ಬಂದು,

"ತಮ್ಮದು ಯಾವ ಊರು" ಎಂದು ವಿಚಾರಿಸಿದರು.

ನರಸಿಂಹಮೂರ್ತ್ಯಾಚಾರ್ಯರು, ಮಾಧವರಾಯನ ಪರಿಚಯವನ್ನು ಮಾಡಿಕೊಟ್ಟರು. ಅಧಿಕಾರಿಗಳು

"ಖಾವಂದರಿಗೆ ತಿಳಿಸುತ್ತೇನೆ" ಎಂದರು.

"ಬೇಡಿ – ನಾವು ಇಳಿದುಕೊಳ್ಳಲು ಸ್ಥಳ ತೋರಿಸಿದರೆ ಸಾಕು."

"ಅಡಿಗೆ ಮಾಡಿಕೊಳ್ಳುವ ಹಾಗಿದ್ದರೆ ಮಾಡಿಕೊಳ್ಳಬಹುದು. ಬೀಡಿನಲ್ಲೇ ಊಟಮಾಡುವ ಹಾಗಿದ್ದರೆ ಅದಕ್ಕೆ ಏರ್ಪಾಟು ಮಾಡುತ್ತೇನೆ."

"ನಾವು ಎಲ್ಲಾ ಸಾಮಾನೂ ತಂದಿದ್ದೇವೆ. ಮೊದಲು ಸ್ನಾನ ಮಾಡಿ, ಸ್ವಾಮಿಸೇವೆ ಮಾಡಿಕೊಂಡು, ಅಡಿಗೆ ಮಾಡಿಕೊಳ್ಳುತ್ತೇವೆ."

ಅಧಿಕಾರಿಗಳು ಅತಿಥಿಗಳನ್ನು 'ಅತಿಥಿಮಂದಿರ'ಕ್ಕೆ ಕರೆದೊಯ್ದರು. ಮಾಧವರಾಯ

"ಖಾವಂದರು ಈಗ ಎಲ್ಲಿದ್ದಾರೆ?" ಎಂದು ಕೇಳಿದ.

" ದೇವಸ್ಥಾನಕ್ಕೆ ದಯಮಾಡಿಸಿದ್ದಾರೆ."

" ಸಂಜೆಗೆ ಉಡುಪಿ ಕಡೆಗೆ ಹೋಗುವ ಬಸ್ಸುಗಳು ಸಿಕ್ಕುತ್ತವೆಯೇ ? "

" ಬೇಕಾದಷ್ಟು ಬಸ್ಸುಗಳಿವೆ. ಸಂಜೆ ಏಳು, ಎಂಟರವರೆಗೂ ಬಸ್ಸುಗಳಿವೆ. ತಾವು ಸಂಜೆಗೇ ಹೊರಟುಬಿಡಬೇಕೇ ? "

" ಹೌದು, ಸೇವೆ ಮುಗಿಸಿಕೊಂಡು ಪ್ರಸಾದ ಸ್ವೀಕರಿಸಿ ಹೊರಟುಬಿಡುತ್ತೇವೆ. ತಾವು ದಯೆಯಿಟ್ಟು ಈ ಹಣ್ಣಿನ ಬುಟ್ಟಿಯನ್ನು ಖಾವಂದರಿಗೆ ತಲುಪಿಸಬೇಕು."

" ಆಗಬಹುದು."

ಮಾಧವರಾಯ, ರುಕ್ಮಿಣಿ, ಗೋದಮ್ಮ, ಆಚಾರ್ಯರು ಸ್ನಾನ ಮುಗಿಸಿ ಮಡಿಯಲ್ಲಿಯೇ ದೇವಸ್ಥಾನ ಪ್ರವೇಶಿಸಿದರು.

ಧರ್ಮಪೀಠದಲ್ಲಿ 'ಮಾತನಾಡುವ ಮಂಜುನಾಥಸ್ವಾಮಿ' ಶ್ರೀ ಮಂಜಯ್ಯ ಹೆಗ್ಗಡೆಯವರು ಕುಳಿತಿದ್ದರು.

ಸತ್ಯವೇ ಪುರುಷಾಕಾರ ತಳೆದು ಬಂದಿದ್ದ ಆ ತೇಜಸ್ವೀ ಮಹಾನುಭಾವನ ಸಮ್ಮುಖದಲ್ಲಿ ಭಕ್ತರು ಕಾಣಿಕೆಗಳನ್ನೊಪ್ಪಿಸುತ್ತಿದ್ದರು.

ದುಃಖಿಗಳು ದುಃಖ ತೋಡಿಕೊಳ್ಳುತ್ತಿದ್ದರು.

ವಾದಿ, ಪ್ರತಿವಾದಿಗಳು ಮಂಜುನಾಥ ಸ್ವಾಮಿಗೆ ದೂರು ಕೊಡುತ್ತಿದ್ದರು.

ತಾಯಿ ತನ್ನ ರೋಗಗ್ರಸ್ತ ಮಗುವಿಗೆ ಆಯಸ್ಸು ಬೇಡುತ್ತಿದ್ದಳು.

ಬಂಜೆ ಹೆಣ್ಣುಮಗಳು ಪುತ್ರದಾನ ಬೇಡುತ್ತಿದ್ದಳು.

ನಿಶ್ಚಲಚಿತ್ತರಾಗಿ ಕುಳಿತಿದ್ದ ಹೆಗ್ಗಡೆಯವರು ಎಲ್ಲರನ್ನೂ ಸಂತೈಸುತ್ತಿದ್ದರು. ಎಲ್ಲರ ಮೇಲೂ ಅಮೃತಕಿರಣ ಚೆಲ್ಲುತ್ತಿದ್ದರು.

ಹೆಗ್ಗಡೆಯವರ ಹೃದಯ ಒಂದೇ ಸಮನೆ ಮೊರೆಯುತ್ತಿತ್ತು

' ಸ್ವಾಮಿ – ಇವರ ದುಃಖ – ಕಷ್ಟ ನಿವಾರಿಸು. '

ಅಲ್ಲಿನ ನೋಟ ನೋಡುತ್ತ ನಿಂತಿದ್ದ ಮಾಧವರಾಯ, ರುಕ್ಮಿಣಿ ಜನಜಂಗುಳಿ ಕಡಿಮೆಯಾಗಲು ಧರ್ಮಪೀಠದ ಮುಂದೆ ಬಂದರು.

ಹೆಗ್ಗಡೆಯವರು ಮಾಧವರಾಯನನ್ನು ನೋಡಿ

"ತಾವು ಮಂಡ್ಯದ ವಕೀಲರಲ್ಲವೇ?" ಎಂದರು.

"ಹೌದು ಸ್ವಾಮಿ."

"ತಾವು ಕಳಿಸಿಕೊಟ್ಟ ಹಣ್ಣುಗಳು ಸೇರಿದವು."

ಮಾಧವರಾಯ ಕೈಮುಗಿದು

"ಈಕೆ ನನ್ನ ಸಹಧರ್ಮಿಣಿ. ಸ್ವಾಮಿಗೆ ಕಾಣಿಕೆ ಅರ್ಪಿಸಲು ಬಂದಿದ್ದಾರೆ."

"ತಟ್ಟೆಯಲ್ಲಿ ಹಾಕಿ ನಮಸ್ಕಾರಮಾಡಿಯಮ್ಮ."

ರುಕ್ಮಿಣಿ ತನ್ನ ಸೆರಗಿನ ಮರೆಯಲ್ಲಿದ್ದ ಗಂಟು ತೆಗೆದು ಅದರೊಳಗಿದ್ದ ಆಭರಣಗಳನ್ನು ತಟ್ಟೆಗೆ ಸುರಿದು, ಕೈಯಲ್ಲಿದ್ದ ಕಾಣಿಕೆಯ ಹಣವನ್ನೂ ಹಾಕಿ

"ಯಜಮಾನರಿಗೆ ಕಾಹಿಲೆಯಾಗಿದ್ದಾಗ ಹರಸಿಕೊಂಡಿದ್ದೆ"

ಎಂದು ಹೆಗ್ಗಡೆಯವರಿಗೆ ನಮಸ್ಕರಿಸಿದಳು.

"ಸ್ವಾಮಿಗೆ ನಮಸ್ಕಾರಮಾಡಿ" ಎಂದರು ಹೆಗ್ಗಡೆಯವರು.

ದಂಪತಿಗಳು ಸ್ವಾಮಿಗೆ ನಮಸ್ಕರಿಸಿ, ಪ್ರಸಾದ ಸ್ವೀಕರಿಸಿದರು.

ಅವರು ಹೊರಗೆ ಹೊರಟಾಗ ಹೆಗ್ಗಡೆಯವರು ಮಾಧವರಾಯನನ್ನು ಹತ್ತಿರ ಕರೆದು

"ಎಲ್ಲಾ ವ್ಯವಸ್ಥೆಯಾಗಿದೆಯಷ್ಟೆ?" ಎಂದು ಕೇಳಿದರು.

"ಆಗಿದೆ ಸ್ವಾಮಿ."

"ಏನು ಬೇಕಾದರೂ ಕೇಳಿ. ಸಂಕೋಚ ಪಟ್ಟುಕೊಳ್ಳಬೇಡಿ"

ಎಂದರು.

ಮಾಧವರಾಯ ಮಂಗಳಾರತಿ ಮಾಡಿಸಿಕೊಂಡು ಪರಿವಾರದೊಂದಿಗೆ ಅತಿಥಿಗೃಹ ಸೇರಿದ.

ಗೋದಮ್ಮನವರು ಒಲೆ ಹೊತ್ತಿಸಿ ಅಡಿಗೆ ಮಾಡಿ ಮಾಧವರಾಯನಿಗೂ, ಆಚಾರ್ಯರಿಗೂ ಬಡಿಸಿ ತಾವೂ ಊಟ ಮಾಡಿದರು. ರುಕ್ಮಿಣಿ ಫಲಗಳನ್ನೂ ಬೀಡಿನಿಂದ ಬಂದ ಹಾಲನ್ನೂ ಸ್ವೀಕರಿಸಿದಳು.

ರುಕ್ಮಿಣಿಯ ಮನಸ್ಸು ಅವ್ಯಕ್ತ ಆನಂದದಲ್ಲಿ ಮುಳುಗಿ ಹೋಗಿತ್ತು. ಗೋದಮ್ಮನವರ ಕಡೆ ತಿರುಗಿ

"ಅಮ್ಮ, ನಿಜವಾಗಿ ಭಗವಂತ ಇಲ್ಲಿದ್ದಾನಮ್ಮ. – ಹೆಗ್ಗಡೆಯವರನ್ನು ನೋಡಿದಿರಾ?"

"ನೋಡಿದೆ ತಾಯಿ."

"ನಾವು ಹಿಂದೆ ನೋಡಿದುದಕ್ಕೆ ಈಗ್ಗೆ ಅವರು ತುಂಬ ಬಡವಾಗಿರುವರಲ್ಲವೇ?"

"ಹೌದು ರುಕ್ಕೂ. ಅವರಿಗೆ ಮೈಯಲ್ಲಿ ಸರಿಯಾಗಿರಲಿಲ್ಲವಂತೆ!"

"ಅದಲ್ಲಮ್ಮ ಕಾರಣ."

"ಇನ್ನೇನು ಕಾರಣವಿರಬಹುದು?"

"ಎಷ್ಟು ಜನ ದುಃಖ ತೋಡಿಕೊಳ್ಳುತ್ತಾರೆ ನೋಡಿದಿರಾ?"

"ನೋಡಿದೆ."

"ಹೆಗ್ಗಡೆಯವರು ಅವರ ದುಃಖ ನೀಗಿಸಲು ತಾವು ಆ ದುಃಖ ಅನುಭವಿಸುತ್ತಾರಮ್ಮ. ನಮ್ಮದನ್ನು ನಾವು ಅನುಭವಿಸುವುದಕ್ಕೆ ಇಷ್ಟು ಗೋಳಾಡುತ್ತೇವಲ್ಲ. ಈ ಪುಣ್ಯಾತ್ಮ ಜಗತ್ತಿನ ದುಃಖ, ಕಷ್ಟವನ್ನೆಲ್ಲಾ ಅನುಭವಿಸುತ್ತಾರಲ್ಲಮ್ಮ."

"ಬೆಳಕಿನ ರಹಸ್ಯ ಬೆಳಕಿಗೇ ಅರ್ಥವಾಗುವುದು ರುಕ್ಕೂ."

ಮಾಧವರಾಯ ಬಂದು

"ನಾಲ್ಕು ಗಂಟೆಗೆ ಉಡುಪಿಗೆ ಬಸ್ ಇದೆಯಂತೆ. ಅದರಲ್ಲಿ ಹೊರಟರೆ ಕತ್ತಲಾಗುವುದರಲ್ಲಿ ಉಡುಪಿ ಸೇರಬಹುದು" ಎಂದ.

ಎಲ್ಲರೂ ಹೊರಡಲನುವಾದರು.

ರುಕ್ಮಿಣಿ ಗಂಡಸಿಗೆ

"ಪೂಜ್ಯ ಹೆಗ್ಗಡೆಯವರ ಅಪ್ಪಣೆ ಪಡೆದು ಪ್ರಯಾಣ ಮಾಡೋಣ"

ಎಂದಳು.

ಎಲ್ಲರೂ ಹೆಗ್ಗಡೆಯವರ ಬೀಡಿಗೆ ಬಂದು ಕುಳಿತರು. ಅಲ್ಲಿಯೇ ಇದ್ದ ಒಬ್ಬರು

" ಐದು ನಿಮಿಷ ಕುಳಿತುಕೊಳ್ಳಿ. ಖಾವಂದರು ಬರುತ್ತಾರೆ. ಇದೇ ಅವರು ಪ್ರಸಾದ ಸ್ವೀಕರಿಸುತ್ತಿದ್ದಾರೆ " ಎಂದರು.

" ದಿನವೂ ಇಷ್ಟು ಹೊತ್ತಾಗುತ್ತದೆಯೇ ? "

" ಇವತ್ತೇ ಬೇಗ ಎಂದು ಹೇಳಬೇಕು."

ಗೋಡೆಗಳ ಮೇಲಿದ್ದ ಹೆಗ್ಗಡೆಯವರ ಚಿತ್ರಕೃತಿಗಳನ್ನು ನೋಡುತ್ತಾ ಮಾಧವರಾಯ

" ಇವುಗಳನ್ನು ಬರೆದ ಶಿಲ್ಪಿಯಾರು ? " ಎಂದು ಕೇಳಿದ.

" ಖಾವಂದರೇ."

" ಅವರು ಚಿತ್ರಕಲೆಯನ್ನೂ ಬಲ್ಲರೇ ? "

" ಬಹಳ ಚಿತ್ರಗಳನ್ನು ಬರೆದಿದ್ದಾರೆ. ಅವರು ಬಾಹುಬಲಿ ಸ್ವಾಮಿಯ ಜೀವನ ಕುರಿತು ಬರೆದಿರುವ ದಿವ್ಯಚಿತ್ರಗಳು ಶ್ರವಣಬೆಳಗೊಳದಲ್ಲಿವೆ....ನೀವು ಈಗ ಉಡುಪಿಗೆ ಹೊರಟಿರುವಿರಲ್ಲವೇ ? "

" ಹೌದು."

" ನೋಡಿ ಬರುತ್ತೇನೆ. ಖಾವಂದರ ಆರೋಗಣೆ ಮುಗಿದಿರಬಹುದು."

ಒಳಗೆ ಹೋದ ಆ ವ್ಯಕ್ತಿಯ ಹಿಂದೆಯೇ ಹೆಗ್ಗಡೆಯವರು ದಯಮಾಡಿಸಿದರು. ಕುಶಲಪ್ರಶ್ನೆಗಳಾದಮೇಲೆ ಹೆಗ್ಗಡೆಯವರು ರುಕ್ಮಿಣಿಯ ಕಡೆ ತಿರುಗಿ

" ಅಮ್ಮ – ನೀವು ಬಹಳ ದೊಡ್ಡವರು. ಮಂಡ್ಯದಲ್ಲಿ ಇನ್‌ಫ್ಲುಯಂಜಾ ಬಂದಾಗ ನೀವು ಮಾಡಿದ ಸೇವೆ ವಿಷಯ ತಿಳಿದು ಬಹಳ ಸಂತೋಷವಾಯಿತು "

ಎಂದರು. ಹೆಗ್ಗಡೆಯವರ ಕಿವಿಯವರೆಗೆ ಈ ಸುದ್ದಿ ಮುಟ್ಟಿಸಿದವರು ಯಾರು ಎಂದು ರುಕ್ಮಿಣಿ ಆಶ್ಚರ್ಯಪಟ್ಟಳು.

" ಈಗಲೇ ಉಡುಪಿಗೆ ಹೊರಟಿರುವಿರಾ ? "

"ಹೌದು – ತಾವು ಅಪ್ಪಣೆಕೊಟ್ಟರೆ...."

"ಆಗಬಹುದು. ಹೋಗಿಬನ್ನಿ."

ರುಕ್ಮಿಣಿ ಮುಂದೆ ಬಂದು ಹೆಗ್ಗಡೆಯವರ ಪಾದಕ್ಕೆ ಮಣಿದು "ಅಪ್ಪಣೆ ಕೊಡಬೇಕು" ಎಂದಳು.

ಹೆಗ್ಗಡೆಯವರು ಕ್ಷಣಕಾಲ ಕಣ್ಣುಮುಚ್ಚಿ ಕುಳಿತು "ಶಾಂತಿ ಬೇಕಲ್ಲವೇ ತಾಯಿ ?" ಎಂದರು.

"ಹೌದು ಗುರುವೇ."

"ಬಂದ ಕೆಲಸ ಮುಗಿಯಿತೇ ?"

"ಮುಗಿಯಿತೋ ಇಲ್ಲವೋ ಎಂಬುದನ್ನೂ ತಾವೇ ಅಪ್ಪಣೆ ಕೊಡಿಸಬೇಕು."

"ಮುಗಿದಿದೆ. ಹೋಗಿಬನ್ನಿ. ಶ್ರೀದೇವರು ನಿಮ್ಮ ಜತೆಗಿರುತ್ತಾನೆ"

ಎಂದು ಎದ್ದು ಒಳಗೆ ಹೋದರು.

ರುಕ್ಮಿಣಿ, ಹೆಗ್ಗಡೆಯವರಿಗೆ ನಡೆದ ಸಂಭಾಷಣೆಯ ಅಂತರಾರ್ಥ ತಿಳಿಯಲು ಮಾಧವರಾಯ ಪ್ರಯತ್ನಿಸುತ್ತ ನಿಂತಿದ್ದ. ಗೋದಮ್ಮನವರ ಮುಖ ಕಂಗೆಟ್ಟಿತ್ತು.

ಹೆಗ್ಗಡೆಯವರ ಮಗಳು ಬಂದು ರುಕ್ಮಿಣಿಯನ್ನು ಒಳಕ್ಕೆ ಕರೆದೊಯ್ದು ಅರಶಿನ, ಕುಂಕುಮ, ತಾಂಬೂಲ, ಕಣ ಕೊಟ್ಟು ಗೌರವಿಸಿದರು. ಹೆಗ್ಗಡೆಯವರು ಹೊರಗೆ ಬಂದು ಮಾಧವರಾಯನಿಗೂ ಆಚಾರ್ಯರಿಗೂ ತಾಂಬೂಲ, ವಲ್ಲಿ ಕೊಟ್ಟು ಗೌರವಿಸಿದರು.

ಬಸ್ ಸಿದ್ಧವಾಗಿತ್ತು. ಬಸ್ ಬಳಿಗೆ ಎಲ್ಲರೂ ನಡೆಯಲು ಹೆಗ್ಗಡೆಯವರೂ ಅವರನ್ನನುಸರಿಸಿ ಬಂದರು. ಮತ್ತೊಮ್ಮೆ ಎಲ್ಲರೂ ಹೆಗ್ಗಡೆಯವರಿಗೆ ನಮಸ್ಕರಿಸಿ ಬಸ್ಸಿನಲ್ಲಿ ಕುಳಿತರು.

ಹೆಗ್ಗಡೆಯವರು ಕೈಮುಗಿದರು.

ಅದನ್ನು ಕಂಡ ಗೋದಮ್ಮನವರು ಮುಖವನ್ನತ್ತ ತಿರುಗಿಸಿದರು. ಅವರ ಕಣ್ಣಲ್ಲಿ ಧಾರೆ ಹೊರಟಿತ್ತು.

ಯಾತ್ರಿಕರು ಅದೇ ಸಂಜೆ ಉಡುಪಿ ಮುಟ್ಟಿದರು. ಉಡುಪಿ ಯಲ್ಲಿ ದೇವರ ಸೇವೆ ಮಾಡಿಕೊಂಡು ಸುಬ್ರಹ್ಮಣ್ಯಕ್ಕೆ ಹೋಗಿ ಅಲ್ಲಿ ದೇವರ ಸೇವೆ ಮಾಡಿ ಸೋಮವಾರ ಸಂಜೆ ಮುಂಡ್ಯ ತಲುಪಿದರು. ಒಂಭತ್ತು ದಿವಸ ಪ್ರಯಾಣ, ದೇವರ ಸೇವೆಯಲ್ಲಿ ಕಳೆದುಹೋಗಿದ್ದವು.

ಮನೆಗೆ ಬಂದೊಡನೆಯೇ ಮಾಧವರಾಯ ತನ್ನ ಟಪಾಲು ನೋಡಲು ಕಛೇರಿ ಕೋಣೆಗೆ ಹೋದ. ಗೋದಮ್ಮನವರು ರುಕ್ಮಿಣಿ ಯನ್ನಪ್ಪಿಕೊಂಡು ಬಿಕ್ಕಿಬಿಕ್ಕಿ ಅಳಲಾರಂಭಿಸಿದರು.

" ಏಕಮ್ಮ – ಹೀಗೇಕೆ ಅಳುತ್ತಿರುವಿರಿ ? "

" ಏಸು ಮಾಡಿಬಿಟ್ಟೆ ರುಕ್ಕೂ. ನಮಗೆ ಇಷ್ಟು ಮೋಸ ಮಾಡುತ್ತಾರೆಯೇ ? "

" ನಾನೇನಮ್ಮ ಮೋಸ ಮಾಡಿದ್ದು ? "

" ಸ್ವಾಮಿ ಅಪ್ಪಣೆ ಸೇನು ಪಡೆದುದನ್ನು ನಾನು ಕಂಡೆ ರುಕ್ಕೂ."

" ಅಮ್ಮ, ಈಗ್ಗೆ ಹಲವು ವರ್ಷಗಳ ಕೆಳಗೆ ನಾನು ನಿಮ್ಮ ಮನೆಗೆ ಬಂದಾಗ, ನೀವು ನನ್ನನ್ನು ಬಾಚಿ ಅಪ್ಪಿಕೊಂಡು ಸ್ವಾಗತಿ ಸಿದಿರಿ. ಈಗಲೂ ಅದೇ ತುಂಬಿದ ಮನಸ್ಸಿನಿಂದ ಕಳಿಸಿಕೊಡಿ.— ನನಗೊಂದು ಉಪಕಾರ ಮಾಡಿ – ಅವರಲ್ಲಿ ಹೇಳುವ ಧೈರ್ಯ ನನಗಿಲ್ಲ."

" ಏನು ಹೇಳು."

" ಕೂಡಲೆ ಕಾಗದ ಬರೆದು ಪದ್ಮ, ಪದ್ಮನ ಯಜಮಾನರು, ಕಮಲು, ಕಮಲು ಮಕ್ಕಳು, ರಾಮು, ಶ್ರೀದೇವಿ, ನಾಣಿಯನ್ನು ಬರಮಾಡಿಕೊಳ್ಳಿ. ಇನ್ನೊಮ್ಮೆ ಎಲ್ಲರನ್ನೂ ಕಣ್ಣು ತುಂಬ ನೋಡಿ ಬಿಡುತ್ತೇನೆ."

ಗೋದಮ್ಮನವರ ಕಣ್ಣೀರೇ ಉತ್ತರವಾಯಿತು.

ಮಾರನೆಯ ದಿನ ರುಕ್ಮಿಣಿ ಗಂಡನಿಗೆ

"ಪಟ್ಟಣಕ್ಕೆ ಯಾವಾಗ ಹೋಗಿ ಬರೋಣ ?" ಎಂದು ಕೇಳಿದಳು.

" ಈಗಲೇ ಏನವಸರ. ನಾಲ್ಕು ದಿವಸ ಬಿಟ್ಟು ಹೋದ

ರಾಯಿತು. ಯಾತ್ರೆ ಮಾಡಿಕೊಂಡು ಬಂದು ನಿನಗೂ ಸಾಕಾಗಿ ಹೋಗಿರಬೇಕು."

"ಎಲ್ಲರಿಗೂ ಕಾಗದ ಬರೆದಿರಾ ?"

"ಬರೆದೆ. ನಾಣಿಗೆ ವೈರ್ ಮಾಡಿದೆ. ಅವನೊಬ್ಬನನ್ನು ಬಿಟ್ಟು ಉಳಿದವರು ಬರಬಹುದು. ಮಗ ದೊಡ್ಡವನಾದ – ಇನ್ನು ಅವನಿಗೇಕೆ ನಮ್ಮ ಸಹವಾಸ ಹೇಳು. ಹೋಗಲಿ – ನಾವು ಪಡೆದು ಕೊಂಡು ಬಂದುದಕ್ಕಿಂತ ಹೆಚ್ಚು ಅಪೇಕ್ಷಿಸಿದರೆ ಲಭಿಸುತ್ತದೆಯೇ? ಈಗೇಕೆ ಎಲ್ಲರನ್ನೂ ಬರಮಾಡುತ್ತಿರುವೆ ?"

"ಯಾತ್ರೆ ಮುಗಿಸಿ ಬಂದ ಮೇಲೆ ಸಂತರ್ಪಣೆ ಮಾಡಬೇಡವೇ. ಮಕ್ಕಳಿಲ್ಲದೆ ಸಂತರ್ಪಣೆ ಮಾಡಲೇ ?"

"ಹಾಗೋ ! ಆಗಬಹುದು."

"ಅವರೆಲ್ಲಾ ಬರುವಷ್ಟರಲ್ಲಿ ನಾವು ಪಟ್ಟಣಕ್ಕೆ ಹೋಗಿ ಬಂದು ಬಿಡೋಣ. ನಾಳೆ ಹೊರಡೋಣವೇ ?"

"ಗೌಡರಿಗೆ ತಿಳಿಸಿದ್ದರೆ ಕಾರು ಕಳಿಸುತ್ತಿದ್ದರು."

"ಬೇಡ – ಅವರಿಗೆ ಹೇಳಿ ಕಳುಹಿಸಿ. ನಾವು ರೈಲಿನಲ್ಲಿ ಬೆಳಿಗ್ಗೆ ಹೋಗೋಣ. ಅವರು ಪಟ್ಟಣದ ಸ್ಟೇಷನ್ನಿಗೆ ಕಾರು ಕಳಿಸಲಿ."

"ಹಾಗಾದರೆ ಎಲೆಕ್ಟ್ರಿಕ್ ಆಫೀಸಿನವರೆಗೆ ನಾನೇ ಹೋಗಿ ಗೌಡರಿಗೆ ಸುದ್ದಿ ಕಳಿಸುತ್ತೇನೆ."

"ಹಾಗೇ ಮಾಡಿ. ಭರಮೇಗೌಡನನ್ನೂ ಲಕ್ಕಿಯನ್ನೂ ಜವರೇಗೌಡರ ಮನೆಗೆ ಬನ್ನಿ ಎಂದು ತಿಳಿಸಿ."

"ಆಗಬಹುದು."

ಮಾರನೆಯ ದಿನ ಮಧ್ಯಾಹ್ನ ಪಟ್ಟಣದ ರೈಲ್ವೆ ಸ್ಟೇಷನ್ನಿನ ಬಳಿಗೆ ಗೌಡರು, ಷರೀಫ್ ಸಾಹೇಬರು, ಶೇಷಪ್ಪ, ಡಾ. ಸುಂದರಂ ಬಂದು ಸಿದ್ಧವಾಗಿದ್ದರು.

ಮಾಧವರಾಯ, ರುಕ್ಮಿಣಿ ಶೇಷಪ್ಪನವರ ಮನೆಯಲ್ಲಿ ಇಳಿಯಲು ಏರ್ಪಾಟಾಗಿತ್ತು.

ಅವರ ಮನೆ ಸೇರಿದೊಡನೆಯೇ ರುಕ್ಮಿಣಿ ಸ್ನಾನ ಮಾಡಿ, ರಂಗನಾಥಸ್ವಾಮಿಯ ದೇವಾಲಯಕ್ಕೆ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬಂದಳು.

ಶೇಷಪ್ಪನವರಲ್ಲಿ ಮಾಧವರಾಯ ಊಟ ಮುಗಿಸಿದ; ರುಕ್ಮಿಣಿ ತನ್ನ ಕಟ್ಟಳೆಯ ಹಣ್ಣೂ ಹಾಲೂ ಸ್ವೀಕರಿಸಿದಳು. ಡಾ. ಸುಂದರಂ ಮನೆಗೆ ಹೋಗಿ ಎಲ್ಲರನ್ನೂ ನೋಡಿಕೊಂಡು ದಂಪತಿಗಳು ಜವರೇಗೌಡರ ಮನೆ ತಲುಪಿದರು.

ಜವರೇಗೌಡರ ಮನೆಯ ಮುಂದೆ ದೊಡ್ಡ ಚಪ್ಪರ. ಗೌಡಿತಿಯೇ ಹೊರಗೆ ಬಂದು, ರುಕ್ಮಿಣಿಯಮ್ಮನಿಗೆ ನಮಸ್ಕಾರ ಮಾಡಿ ಒಳಕ್ಕೆ ಕರೆದೊಯ್ದಳು. ಎಲ್ಲರಿಗೂ ಬಗೆಬಗೆಯ ಹಣ್ಣುಗಳು, ಹಾಲು ವಿನಿಯೋಗವಾಯಿತು. ಗೌಡಿತಿಯ ಬಲವಂತಕ್ಕೆ ರುಕ್ಮಿಣಿಯೂ ಸ್ವಲ್ಪ ಹಾಲು ಸೇವಿಸಿದಳು. ಗೌಡಿತಿ ತಟ್ಟೆಯಲ್ಲಿ ಸೊಗಸಾದ ಪೀತಾಂಬರವಿಟ್ಟು ತಂದು ರುಕ್ಮಿಣಿಗೆ ಒಪ್ಪಿಸಿದಳು. ರುಕ್ಮಿಣಮ್ಮ ಗೌಡರ ಮಕ್ಕಳನ್ನೆಲ್ಲಾ ಹತ್ತಿರ ಕರೆದು, ಸೇವರಿಸಿ, ಪ್ರೀತಿಯಿಂದ ಮಾತನಾಡಿಸಿದಳು.

ಗೌಡಿತಿ ಕಣ್ಣಲ್ಲಿ ಆನಂದಭಾಷ್ಪ ನಿಂತಿತ್ತು.

"ಅಮ್ಮಾವರು ನಮ್ಮ ಮನೆಗೆ ಬರಬೇಕೆಂದು ಎಷ್ಟೋ ದಿವಸಗಳಿಂದ ಹಂಬಲಿಸುತ್ತಿದ್ದೆವು. ಇವತ್ತು ನಮ್ಮ ಆಸೆ ನೆರವೇರಿತು. ಆದರೆ...."

"ನಾನಿಲ್ಲಿ ಊಟಮಾಡಲಿಲ್ಲವೆಂದು ವ್ಯಥೆಪಡುತ್ತೀಯಾ ತಂಗಿ?"

"ನಿಮಗೆ ಅನ್ನವಿಕ್ಕುವಷ್ಟು ಪುಣ್ಯ ನಮಗಿದೆಯೇ?"

"ನಾವು ತಿನ್ನುತ್ತಿರುವ ಅನ್ನವೇ ನಿನ್ನದು ತಂಗಿ. ನಿನ್ನ ಯಜಮಾನರು ನಮಗೆ ಮಾಡಿರುವ ಉಪಕಾರ ಮಾತಿನಿಂದ ವರ್ಣಿಸಲಾರೆ."

ರುಕ್ಮಿಣಿಯ ಬಳಿಗೆ ಬಂದು ಗೌಡಿತಿ

"ಅಮ್ಮಾ, ನನಗೊಂದು ಬುದ್ಧಿ ಮಾತು ಹೇಳುವುದಿಲ್ಲವೇ ?"

ಎಂದು ಕೇಳಿದಳು. ರುಕ್ಮಿಣಿ ಗೌಡಿತಿಯ ತಲೆ ನೇವರಿಸುತ್ತಾ

"ತಂಗಿ, ನಿನ್ನ ಮನೆಗೆ ನೀನು ಮಂಗಳಲಕ್ಷ್ಮಿಯಾಗಿದ್ದೀ. ನಿನಗೆ ನಾನು ಹೇಳುವುದೇನಿದೆ? ಹೆಣ್ಣು ಜನ್ಮದಲ್ಲಿ ಸುಖಕ್ಕಿಂತ ಕಷ್ಟ ಹೆಚ್ಚಾಗಿದೆ. ಸುಖದಲ್ಲಿ ಸುಖ ಕಾಣುವುದು ಸುಲಭ. ಕಷ್ಟದಲ್ಲಿ ಸುಖ ಕಾಣುವುದೇ ಹೆಣ್ಣು ಜನ್ಮದ ವೈಶಿಷ್ಟ್ಯ" ಎಂದಳು.

ಮಾಧವರಾಯ ಮೆಲ್ಲನೆ

"ರುಕ್ಕೂ, ಷರೀಫ್ ಸಾಹೇಬರ ಮನೆಗೂ ಹೋಗಿಬರಬೇಕಾಗಿದೆ"

ಎಂದ. ರುಕ್ಮಿಣಿ ಎದ್ದು ನಿಂತಳು.

ಗೌಡಿತಿ, ಅವಳ ಪರಿವಾರ ರುಕ್ಮಿಣಿಯನ್ನು ಪರಮಭಕ್ತಿಯಿಂದ ಬೀಳ್ಕೊಟ್ಟರು.

ಸಾಹೇಬರ ಮನೆಗೆ ಹೋಗುತ್ತಿರುವಂತೆ ಭರಮೇಗೌಡ, ಲಕ್ಕಿ ಬಂದು ಅಡ್ಡ ಬಿದ್ದು

"ಬೇಗ ಬರಾಕೆ ಆಗ್ಲಿಲ್ರವ್ವಾ – ಒಂದು ಕರ ತಪ್ಪಿಸಿಕೊಂಡಿತ್ತು."

ಎಂದ. ರುಕ್ಮಿಣಿ ನಗುತ್ತಾ

"ಚಿಂತೆಯಿಲ್ಲ. ಬಂದೆಯಲ್ಲ ಭರಮಣ್ಣ" ಎಂದಳು.

ಸಾಹೇಬರು ಮನೆಯನ್ನೆಲ್ಲಾ ಸ್ವಚ್ಛಮಾಡಿಸಿದ್ದರು. ಅವರ ಸಣ್ಣಮಗಳು ಆಶಾಬೀ ಬಂದು ರುಕ್ಮಿಣಿಯೊಬ್ಬಳನ್ನು ಒಳಗೆ ಕರೆದೊಯ್ದಳು.

ಷರೀಫ್ ಸಾಹೇಬರ ಬೇಗಂ, ಮಕ್ಕಳೆಲ್ಲರ ಪರಿಚಯ ಮಾಡಿಕೊಟ್ಟಳು. ರುಕ್ಮಿಣಿ ಅವರನ್ನು ಹರಸಿ

"ಒಬ್ಬರಿಗಿಂತ ಒಬ್ಬರು ತಿದ್ದಿದ ಬೊಂಬೆಗಳ ಹಾಗಿವೆಯಲ್ಲಮ್ಮ ಮಕ್ಕಳು."

"ಮಾಜಿ – ನಮ್ಮ ಮನೆಯಲ್ಲಿ ಸ್ವಲ್ಪ ಹಾಲು ತೆಗೆದುಕೊಳ್ಳಬಹುದೇ ?"

"ಯಾಕಾಗಬಾರದು ಜೀಗಂ. .ಊಟಮಾಡಿದರೂ ತಪ್ಪಿಲ್ಲ. ಆದರೆ ನಾನೊಂದು ಹಳೆಯ ಸಂಪ್ರದಾಯದಲ್ಲಿ ಬೆಳೆದುಬಿಟ್ಟೆ ತಂಗಿ. ಈಗ ಬದಲಾಯಿಸುವುದಕ್ಕೆ ತೊಂದರೆಯಾಗುತ್ತದೆ."

"ಬೇಡಿಯಮ್ಮ. ಅಂಥ ಮಾತು ನಿಮಗೆ ನಾನು ಹೇಳಲಾರೆ. ದೊಡ್ಡ ಮನಸ್ಸು ಮಾಡಿ ನೀವು ನಮ್ಮ ಮನೆಗೆ ಬಂದಿರಲ್ಲಾ – ಅದೇ ನನ್ನ ಭಾಗ್ಯ"

ಎಂದು ತಟ್ಟೆಯ ತುಂಬ ಹಣ್ಣು ತಂದಿತ್ತಳು.

ರುಕ್ಮಿಣಿ ಒಬ್ಬಳೇ ಹೋಗಿ ಹಳೆಯ ಕೆಲವು ಪರಿಚಯಸ್ಥರನ್ನು ಕಂಡು ಶೇಷಪ್ಪನವರ ಮನೆಗೆ ಬಂದಳು.

ಭರಮೇಗೌಡ, ಲಕ್ಕಿ ಅವಳಿಗಾಗಿ ಕಾದಿದ್ದರು. ರುಕ್ಮಿಣಿ ಲಕ್ಕಿಯನ್ನು ಹತ್ತಿರ ಕರೆದು ಅವಳಿಗೆ ತನ್ನ ಸೀರೆಯೊಂದನ್ನು ಕೊಟ್ಟು

"ಮಕ್ಕಳೆಲ್ಲಾ ಚೆನ್ನಾಗಿದ್ದಾರೇನೇ ಲಕ್ಕಿ" ಎಂದಳು.

"ಚಂದಾಕವ್ರವ್ವಾ"

ಎಂದು ಲಕ್ಕಿ ಹೇಳಿದಳು.

ಸಂಜೆಯಾಗುತ್ತ ಬಂದಿತ್ತು.

ಮಾಧವರಾಯ, ರುಕ್ಮಿಣಿ ಎಲ್ಲರ ಅಪ್ಪಣೆ ಪಡೆದು, ಷರೀಫ್ ಸಾಹೇಬರ ಕಾರಿನಲ್ಲಿ ಮಂಡ್ಯಕ್ಕೆ ಹಿಂದಿರುಗಿದರು.

ಮಾಧವರಾಯ ತೃಪ್ತಿಯನ್ನು ವ್ಯಕ್ತಪಡಿಸುತ್ತಾ

"ಪಟ್ಟಣಕ್ಕೆ ಹೋಗಿ ಬಂದುದು ಒಳ್ಳೆಯದಾಯಿತು ರುಕ್ಕೂ. ಗೌಡರೆಲ್ಲಿ ನಮ್ಮ ವಿಷಯ ತಪ್ಪು ತಿಳಿದುಕೊಳ್ಳುವರೋ ಎಂದು ಭಯವಾಗಿತ್ತು" ಎಂದ.

ಮಾರನೆಯ ದಿನ ಬೆಂಗಳೂರಿನಿಂದ ಒಬ್ಬೊಬ್ಬರಾಗಿ ಬರಲಾರಂಭಿಸಿದರು. ಸಂಜೆಯ ವೇಳೆಗೆ ಪದ್ಮ, ಸರ್ವೋತ್ತಮ, ಶ್ರೀದೇವಿ, ರಾಮು, ಕಮಲ, ಮಕ್ಕಳು ಎಲ್ಲರೂ ಬಂದರು.

ಶುಕ್ರವಾರ ರುಕ್ಮಿಣಿಯೇ ಪೂಜೆ ಮಾಡಿ ಎಲ್ಲರಿಗೂ ತೀರ್ಥ ಪ್ರಸಾದ ಕೊಟ್ಟಳು. ಅಂದಿನ ಸಮಾರಾಧನೆಗೆ ಮನೆಯ ಮುಂದಿ

ಯಲ್ಲದೆ ಊರಿನ ಹಲವರಿಗೂ ಆಹ್ವಾನ ಹೋಗಿತ್ತು.

ಎಲ್ಲರ ಊಟ ಮುಗಿದರೂ ನಾರಾಯಣಸ್ವಾಮಿ ಬರಲಿಲ್ಲ. ರುಕ್ಮಿಣಿ ಹೊರಬಾಗಿಲವರೆಗೆ ಹೋಗಿ ಬಂದು

" ನಾಣಿ ಬರಲಿಲ್ಲ "

ಎಂದು ನಿಟ್ಟುಸಿರುಬಿಟ್ಟಳು.

ಮನೆಯಲ್ಲಿ ಕೋಲಾಹಲವೋ ಕೋಲಾಹಲ. ಗೋದಮ್ಮನವರು ಮಾತ್ರ ಗಂಭೀರಮುದ್ರೆ ತಾಳಿಬಿಟ್ಟಿದ್ದರು. ರುಕ್ಮಿಣಿ ಎಲ್ಲರ ಜತೆ ನಕ್ಕು, ನರಸವಾಗಿ ಮಾತನಾಡುತ್ತಿದ್ದಳು.

ರಾತ್ರಿ ಎಲ್ಲರೂ ಬಹಳ ಹೊತ್ತು ಮಾತನಾಡುತ್ತಿದ್ದು ಮಲಗಿದರು.

ರುಕ್ಮಿಣಿ ರಾತ್ರಿ ಕಣ್ಮುಚ್ಚಲಿಲ್ಲ. ಎದೆ ನೋಯುವುದಕ್ಕಾರಂಭವಾಗಿತ್ತು. ಗಟ್ಟಿಯಾಗಿ ನರಳಿದರೆ ಎಲ್ಲಿ ಗಂಡನಿಗೆ ಎಚ್ಚರವಾಗುವುದೋ ಎಂದು ನೋವನ್ನಡಗಿಸಿಕೊಳ್ಳುತ್ತಿದ್ದಳು.

ಬೆಳಗಾಗುವವದನ್ನೇ ಕಾಯುತ್ತಿದ್ದ ರುಕ್ಮಿಣಿ ಮೊದಲನೆಯ ಕೋಳಿ ಕೂಗಿನೊಡನೆಯೇ ಎದ್ದು ತಾನೇ ನೀರು ಕಾಸಿ ಸ್ನಾನಮಾಡಿ, ಹೂಗಳನ್ನಾರಿಸಿಕೊಂಡು ಬಂದು ಪೂಜೆಗೆ ಕುಳಿತಳು.

ಅವಳು ಪೂಜೆ ಮುಗಿಸಿ ಏಳುವಷ್ಟರಲ್ಲಿ ಮನೆ ಮಂದಿಯೆಲ್ಲಾ ಎದ್ದಿದ್ದರು.

ಗೋದಮ್ಮನವರಿಗೆ ಅಂದು ಮನೆಗೆಲಸದಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಎಲ್ಲಿದ್ದರೂ ಅವರ ಚಿತ್ತವೆಲ್ಲಾ ರುಕ್ಮಿಣಿಯ ಮೇಲೇ ಇತ್ತು.

ಪೂಜೆ ಮುಗಿಸಿಕೊಂಡು ಬಂದ ರುಕ್ಮಿಣಿ ತೊಟ್ಟಿಯಲ್ಲಿದ್ದ ಚಾಪೆಯ ಮೇಲೆ ಮಲಗಿಕೊಂಡಳು. ಪದ್ಮ ತಾಯಿಯ ಬಳಿಗೆ ಬಂದು

" ಏಕಮ್ಮ ಮಲಗಿ ಬಿಟ್ಟೆ ?" ಎಂದು ಕೇಳಿದಳು.

" ಸುಮ್ಮನೆ ಮಲಗಿದೆ ಪದ್ಮ – ಅಮ್ಮ ಏನು ಮಾಡುತ್ತಿದ್ದಾರೆ ?"

" ಉಪ್ಪಿಟ್ಟು ಮಾಡುತ್ತಿದ್ದಾಳಮ್ಮ."

"ಉಪ್ಪಿಟ್ಟು ನೀವೇ ಯಾರಾದರೂ ಮಾಡಿ – ಅಮ್ಮನನ್ನು ಸ್ವಲ್ಪ ಕಳುಹಿಸು."

ಪದ್ಮ ಹೇಳಿದುದನ್ನು ಕೇಳಿ ಗೋದಮ್ಮನವರು ಕೈಯಲ್ಲಿದ್ದ ಮಗುಚುವಕ್ಕೆ ಭಾಣಲೆಯಲ್ಲಿಯೇ ಬಿಟ್ಟು ರುಕ್ಮಿಣಿಯ ಬಳಿಗೆ ಧಾವಿಸಿ ಬಂದರು.

ರುಕ್ಮಿಣಿ ಕಣ್ಣೆತ್ತಿ ನೋಡಿ

"ಅಮ್ಮ – ಬಂದಿರಾ ?" ಎಂದಳು.

"ಏಕೆ ರುಕ್ಕೂ—ಏನಾಗುತ್ತಿದೆಯಮ್ಮ ?"

"ಅವರೆಲ್ಲಿ ?"

"ಆಫೀಸಿನಲ್ಲಿದ್ದಾನೆ."

"ಸ್ವಲ್ಪ ಕರೆಯುವಿರಾ ?"

ಗೋದಮ್ಮನವರೇ ಮಾಧವರಾಯನನ್ನು ಕರೆದುಕೊಂಡು ಬಂದರು.

ಮಾಧವರಾಯ ಹೆಂಡತಿಯ ಸಮೀಪದಲ್ಲಿ ಕುಳಿತು,

"ಏನಾಗುತ್ತಿದೆ ರುಕ್ಕೂ – ಅಮ್ಮ ಇಷ್ಟು ಗಾಬರಿಯಾಗಿದ್ದಾಳೆ."

"ಏನೂ ಇಲ್ಲ. ಪಾಪ ಮುಂದೆ ನೀಡಿ."

ಮಾಧವರಾಯ ಅನುಮಾನಿಸಿದ. ಗೋದಮ್ಮನವರು ಮಗನಿಗೆ ಕಣ್ಸನ್ನೆ ಮಾಡಿದರು.

ರುಕ್ಮಿಣಿ ಗಂಡನ ಪಾದದ ಮೇಲೆ ತಲೆಯಿಟ್ಟು ನಮಸ್ಕರಿಸಿ

"ಈ ಪಾದಸೇವೆ ಮಾಡುವ ಪುಣ್ಯ ಇವತ್ತಿಗೆ ಮುಗಿಯಿತು—ಜನ್ಮಜನ್ಮಕ್ಕೂ ನಿಮ್ಮ ಪಾದಸೇವೆ ಮಾಡುವ ಪುಣ್ಯ ಲಭಿಸಲೆಂದು ಆಶೀರ್ವಾದ ಮಾಡಿ."

ಮಾಧವರಾಯನ ದುಃಖದ ಕಟ್ಟೆಯೊಡೆಯಿತು. ಅವನ ರೋದನ ಕೇಳಿ ಮನೆ ಮಂದಿಯೆಲ್ಲಾ ಬಂದು ಮುತ್ತಿಕೊಂಡರು.

"ನೀನು ಜೀವನ್ಮುಕ್ತೆ ರುಕ್ಕೂ – ನಿನಗಿನ್ನು ಜನ್ಮವಿಲ್ಲ"

ಎಂದು ಮಾಧವರಾಯ ಬಹು ಪ್ರಯಾಸದಿಂದ ನುಡಿದ.

ರುಕ್ಮಿಣಿ ಅತ್ತೆಯ ಕಡೆ ತಿರುಗಿ ಅವರ ಪಾದಗಳನ್ನು ಮುಟ್ಟಿ ನಮಸ್ಕರಿಸಿ

" ಅಮ್ಮ - ತಿಳಿಯದೆ ಏನಾದರೂ ಅಪರಾಧ ಮಾಡಿದ್ದರೆ ಕ್ಷಮಿಸಿ "

ಎಂದಳು. ಗೋದಮ್ಮನವರು ಬಿಕ್ಕಿಬಿಕ್ಕಿ ಅಳುತ್ತಾ ರುಕ್ಮಿಣಿಯ ತಲೆಯನ್ನೆತ್ತಿ ತಮ್ಮ ತೊಡೆಯ ಮೇಲಿಟ್ಟುಕೊಂಡರು.

ರುಕ್ಮಿಣಿ ಸುತ್ತ ಕಣ್ಣು ಹೊರಳಿಸಿ ಅಳುತ್ತ ನಿಂತಿದ್ದ ಮಕ್ಕಳು, ಅಳಿಯ, ಮೊಮ್ಮಕ್ಕಳು ಎಲ್ಲರನ್ನೂ ನೋಡಿ

" ಅಳಬೇಡಿ. ನಿಮ್ಮನ್ನೆಲ್ಲಾ ಭಗವಂತ ಕಾಪಾಡುತ್ತಾನೆ "

ಎನ್ನುತ್ತಾ ಗಂಡನಿಗೆ

" ನಾಣಿ ಬರಲಿಲ್ಲ - ಬಂದರೆ ಅಮ್ಮ ನಿನ್ನ ಆಶೀರ್ವದಿಸಿದ್ದಾಳೆ ಎಂದು ಹೇಳಿ "

ಎನ್ನುತ್ತಾ ಅತ್ತೆಯ ಕಡೆ ತಿರುಗಿ

" ಅಮ್ಮ - ಗಂಗಾಮೃತ ಬಾಯಿಗೆ ಹಾಕಿ "

ಎಂದಳು. ಗೋದಮ್ಮನವರು ಮೆಲ್ಲನೆದ್ದರು. ಕಮಲ ಕುಳಿತು ಕೊಂಡು ತಾಯಿಯ ತಲೆಯನ್ನು ತೊಡೆಯಮೇಲೆ ಮಲಗಿಸಿಕೊಂಡಳು.

ಗೋದಮ್ಮನವರು ಗಂಗೆಥಾಲಿಯನ್ನೊಡೆದು ರುಕ್ಮಿಣಿಯ ಬಾಯಿಗೆ ಗಂಗಾಮೃತ ಹಾಕಿದರು.

ರುಕ್ಮಿಣಿಯು ಪ್ರಯಾಸದಿಂದ ಅದನ್ನು ನುಂಗಿ ಪತಿಯನ್ನು ದಿಟ್ಟಿಸಿನೋಡುತ್ತಾ ಕಣ್ಣುಮುಚ್ಚಿದಳು.

— ನಂದನವನದಂತಿದ್ದ ಮನೆಯಲ್ಲಿ ಒಂದೇ ಕ್ಷಣದಲ್ಲಿ ಶೋಕ ಕಾಳ್ಗಿಚ್ಚಿನಂತೆ ಹಬ್ಬಿತು.

* * * *

ಊರಿನಲ್ಲಿ ಸುದ್ದಿ ಕಾಳ್ಗಿಚ್ಚಿನಂತೆ ವ್ಯಾಪಿಸಿತು. ತಂಡೋಪ ತಂಡವಾಗಿ ಜನ ಮಾಧವರಾಯನ ಮನೆಗೆ ಬರಲಾರಂಭಿಸಿದರು. ಊರಿನ ವರ್ತಕರೆಲ್ಲಾ ಅಂಗಡಿಯ ಬಾಗಿಲು ಮುಚ್ಚಿದರು. ಸಕ್ಕರೆ

ಕಂಪೆನಿಯ ಕೆಲಸವೂ ನಿಂತುಹೋಯಿತು.

ಊರಿನ ಸಣ್ಣವರು, ದೊಡ್ಡವರು, ಗಂಡಸರು, ಹೆಂಗಸರು, ಮಕ್ಕಳು, ಎಲ್ಲರೂ ತಾಯಿಯ ಅಂತಿಮದರ್ಶನಕ್ಕೆ ಧಾವಿಸಿ ಬಂದರು.

ಸರ್ವೋತ್ತಮ ಕೂಡಲೆ ನಾರಾಯಣಸ್ವಾಮಿಗೆ ಎಕ್ಸ್‌ಪ್ರೆಸ್ ಟೆಲಿಗ್ರಾಮ್ ಕೊಟ್ಟುಬಂದ.

ಮಾಧವರಾಯನನ್ನು ಸಂತೈಸಲು ಪದ್ಮನಾಭಯ್ಯ, ರಮಣಯ್ಯ, ಕರಿಯಪ್ಪಗೌಡರು ಬಂದರು. ಮಾಧವರಾಯ ಅವರ ಕಡೆ ತಿರುಗಿ

" ಜವರೇಗೌಡರಿಗೆ ಯಾರಾದರೂ ಸುದ್ದಿ ತಿಳಿಸಿಬಿಡಿ " ಎಂದ.

ಕರಿಯಪ್ಪಗೌಡರು ಸ್ಟೇಷನ್ನಿಗೆ ಹೋಗಿ, ಪಟ್ಟಣದ ಸ್ಟೇಷನ್ ಮಾಸ್ಟರಿಗೆ ಫೋನ್ ಮಾಡಿಸಿ ಬಂದರು.

ಮಧ್ಯಾಹ್ನವಾಯಿತು. ಜನ ಬಂದು ಬಂದು ರುಕ್ಮಿಣಿಯನ್ನು ಅರಿಶಿನ, ಕುಂಕುಮ, ಹೂಗಳಿಂದ ಪೂಜಿಸಿ ಹೋಗುತ್ತಿದ್ದರು. ತಮ್ಮ ಪುರದ ಪುಣ್ಯದೇವತೆಯನ್ನು ಕಳುಹಿಸಿ ಬಿಡಲು ಯಾರೂ ಯೋಚಿಸುವಂತಿರಲಿಲ್ಲ.

ಜವರೇಗೌಡರು, ಪಟ್ಟಣದ ಸಮಸ್ತ ಗೆಳೆಯರೊಂದಿಗೆ ಬಂದರು. ಅವರಿಗೆ ಸಮಾಧಾನ ಹೇಳಲು ಯಾರಿಗೂ ಧೈರ್ಯವಾಗಲಿಲ್ಲ. ಪದ್ಮನಾಭಯ್ಯನವರು ಮನಸ್ಸು ಗಟ್ಟಿಮಾಡಿಕೊಂಡು

" ಗೌಡರೇ ನೀವೇ ಹೀಗೆ ಅಧೀರರಾದರೆ ಮಾಧವರಾಯರಿಗೆ ಸಮಾಧಾನ ಹೇಳುವವರು ಯಾರು. ಹೊತ್ತು ಮೀರುತ್ತಿದೆ. ಮಕ್ಕಳು ಹಸಿದು ಕುಳಿತಿವೆ. ಮುಂದಿನ ಕಾರ್ಯ ಯೋಚಿಸಬೇಡವೇ ? "

" ಇಲ್ಲ ಸ್ವಾಮಿ – ನಮ್ಮಮ್ಮನ್ನ ನಾನು ಕಳಿಸಲಾರೆ – ಕಳಿಸಲಾರೆ " ಎಂದು ಚೀರಿದರು.

ಷರೀಫ್ ಸಾಹೇಬರು ಮೂಕಪಶುವಿನಂತೆ ದುಃಖಿಸುತ್ತ ನಿಂತಿದ್ದರು.

ಪದ್ಮನಾಭಯ್ಯನವರು ಸರ್ವೋತ್ತಮನನ್ನು ಹತ್ತಿರ ಕರೆದು "ನಾರಾಯಣಸ್ವಾಮಿ ಬರಲಿಲ್ಲವೇ" ಎಂದು ಕೇಳಿದರು.

"ಇನ್ನೂ ಬಂದಿಲ್ಲ."

"ರುಕ್ಮಿಣಮ್ಮನವರ ಜೀವಜ್ಯೋತಿ, ಪರಂಜ್ಯೋತಿಯೊಂದಿಗೆ ಸೇರಿಹೋಗಿದೆ. ಇಲ್ಲಿರುವುದು ಜಡಶರೀರ – ಇದಕ್ಕಾಗಿ ದುಃಖ ಪಡುವುದೆಂದರೇನು? ಹೊತ್ತು ಮೀರುತ್ತಿದೆ. ಮುಂದಿನ ಕೆಲಸಕ್ಕೆ ಅವಸರ ಮಾಡಬೇಕಪ್ಪಾ."

ಯಾರೂ ಮುಂದಡಿಯಿಡಲು ಸಿದ್ಧವಾಗಿರಲಿಲ್ಲ.

ಪದ್ಮನಾಭಯ್ಯನವರೇ ಮುಂದಾಳುತನ ವಹಿಸಬೇಕಾಯಿತು. ತಮ್ಮ ಆಳನ್ನು ಕರೆದು ವಾಹಕರಿಗೆ ಹೇಳಿ ಕಳಿಸಿದರು.

ನಾಲ್ಕು ಗಂಟೆಯ ವೇಳೆಗೆ 'ಅಂತಿಮಯಾತ್ರೆ'ಯ ಸಿದ್ಧತೆ ಯಾಯಿತು. ಪದ್ಮನಾಭಯ್ಯನವರು ಅಧಿಕಾರವಾಣಿಯನ್ನು ಪಯೋಗಿಸಿಯೇ ರುಕ್ಮಿಣಿಯ ಪಾರ್ಥಿವ ಶರೀರವನ್ನು ಹೊರಗೆ ಸಾಗಿಸಬೇಕಾಯಿತು.

ನಾಲ್ಕುಗಂಟೆಗೆ ಹೊರಟ ಮೆರವಣಿಗೆ ರುದ್ರಭೂಮಿ ಮುಟ್ಟುವ ವೇಳೆಗೆ ಆರು ಗಂಟೆಯಾಯಿತು. ದಾರಿಯುದ್ದಕ್ಕೂ ಕುಂಕುಮಾರ್ಚನೆ, ಪುಷ್ಪಪೂಜೆ.

ಷರೀಫ್ ಸಾಹೇಬರ ತಮ್ಮ ಮುನ್ನಾನ್ ಒಂದು ಕಾರಿನ ತುಂಬ ಶ್ರೀಗಂಧದ ಕೊರಡು, ಚಕ್ಕೆಗಳನ್ನು ತಂದು ರುದ್ರಭೂಮಿಯಲ್ಲಿ ಸುರಿದಿದ್ದ.

ಚಿತೆಯೂ ಸಿದ್ಧವಾಯಿತು.

ರುಕ್ಮಿಣಿಯ ಪಾರ್ಥಿವ ಶರೀರವನ್ನು ಚಿತೆಯಮೇಲಿಡಲಾಯಿತು. ಅದಕ್ಕೆ ಸರ್ವೋತ್ತಮನೇ ಅಗ್ನಿಸ್ಪರ್ಶ ಮಾಡಿಸಬೇಕಾಗಿತ್ತು.

ದೂರದಲ್ಲಿ ಧಾವಿಸಿ ಬರುತ್ತಿದ್ದ ಒಂದು ಕಾರು ಕಂಡು

ಸರ್ವೋತ್ತಮ ಸ್ತಬ್ಧನಾಗಿ ನಿಂತ.

ಪದ್ಮನಾಭಯ್ಯನವರು ಆಶ್ಚರ್ಯದಿಂದ "ಅಗೋ! ನಾರಾಯಣ ಸ್ವಾಮಿ" ಎಂದರು.

ಕಾರು ನಿಂತಿತು. ರುದ್ರಭೂಮಿಯೊಳಗೆ ನಾರಾಯಣಸ್ವಾಮಿ ಓಡುತ್ತ ಬಂದ.

ತಾಯಿ – ರುಕ್ಮಿಣಿ – ಕಟ್ಟಿಗೆ ಹಾಸಿನ ಮೇಲೆ ಪವಡಿಸಿದ್ದಳು. ಅದೇ ಶಾಂತಿ – ಅದೇ ಗಾಂಭೀರ್ಯ – ಅದೇ ದಿವ್ಯ ತೇಜಸ್ಸು. ಕುಂಕುಮಾರ್ಚನೆಗೊಂಡಿದ್ದ ತಾಯಿ ಸಂಧ್ಯಾದೇವಿಯಂತೆ ಶೋಭಿಸುತ್ತಿದ್ದಳು.

ನಾರಾಯಣಸ್ವಾಮಿ ಚಿತೆಯ ಬಳಿಗೆ ಬಂದು

"ಅಮ್ಮ – ಅಮ್ಮ" ಎಂದು ಚೀರಿದ.

ಸರ್ವೋತ್ತಮ ಅವನನ್ನು ಅಪ್ಪಿ ಹಿಡಿದ.

ಜವರೇಗೌಡರು ಬಂದು, ಅವನನ್ನು ಅಪ್ಪಿಕೊಂಡು ಸಂತೈಸಿದರು.

"ಅಯ್ಯೋ! ಅಮ್ಮನ ಮುಖ ಕೂಡ ಸಿಕ್ಕಲಿಲ್ಲವಲ್ಲಾ!"

ಮಾಧವರಾಯ ಮಗನ ಬಳಿ ಬಂದು ಅವನ ಕೈಹಿಡಿದುಕೊಂಡ. ನಾರಾಯಣಸ್ವಾಮಿ ತಂದೆಯ ಹೆಗಲಮೇಲೆ ತಲೆಯಿಟ್ಟು

"ಅಣ್ಣಾ – ಅಣ್ಣಾ – ಅಮ್ಮ ನಿಜವಾಗಿ ಹೋಗಿಬಿಟ್ಟಳೇ – ಅಮ್ಮನನ್ನು ನಾನು ನೋಡಲಾರೆನೇ–ಅವಳು ಮಾತಾಡುವುದಿಲ್ಲವೇ?"

"ನಿನ್ನ ಆಶೀರ್ವಾದ ಮಾಡಿ ಹೋಗಿದ್ದಾಳೆ ನಾಣಿ."

ಪದ್ಮನಾಭಯ್ಯನವರು ನಾಣಿಯ ಕೈಗೆ ಉರಿಯುವ ಕೊಳ್ಳಿಯಿತ್ತು

"ನಾರಾಯಣಸ್ವಾಮಿ, ದುಃಖಿಸಿ ಏನಪ್ಪಾ ಪ್ರಯೋಜನ? ತಾಯಿಗೆ ಕೊನೆಯ ಸೇವೆ ಸಲ್ಲಿಸಿಬಿಡು" ಎಂದರು.

ನಾಣಿಗೆ ಸ್ಥೈರ್ಯ ಸಾಲದಾಯಿತು. ಸರ್ವೋತ್ತಮ ಅವನ ಕೈಹಿಡಿದು ಚಿತೆಗೆ ಅಗ್ನಿಸ್ಪರ್ಶ ಮಾಡಿಸಿದ.

ಜನಜಂಗುಳಿ 'ಅಯ್ಯೋ ಅಮ್ಮ' ಎಂದು ಚೀರಿತು.

ದಿಗಂತದಲ್ಲಿಯೂ ಅದೇ ಪ್ರತಿಧ್ವನಿ

"**ಅಮ್ಮ – ಅಮ್ಮ – ಅಮ್ಮ.**"

ಗಂಧದ ಕೊರಡಿನ ಸುಗಂಧ ನಾಲ್ಕು ಮೂಲೆಗೂ ವ್ಯಾಪಿಸಿತು. ಚಿತೆಯಿಂದ ಚಿಮ್ಮಿದ ಬೆಳಕು ರುದ್ರಭೂಮಿಯನ್ನು ಬೆಳಗಿಸಿತು.

ರುಕ್ಮಿಣಿಯ ದಿವ್ಯಜೀವನದ ಬೆಳಕು ಇಡಿಯ ವಿಶ್ವವನ್ನೇ ಬೆಳಗಿಸಿತು.

